ಬರೆದು ಓದುಗರ ಕೈಯಲ್ಲಿ ಕೊಟ್ಟಿದ್ದೇನೆ. ಈ ವಚನಗಳು ತ್ರಿಪದಿಯಲ್ಲಿ ಬರೆಯಲ್ಪಟ್ಟಿವೆ. ಕನ್ನಡ ಸಾಹಿತ್ಯದಲ್ಲಿ ತ್ರಿಪದಿಗೆ ಒಂದು ಶಾಶ್ವತವಾದ ಸ್ಥಾನವನ್ನು ಕಲ್ಪಿಸಿಕೊಟ್ಟ ಶ್ರೇಯಸ್ಸು ಸರ್ವಜ್ಞನಿಗೇ ಸಲ್ಲತಕ್ಕದ್ದು. ಸರ್ವಜ್ಞ ಕವಿಯು ವಚನಕಾರರ ಪರಂಪರೆಗೆ ಸೇರಿದವನು. ವಿಚಾರ ಸ್ವಾತಂತ್ರ್ಯ, ಸತ್ಯದಲ್ಲಿರುವ ಪ್ರೀತಿ ಮತ್ತು ಭಕ್ತಿ, ನ್ಯಾಯನಿಷ್ಠುರತೆ ಮೊದಲಾದವುಗಳು ಇವನ ಕವಿತೆಯಲ್ಲಿ ಎದ್ದು ಕಾಣುವವು. ಆಧ್ಯಾತ್ಮಿಕ ವಿಷಯಗಳನ್ನು ಕೂಡ ಸರಳ ಕನ್ನಡದಲ್ಲಿ ಇವನು ವಿವರಿಸಿದ್ದಾನೆ. ಧರ್ಮ, ಅರ್ಥ, ಕಾಮ ಮೋಕ್ಷಗಳ ರಹಸ್ಯವನ್ನು ಸ್ವಾರಸ್ಯವಾಗಿ ಬೋಧಿಸಿದ್ದಾನೆ. ಅನ್ನವೇ ದೈವವೆಂದೂ ಈವನೇ ದೇವನೆಂದೂ, ಹೆಣ್ಣು ಕಾಮ ಸಾಧನವೆಂದೂ ; ದೇಹವೇ ದೇವಾಲಯವೆಂದೂ ಜೀವನವೇ ಲಿಂಗವೆಂದೂ ಮುಕ್ತಿಯ ಇರವು ನಿರ್ಭಯವೆಂದೂ ಸ್ವರ್ಗದಲ್ಲಿ ಸುಂಕ ಮತ್ತು ಹೊಲಗೇರಿಗಳಿಲ್ಲವೆಂದೂ ಸಾರಿದ ಭಕ್ತನಿವನು.

ಸಾಹಿತ್ಯ ದೃಷ್ಟಿಯಿಂದ ನೋಡಿದರೆ ಸರ್ವಜ್ಞನ ವಚನಗಳಲ್ಲಿ ಮೂಡಿದ ಔಚಿತ್ಯ, ಉಪಮೆಯ ಸಮರ್ಪಕತೆ, ದೃಷ್ಟಾಂತದ ಸಮೀಪತೆ, ಅನುಭವದ ವಿಶಾಲತೆ, ಅವಲೋಕನದ ಸೂಕ್ಷ್ಮತೆ ಇವೇ ಮೊದಲಾದವುಗಳು ಒಳ್ಳೇ ಸ್ವಾರಸ್ಯವಾಗಿ ಗೋಚರಿಸುವವು. ಕನ್ನಡ ಸಾಹಿತ್ಯದಲ್ಲಿ ಸರ್ವಜ್ಞನ ವಚನಗಳೆಂದರೆ ಕೋಕಿಲಾಲಾಪದಿಂದೊಡಗೂಡಿದ ಉದ್ಯಾನದಂತೆ, ದುಂಬಿಗಳ ಝುಂಕಾರದಿಂದೊಡಗೂಡಿದ ಪುಷ್ಪವನದಂತೆ, ಮೃದುಮಧುರ ನುಡಿಗಳನ್ನಾಡುತ್ತಿರುವ ಮುದ್ದು ಮಕ್ಕಳಾಡುತ್ತಿರುವ ಸಿರಿವಂತರ ಪ್ರಸಾದದಂತೆ, ರಸಿಕ ವಿದೂಷಕನಿದ್ದ ನಾಟಕದಂತೆ ಎಂದು ಹೇಳಬಹುದು. ಈ ತ್ರಿಪದಿಗಳಲ್ಲಿ ರೂಪಕ, ಯಮಕ, ಉಪಮೆ

...ಲ್ಲಿ ಗೋಚರಿಸುವ ಅಲಂಕಾರಗಳನ್ನು ನಾವು ಕಾಣಬಹುದು. ಶೃಂಗಾರ ಬೀಭತ್ಸ, ಮತ್ತು ಅದ್ಭುತರಸಗಳಿದ್ದರೂ ಹಾಸ್ಯರಸಕ್ಕೆ ಹೆಚ್ಚಿನ ಸ್ಥಾನವನ್ನು ಸರ್ವಜ್ಞನು ಕೊಟ್ಟಿದ್ದಾನೆ.

ಸರ್ವಜ್ಞನು ಅಶುಕವಿ. ಅಂದರೆ ಯಾವುದಾದರೊಂದು ವಿಷಯ ನೋಡಿದೊಡನೆ, ಕೇಳಿದೊಡನೆ ಅದರ ಮೇಲೊಂದು ತ್ರಿಪದಿಯನ್ನು ಹಾಡುವನು. ಇವನು 'ಹಲಿಗೆ ಬಳಪವ ಪಡಿದ'ವನಲ್ಲ 'ಬರೆಬರೆದಂತೊಡೆದು ತೊಟ್ಟನೆ ನಿಟ್ಟುಸಿ ಕಷ್ಟಪಟ್ಟವನಲ್ಲ.' ವಚನಗಳೆಲ್ಲವನ್ನೂ ಇವನು ಒಂದೇ ಕಾಲದಲ್ಲಿ ಒಂದೇ ಸ್ಥಳದಲ್ಲಿ ಅಂದವನಲ್ಲ. ದೇಶಾಟನದಲ್ಲಿ ಸದಾ ಕಾಲದಲ್ಲಿ ಇದ್ದವನಾದುದರಿಂದ ಅಲ್ಲಲ್ಲಿ ನೋಡಿದ ಅನುಭವಿಸಿದ ವಿಷಯಗಳನ್ನು ಅಲ್ಲಲ್ಲಿಯ ಗ್ರಾಮೀಣ ಶಬ್ದ ಪ್ರಯೋಗಗಳನ್ನು ಮಾಡಿ ಹೇಳುವನು. ಎಲ್ಲ ತ್ರಿಪದಿಗಳು ಸರಳವೂ ಸಹಜವಾಗಿಯೂ ಬಂದಿವೆ.

ಇಂತಹ ಉಜ್ವಲ ಮೂರ್ತಿಯಾದ ಸರ್ವಜ್ಞನ ಕಾಲ, ಮತ, ಜನನ, ಜೀವನ, ಸಂದೇಶ ಮತ್ತು ವ್ಯಕ್ತಿತ್ವಗಳ ಬಗ್ಗೆ ತಿಳಿದುಕೊಳ್ಳುವದು ಸಹಜವಾದುದು. ಸರ್ವಜ್ಞನು ಸಮಾಗು ೧೬ನೇ ಶತಮಾನದಲ್ಲಿರಬಹುದೆಂದು ದಿ. ಉತ್ತಂಗಿ ಚನ್ನಪ್ಪನವರು ಅಭಿಪ್ರಾಯಪಡುತ್ತಾರೆ. ಆದರೆ ನಿಶ್ಚಿತಕಾಲವು ಇನ್ನೂ ಸರಿಯಾಗಿ ತಿಳಿದುಬಂದಿಲ್ಲ. ಇವನ ಜನನದ ಬಗ್ಗೆ ಒಂದು ಸ್ವಾರಸ್ಯವಾದ ಕಥೆಯಿದೆ. ಧಾರವಾಡ ಜಿಲ್ಹೆಯ ಮಾಸೂರ ಗ್ರಾಮದಲ್ಲಿ ವಾಸಿಸುತ್ತಿರುವ ಒಳ್ಳೇ ಕರ್ಮಾನುಷ್ಠಾನವುಳ್ಳ ಬ್ರಾಹ್ಮಣನು ಸಂಸಾರ ಹೂಡಿಕೊಂಡು ಎಷ್ಟೋಕಾಲ ಗತಿಸಿದರೂ ಅವನಿಗೆ ದೇವರು ಸಂತಾನವನ್ನು ಕೊಟ್ಟಿರಲಿಲ್ಲ. ಆದರಿಂದ ದುಃಖಿತನಾಗಿ ಕಾಶೀ ಯಾತ್ರೆಯನ್ನು ಕೈಕೊಂಡನು. ಅಲ್ಲಿ ಕಾಶೀ ವಿಶ್ವನಾಥನನ್ನು ಅಖಂಡವಾಗಿ ಸೇವಿಸಿದನು. ವಿಶ್ವನಾಥನು ಪ್ರೀತನಾಗಿ ಆ ಬ್ರಾಹ್ಮಣನ ಸ್ವಪ್ನದಲ್ಲಿ ಬಂದು "ನಿನ್ನಿಂದ ಒಂದು ದಿವ್ಯ ಜೀವಜ್ಯೋತಿಯು ಭೂಮಿಗಿಳಿಯುವದು" ಎಂದು ಹೇಳಿದಂತಾಯಿತು. ಬ್ರಾಹ್ಮಣನು ಪರಮ ಸಂತೋಷಭರಿತನಾಗಿ ಊರಿಗೆ ಹೊರಟನು. ಈ ದಿನ ರಾತ್ರಿಯೊಳಗಾಗಿ ತನ್ನ ಊರು ಮುಟ್ಟದರೆ ನಿರ್ಧಿಷ್ಟಪಡಿಸಿದ ಕಾಲದಲ್ಲಿ ತಲುಪಿದಂತಾ

D. 342



ಗುತ್ತಿತ್ತು. ಆದರೆ ಊರ ಮಗ್ಗುಲಲ್ಲಿಯೇ ಹಾಯ್ದು ಹೊಳೆಯೊಂದು ಮಹಾ ಪೂರು ಬಂದುಬಿಟ್ಟಿತ್ತು. ಮಳೆಯು ಸಹ ಧೋ ಧೋ ಎಂದು ಸುರಿಯು ತ್ತಿತ್ತು. ಬ್ರಾಹ್ಮಣನು ಈಚೆಯ ದಂಡೆಯಲ್ಲಿಯ ಹಳ್ಳಿಯ ಒಂದು ಕುಂಬಾರ ವನ ಮನೆಯಲ್ಲಿ ನೆರಳಿಗೆಂದು ನಿಂತನು. ಪಂಚಾಂಗ ತೆಗೆದು ಜ್ಯೋತಿಷ್ಯ ಗುಣಿಸಿ ಲೆಕ್ಕ ತೆಗೆದರೆ ಈ ದಿನ ರಾತ್ರಿ ತನ್ನಿಂದ ತನ್ನ ಪತ್ನಿಯ ಗರ್ಭದಲ್ಲಿ ದಿವ್ಯ ಜ್ಯೋತಿಯೊಂದು (ಸ್ವಪ್ನದ ಪ್ರಕಾರ) ಉದಯಿಸಿ ಬರಬೇಕು ರಾತ್ರಿ ಯಾದಂತೆ ಊರಿಗೆ ತಲುಪುವ ಆಶೆ ತಪ್ಪಿತೆಂದು ಬ್ರಾಹ್ಮಣನು ಚಡಪಡಿಸ ತೊಡಗಿದನು. ಇದನ್ನು ಕಂಡು ಕುಂಬಾರ ಮುದುಕಿಯು ಕನಿಕರದಿಂದ ಬ್ರಾಹ್ಮಣನನ್ನು ಕೇಳಿದಳು ಇವನ ಚಡಪಡಿಸುವ ಕಾರಣವನ್ನು. ಬ್ರಾಹ್ಮ ಣನು ತನ್ನ ಎಲ್ಲ ಕಥೆಯನ್ನೂ ವಿವರಿಸಿ "ಈ ದಿನ ರಾತ್ರಿಯು ಅಮೃತ ಗಳಿ ಗೆಯು. ನನ್ನಿಂದ ಒಂದು ಅಮೌಲ್ಯ ಜ್ಯೋತಿಯು ಭೂಮಿಗಿಳಿಯುವದಿದೆ. ನಾನಿಲ್ಲಿ ನನ್ನ ಪತ್ನಿ ಅಲ್ಲಿ." ಎಂದು ಚಡಪಡಿಸಿದನು.

ಮುದುಕಿಯು ಇದನ್ನು ಕೇಳಿ ಒಳಗೆ ಹೋಗಿ ಬಹಳ ಯೋಚಿಸಿ ತಿರುಗಿ ಮತ್ತೊಮ್ಮೆ ಬ್ರಾಹ್ಮಣನಲ್ಲಿ ಬಂದಳು. "ವಿಪ್ರೋತ್ತಮಾ, ನಿನ್ನ ಪತ್ನಿಯ ನ್ನಂತೂ ನೀನು ಈಗ ಹೊಂದಲಾರಿ. ದಿವ್ಯಜ್ಯೋತಿ ಎಲ್ಲಿ ಇಳಿದರೇನು ? ನನ್ನ ಸೊಸೆಯನ್ನು ಕಳಿಸುತ್ತೇನೆ. ಅವಳೇ ಗರ್ಭ ಧರಿಸಲಿ ಈ ಅಮೃತ ಗಳಿಗೆಯನ್ನು ವ್ಯರ್ಥ ಹೋಗಗೊಡಬೇಡ" ಎಂದಳು. ಬ್ರಾಹ್ಮಣನೂ ಒಪ್ಪಿದನು. ಆ ದಿನ ರಾತ್ರಿಯನ್ನು ತರುಣಿಯೂ, ಸುಂದರಿಯೂ, ಸದ್ಗು ಣಿಯೂ, ಸತ್ಪಾತ್ರಳೂ ಆದ ಕುಂಬಾರ ಸೊಸೆ ಮಾಳಿ ಎಂಬುವಳೊಡನೇ ಕಳೆದನು. ಮಾಳಿಯು ಸಹ ಸಂತೋಷದಿಂದ ಬ್ರಾಹ್ಮಣನಿಗೊಲಿದಳು. ಅವಳಲ್ಲಿ ಬ್ರಾಹ್ಮಣನಿಂದ ಗರ್ಭದಾನವಾಯಿತು. ದಿವ್ಯವಾದ ಜೀವಜ್ಯೋತಿ ಯೊಂದು ಭೂಮಿಗಿಳಿಯಿತು. ಮರುದಿನ ಬ್ರಾಹ್ಮಣನು ತನ್ನ ಊರಿಗೆ ಹೊರಟು ಹೋದನು. "ಬ್ರಾಹ್ಮಣನು ತಂದೆ ಕುಂಬಾರ ಮಾಳಿಯು ತಾಯಿ" ಎಂದು ಸರ್ವಜ್ಞನು ತಾನೇ ಒಂದು ಕಡೆಗೆ ತನ್ನ ಜನನದ ಬಗ್ಗೆ ಹೇಳಿಕೊಂಡಿದ್ದಾನೆ.

ಸರ್ವಜ್ಞನು ಕನಿಷ್ಟ ೫೦ ವರುಷ ಕಾಲವಾದರೂ ಬದುಕಿರಬಹು ದೆಂದು ತಿಳಿಯುವದು. ಬಾಲ್ಯದಿಂದಲೂ ಇವನು ಪಾಪಕೃತಿಗಳಿಗೆ ನಿಷ್ಠು

ದನಾದುದರಿಂದ ಮನೆಯವರಿಗೆ ಬರ್ಷಣನಾಗಿ ಹೊರಗೆ ಹಾಕಲ್ಪಟ್ಟನು. 'ಹಿಂಡನಗಲಿದಗಜದಂತೆ' ಎಂದು ತನ್ನ ಬಗ್ಗೆ ಹೇಳಿಕೊಂಡಿದ್ದಾನೆ. ಕುಂಬಾರನ ಮನೆಯನ್ನು ಅತಿ ಚಿಕ್ಕವನಿರುವಾಗಲೇ ಬಿಟ್ಟನು. ಅನೇಕ ಗುರುಗಳನ್ನು ಸಂದರ್ಶಿಸಿದನು. ಸಿಕ್ಕ ಮಠಗಳಲ್ಲಿ ಆಶ್ರಯ ಹೊಂದಿದನು. ಇಡೀ ದಕ್ಷಿಣ ಭಾರತವನ್ನು ಸಂಚರಿಸಿ ತೀರ್ಥಯಾತ್ರೆಗೈದನು. ವಿದ್ವಾಂಸರನ್ನೂ ಯೋಗಿಗಳನ್ನೂ ಸನ್ಯಾಸಿಗಳನ್ನೂ ಕಂಡನು. ಅವರೆಲ್ಲರಿಂದಲೂ ಉಪದೇಶಾಮೃತ ಸವಿದನು. 'ಗರ್ವದಿಂದಲೇ' 'ಸರ್ವರೊಳು ನುಡಿಗಲಿತು' ವಿಂದ್ಯದ ಪರ್ವತವೇ ಆದೆ' ನೆಂದು ಅವನು ಹೇಳಿಕೊಂಡಿದ್ದಾನೆ. ಯಾವ ಊರನ್ನೂ ನೆಚ್ಚಿಕೊಂಡಿರದೇ, ಯಾರ ಆತಂಕ ಭಿಡೆ ಭಾರದಲ್ಲಿ ಬೀಳದೇ 'ಮುಂಡೆ ಬೋಳಿಸಿಕೊಂಡು' 'ತುಂಡುಗಂಬಳಿ ಹೊದೆದು' 'ಹಿಂಡನಗಲಿದ ಗಜದಂತೆ ಊರೂರು ತಿರುಗುತ್ತ' 'ಕರದಿ ಕಪ್ಪರ ಹಿಡಿದು' 'ತಿರಿವರಿಂ ಸಿರಿವಂತರಾರು ?' ಎಂದು ಹಾಡುತ್ತ ಚಲಿಸಿದನು.

ಸರ್ವಜ್ಞನು ಬ್ರಾಹ್ಮಣನಿಂದ ಜನಿಸಿದರೂ ಕೂಡ ಇವನು ಬ್ರಾಹ್ಮಣರಲ್ಲಿ ಬೆರೆಯಲಿಲ್ಲವೆಂದು ತೋರುವದು. ಇವನು ವೀರಶೈವ ದೀಕ್ಷೆ ಪಡೆದರೂ ದೀಕ್ಷೆ ಕೊಟ್ಟ ಗುರುಗಳಾರೆಂದು ತಿಳಿಯಲಿಲ್ಲ. ಇವನು ಧರ್ಮಪ್ರಕಾರವಾಗಿ ವಿವಾಹವಾಗಿಲ್ಲ. ಇವನಿಗೆ ಓರ್ವ ವೇಶ್ಯೆಯ ಸಂಗವಿತ್ತೆಂದೂ ಅವಳೊಡನೇ ಇವನು ಅನೇಕ ವರುಷಕಾಲ ಸಂಸಾರಮಾಡಿಕೊಂಡಿದ್ದನೆಂದೂ ಕೆಲವರು ಅಭಿಪ್ರಾಯ ಪಡುತ್ತಾರೆ. 'ಹೆಣ್ಣಿನ ವಶವಾಗಿ ನುಗ್ಗಿ ನುಸಿಯಾದೆ' ಎಂದು ಸರ್ವಜ್ಞನು ಹೇಳಿಕೊಂಡಿದ್ದಾನೆ. ಈ ವೇಶ್ಯೆಯ ಸಹವಾಸದಲ್ಲಿ ಬೇಸರ ಹುಟ್ಟಿದ ನಂತರ ಅವನು 'ಸೋಮಶಂಕರ ಗುರುವು' ನಲ್ಲಿ ಹೋಗಿ ಉಪದೇಶಾಮೃತವನ್ನು ಪಡೆದು ವೈರಾಗ್ಯಶಾಲಿಯಾದನು. ವೀರಶೈವ ವಿರಕ್ತ (ಶಿವಯೋಗಿ)ಯಾಗಿ ಕೊನೆಯ ದಿವಸಗಳನ್ನು ಕಳೆದನೆಂದು ತೋರುವದು. ಇವನು ಬಸವೇಶ್ವರ, ಚನ್ನಬಸವ, ಅಕ್ಕಮಹಾದೇವಿ, ನಿಜಗುಣಿ ಶಿವಯೋಗಿಗಳಿಂದ ಹಾಕಲ್ಪಟ್ಟ ಮಾರ್ಗದಲ್ಲಿಯೇ ನಡೆದು ಬಂದನು. ಅವರ ಪರಂಪರೆಯನ್ನೇ ಮುಂದುವರಿಸಿದನು. ಎಷ್ಟೋ ಕಡೆಗಳಲ್ಲಿ ಸರ್ವಜ್ಞನು ಬಸವಣ್ಣನ ವಚನಗಳನ್ನು ಇದ್ದಕ್ಕಿದ್ದಂತೆಯೇ ತೆಗೆದುಕೊಂಡದ್ದು ಕಂಡುಬರುತ್ತದೆ. ಏಕೀ

ಶ್ವರೀವಾದ, ಮೂರ್ತಿಪೂಜಾ, ಅವಿವೇಕ ನಿರಸನ, ಅಹಿಂಸಾ ಪ್ರತಿಪಾದನೆ, ಜಾತಿಭೇದನಿವಾರಣೆ, ಕ್ಷುದ್ರದೇವತಾ ತಿರಸ್ಕಾರ, ಶಿವಾಧಿಕ್ಯಸ್ಥಾಪನೆ, ಖಂಡಿತವಾದಿತ್ವಗಳನ್ನು ವಚನಕಾರರಿಗಿಂತಲೂ ಸುಂದರವಾದ ಸರಳ ಕನ್ನಡದಲ್ಲಿ ಸರ್ವಜ್ಞನು ಹೇಳಿದ್ದಾನೆ.

ಸರ್ವಜ್ಞನು ಬ್ರಾಹ್ಮಣರನ್ನು ಅಷ್ಟೊಂದು ಗೌರವದಿಂದ ನೋಡುತ್ತಿದ್ದಿಲ್ಲವೆಂದು ತೋರುವದು. ಅವರ ಸಂಸ್ಕೃತ ಜ್ಞಾನಾಡಂಬರವನ್ನೂ, ವೇದ ಪಠಣಾದಿಗಳನ್ನೂ, ಸ್ನಾನ, ಜಪ-ತಪಾದಿಗಳನ್ನೂ ಚನ್ನಾಗಿ ಟೀಕಿಸಿದ್ದಾನೆ. ಅದರಂತೆ ಜೈನರ ಮತವನ್ನೂ ಅದರ ಅನುಯಾಯಿಗಳನ್ನೂ ಕೂಡ ಜರಿದಿದ್ದಾನೆ, ಇವನನ್ನು ಬ್ರಾಹ್ಮಣರು ತಮ್ಮಲ್ಲಿ ಸೇರಿಸಿಕೊಳ್ಳದಿರುವದೂ ಇವನಿಗೆ ಸಂಸ್ಕೃತ ಭಾಷೆ ಬಾರದಿರುವದೂ ಮುಖ್ಯ ಕಾರಣಗಳಾಗಿರಬಹುದು. ಆದರೂ ಇವನು ಕನ್ನಡ ನಾಡಿಗೆ ಶ್ರೇಷ್ಠವಾದ ಕವಿಯಾಗಿ ಚಿರವಾದ ಹೆಸರನ್ನು ಗಳಿಸಿ ಮೆರೆದನು. ಇವನು ಎಂದು ಕಾಲವಾದನು? ಎಂಬುದು ಇನ್ನೂ ಶೋಧವಾಗಿಲ್ಲ. ಆದರೆ ಸರ್ವಜ್ಞನ ಮಾತಿನಲ್ಲೇ ಹೇಳುವದಾದರೆ ಸರ್ವಜ್ಞನ ಜಾತಿಯು ಮಾನವ ಜಾತಿಯು. ಅವನ ಮತ ದೇವಮತ. ಅವನ ಕಾಲವು ಸರ್ವಕಾಲವು. ಎಂದರಿತುಕೊಂಡವರಿಗೆ ಸರ್ವಜ್ಞನ ನಿಜವಾದ ಸೊಗಸು ತಿಳಿದೀತು. ಅವನ ಸಾಹಿತ್ಯ ಕೃತಿಯ ಅಮರ ಸ್ವಾದದ ರುಚಿ ದೊರಕೀತು. ಅದರ ಮಧುರವಾದ ದೇವಲೋಕದ ಸುಗಂಧದಂತಿರುವ ಗಂಧದ ವಾಸನೆಯು ರಸಿಕರಿಗೆ ಲಭಿಸೀತು ಎಂದು ನಾನು ನೆನೆಸುವೆನು. ಇದೇರೀತಿ ಸರ್ವಜ್ಞನ ವಚನಗಳಲ್ಲಿ ಲೋಲಾಡಿ ಸುಖಿಸಿದೆನು. ಎಲ್ಲ ಕನ್ನಡಿಗರೂ ನನ್ನಂತೆ ಸುಖಿಸಲೆಂದು ಆಶಿಸಿ ಸರ್ವಜ್ಞನ ತ್ರಿಪದಿ ಸಾಗರದಲ್ಲಿಯ ಕೆಲವು ಅಮೃತ ಬಿಂದುಗಳನ್ನು ಆರಿಸಿ ಪುಸ್ತಕ ರೂಪದಲ್ಲಿ ಕೊಟ್ಟಿದ್ದೇನೆ. ಅರ್ಥ ವಿವರಣೆಯನ್ನೂ ಕೊಟ್ಟಿದ್ದೇನೆ. ರಸಿಕರು ತೃಪ್ತರಾದರೆ ನನ್ನ ಶ್ರಮವು ಸಾರ್ಥಕ್ಯ.

—ಕಲಮುದಾನಿ ಗುರುರಾಯರು.



# ಸರ್ವಜ್ಞ ವಚನಗಳು

೧. ನಂದಿಯನು ಏರಿದನ ಚಂದಿರನ ಸೂಡಿದನ |
ಕಂದನ ಬೇಡಿ, ನಲಿದಾನು ನೆನವುತ್ತ
ಮುಂದೆ ಪೇಳುವೆನು ಸರ್ವಜ್ಞ ||

ನಂದಿ ವಾಹನನೂ, ಚಂದ್ರನನ್ನು ತಲೆಯಲ್ಲಿ ಧರಿಸಿದವನೂ ಆದ ಶಂಕರನ ಸುತನನ್ನು-ಗಣಪತಿಯನ್ನು ಪ್ರಾರ್ಥಿಸಿ ಮುಂದಿನ ಪದ್ಯಗಳನ್ನು ಪ್ರಾರಂಭಿಸುವೆನು.

೨. ಎಲುವಿನೀ ಕಾಯಕ್ಕೆ ಸಲೆ ಚರ್ಮದಾ ಹೊದಿಕೆ |
ಮಲಮೂತ್ರ ಕ್ರಿಮಿಗಳೊಳಗಿರ್ದ ದೇಹಕೆ|
ಕುಲವಾವುದಯ್ಯ ಸರ್ವಜ್ಞ ||

ಚನ್ನಾಗಿ ಚರ್ಮದ ಹೊದಿಕೆಯುಳ್ಳ ಎಲುವಿನ ಹಂದರದ ಮತ್ತು ಮಲ ಮೂತ್ರಾದಿಗಳು ತುಂಬಿಕೊಂಡಿರುವಂಥ ದೇಹಕ್ಕೆ ಕುಲವೆಲ್ಲಿಂದ ಬಂದಿತು ? ( ಜಾತಿಭೇದವಿಲ್ಲವೆಂಬುದೇ ಈ ಪದ್ಯದ ಅರ್ಥವಾಗಿದೆ. )

೩. ಊರಿಂಗೆ ದಾರಿಯನು | ಅದು ತೋರಿದಡೇನು |
ಸಾರಾಯದ ನಿಜವ ತೋರುವ ಗುರುವು ತಾ |
ನಾರಾದಡೇನು ಸರ್ವಜ್ಞ ||

ತನಗೆ ಗೊತ್ತಿಲ್ಲದ ಊರಿನ ದಾರಿಯನ್ನು ಇಂಥವರೇ ತೋರಿಸಬೇಕೆಂಬ ನಿಯಮವಿರುವದಿಲ್ಲ. ಅಂಥ ಸಮಯದಲ್ಲಿ ಯಾರು ದಾರಿ ತೋರಿಸಿದರೂ ಸರಿಯೆ, ಊರು ತಲುಪುತ್ತಾರೆ. ಅದರಂತೆ ಸತ್ಯದ (ಸಾರಾಯದ) ಅರಿವನ್ನು ತಿಳಿಸಿಕೊಡುವಂಥ ಗುರುವು. ಎಂಥವನಿದ್ದರೇನು ?

೪. ಬಂಧುಗಳು ಆದವರು | ಬಂದುಂಡು ಹೋಗುವರು |
ಬಂಧನವ ಕಳೆಯಲರಿಯರು, ಗುರುವಿಂದ |
ಬಂಧುಗಳು ಉಂಟೆ ಸರ್ವಜ್ಞ ||

ಬಂಧು-ಬಳಗದವರೆಲ್ಲ ಬಂದು ಊಟಮಾಡಿ ಹೋಗುವದಕ್ಕಷ್ಟೇ ಹೊರತು ಬಂಧನವನ್ನು ಕಳೆಯಲಾರರು. ಆದರೆ ಎಲ್ಲ ಬಂಧನಗಳನ್ನು ಹೊಡೆದೋಡಿಸುವಂಥ ಶಕ್ತಿಯುಳ್ಳ ಗುರುವಿಗಿಂತ ಹೆಚ್ಚಿನ ಬಂಧುಗಳು ಯಾರಿದ್ದಾರೆ ? (ಯಾರೂ ಇಲ್ಲ.)

೫. ತಂದೆಗೂ ಗುರುವಿಗೂ ಒಂದು ಅಂತರವುಂಟು |
ತಂದೆ ತೋರುವನು ಸದ್ಗುರುವ, ಗುರುರಾಯ |
ಬಂಧನವ ಕಳೆವ ಸರ್ವಜ್ಞ ||

ತಂದೆಗೂ ಮತ್ತು ಗುರುವಿಗೂ ಒಂದೇ ಒಂದು ಅಂತರವುಂಟು. ಅದೆಂದರೆ ತಂದೆಯು ಒಳ್ಳೆಯ ಗುರುವನ್ನು ತೋರಿಸುತ್ತಾನೆ. ಮತ್ತು ಗುರುವರ್ಯನು ಬಂಧನವನ್ನು ಕಳೆಯುತ್ತಾನೆ.

೬. ಗುರುಮನುಜನೆಂದವಗೆ | ಹರನ ಶಿಲೆಯೆಂದವಗೆ |
ಕರುಣ ಪ್ರಸಾದವನು ಎಂಜಲೆಂದವನಿಗೆ |
ನರಕ ತಪ್ಪುವದೇ ಸರ್ವಜ್ಞ ||

ಗುರುವನ್ನು ಅವನೊಬ್ಬ ಮಾನವನು ಎನ್ನುವವನಿಗೆ, ದೇವದೇವನಾದ ಮಹದೇವನನ್ನು ಶಿಲೆ (ಕಲ್ಲಿನ ಮೂರ್ತಿ) ಎನ್ನುವವನಿಗೆ ಪ್ರಸಾದವನ್ನು ಎಂಜಲು ಎಂದು ಹೀಯಾಳಿಸುವವನಿಗೆ ನರಕವು ಎಂದಿಗೂ ತಪ್ಪಲಾರದು.

೭. ಎತ್ತಾಗಿ ತೊತ್ತಾಗಿ | ಹಿತ್ತಲದ ಗಿಡನಾಗಿ |
ಮತ್ತೆ ಪಾದದ ಕೆರನಾಗಿ ಗುರುವಿನ |
ಹತ್ತಲಿರು ಎಂದ ಸರ್ವಜ್ಞ ||

ಯಾವಾಗಲೂ ಗುರುವಿನ ಬಳಿಯಲ್ಲಿಯೇ ಇರು. ಗುರುವನ್ನು ಬಿಟ್ಟು ಅಗಲಬೇಡ. ಗುರುವಿನ ಆಳಾಗಿ ಇಲ್ಲವೆ ಅವನ ಪಾದರಕ್ಷೆಯಾಗಿದ್ದರೂ ಅಡ್ಡಿಯಿಲ್ಲ; ಅವನ ಬಳಿಯೇ ಇರು.

೮. ಮೊಸರು ಕಡೆಯಲು ಬೆಣ್ಣೆ | ಯೊಸೆದು ತೋರುವ ತೆರದಿ |
ಹಸನಪ್ಪ ಗುರುವಿನುಪದೇಶದಿಂ ಮುಕ್ತಿ |
ವಶವಾಗದಿಹುದೆ ಸರ್ವಜ್ಞ ||

ಮೊಸರು ಕಡೆದೊಡನೆ ಬೆಣ್ಣೆಯು ಚನ್ನಾಗಿ ಗೋಚರವಾಗುವಂತೆ, ಒಳ್ಳೆಯ ಗುರುವಿನ ಉಪದೇಶದಿಂದ ಮುಕ್ತಿಯು ದೊರೆಯದೆ ಇರಲಾರದು.

೯. ಹಂದಿ ಚಂದನದ ಸುಗಂಧವನು ಬಲ್ಲುದೆ |
ಒಂದನು ತಿಳಿಯಲರಿಯದ ಗುರುವಿಂಗೆ |
ನಿಂದೆಯೇ ಬಹುದು ಸರ್ವಜ್ಞ ||

ಹಂದಿಯಂಥ ಕ್ಷುದ್ರಪ್ರಾಣಿಯು ಸುಗಂಧದ ಪರಿಮಳವನ್ನು ಅರಿಯಲಾರದು. ಅದರಂತೆ ಪರಬ್ರಹ್ಮನನ್ನು ಅರಿಯದಂಥ ಗುರುವು ಅಪಕೀರ್ತಿಗೊಳಗಾಗದೆ ಇರಲಾರನು.

೧೦. ದಾನಭಕ್ತಿಗಳಲ್ಲಿ | 'ನಾನು' ಮರೆದಿರಬೇಕು |
ನಾನೆಂಬ ರೋಗ ನೀಗಿದಗೆ ಗುರುಬೋಧೆ |
ತಾನೆ ಫಲಿಸುವದು ಸರ್ವಜ್ಞ ||

ಭಕ್ತಿ, ದಾನ, ಧರ್ಮಗಳೇ ಮೊದಲಾದವುಗಳಲ್ಲಿ 'ನಾನು' ಎಂಬ ಅಹಂಕಾರವಿರಬಾರದು. (ನಾನು ಭಕ್ತಿವಂತ, ನಾನು ದಾನಿ ಎಂಬ ಗರ್ವವಿರಬಾರದು.) ಮನುಷ್ಯನು ತನ್ನಲ್ಲಿಯ 'ನಾನು' ಎಂಬ ಗರ್ವದ ರೋಗದಿಂದ ಪಾರಾದರೆ ಅವನಿಗೆ ಗುರುಬೋಧೆಯ ಫಲವು ತಾನಾಗಿಯೇ ದೊರೆಯುವದು.

೧೧. ಶ್ವಾನ ತೆಂಗಿನಕಾಯಿ | ತಾನು ಮೆಲಬಲ್ಲುದೆ |
ಹೀನಮನದವನಿಗುಪದೇಶವಿತ್ತಡದು |
ಹಾನಿ ಕಾಣಯ್ಯ ಸರ್ವಜ್ಞ ||

ನಾಯಿಯು ತೆಂಗಿನಕಾಯಿಯನ್ನು ತಿನ್ನಬಲ್ಲುದೇ ? ಎಂದಿಗೂ ಸಾಧ್ಯವಿಲ್ಲ. ಅದರಂತೆ ಹೀನ ಮನದ ಮನುಷ್ಯನಿಗೆ ಉಪದೇಶವಿತ್ತರೆ ಅದರಿಂದ ಹಾನಿಯೇ ಹೊರತು ಉಪಯೋಗವು ಎಳ್ಳಷ್ಟೂ ಇಲ್ಲ.

೧೨. ಕಟ್ಟಿಗೆಗಳೆರಡನ್ನು | ಕಟ್ಟಿಟ್ಟರೇನಹುದು |
ಗಟ್ಯಾಗಿ ಎರಡುಮಥಿಸಲ್ಕೆ ಬೇಗೆಯುದು |
ಬೆಟ್ಟಕೊಂಡಂತೆ ಸರ್ವಜ್ಞ ||

ಎರಡು ಕಟ್ಟಿಗೆಯ ತುಂಡುಗಳನ್ನು ಒಂದೆಡೆ ಸೇರಿಸಿ ಕಟ್ಟಿ ಇಟ್ಟರೆ ಅದರಿಂದ ಏನೂ ಆಗಲಾರದು. ಅವು ಒಂದು ಮೂಲೆಯಲ್ಲಿ ಬಿದ್ದು ಕೊಂಡಿರುತ್ತವೆ ಅಷ್ಟೆ. ಆದರೆ ಅವೆರಡೂ ತುಂಡುಗಳನ್ನು ಒಂದ ಕ್ಕೊಂದು ಚನ್ನಾಗಿ ತಿಕ್ಕಿದರೆ ಅಗ್ನಿಯು ಉತ್ಪನ್ನವಾಗಿ ಬೆಟ್ಟವನ್ನೇ ಹಿಡಿದುಕೊಳ್ಳುತ್ತದೆ.

೧೩. ಹಸಿಯ ಸಮಿಧೆಯ ತಂದು | ಹೊಸೆದರುಂಟೇ ಕಿಚ್ಚು |
ವಿಷಯಂಗಳುಳ್ಳ ಮನುಜಂಗೆ ಗುರುಕರುಣ |
ವಶವರ್ತಿಯಹುದೇ ಸರ್ವಜ್ಞ ||

ಹಸಿಯಿದ್ದ ಕಟ್ಟಿಗೆಯ ತಂಡುಗಳನ್ನು ತಂದು ಅವುಗಳನ್ನು ಒಂದ ಕೊಂದು ತಿಕ್ಕಿದರೆ ಬೆಂಕಿ ಉತ್ಪನ್ನವಾಗಬಹುದೇ ? ಎಂದಿಗೂ ಆಗಲಾರದು. ಅದರಂತೆ ವಿಷಯ ವಾಸನೆಯುಳ್ಳ ಮನುಷ್ಯನಿಗೆ ಗುರುವಿನ ಕರುಣೆಯು ಎಂದಿಗೂ ಕರಗತವಾಗಲಾರದು. ಅಂದರೆ ಅವನ ಮನಕ್ಕೆ ಹಿಡಿಸಲಾರದು.

೧೪. ಲಿಂಗಕ್ಕೆ ತೋರಿಸುತ | ನುಂಗುವಾತನೆ ಕೇಳು |
ಲಿಂಗವುಂಬುವುದೇ ? ಇದನರಿದು, ಕಪಿಯೋ ನೀ |
ಜಂಗಮಗೆ ನೀಡು ಸರ್ವಜ್ಞ ||

ಲಿಂಗಕ್ಕೆ ನೈವೇದ್ಯವನ್ನು ತೋರಿಸಿ ನೀನೇ ತಿಂದುಬಿಡುವ ಮಾನವನೆ! ಲಿಂಗವೆಂದಾದರೂ ಉಣ್ಣಬಹುದೇ! ಅದೆಂದಿಗೂ ಉಣ್ಣಲಾರದು. ಅದಕ್ಕಾಗಿ ನೀನು ಇದನ್ನು ಅರಿತುಕೊಂಡು ಜಂಗಮ ಗಣಕ್ಕೆ ನೀಡುವದು ಒಳಿತು.

೧೫. ಓದು ವಾದಗಳೇಕೆ | ಗಾಢೆಯ ಮಾತೇಕೆ |
ವೇದ ಪುರಾಣ ನಿನಗೇಕೆ ಲಿಂಗದ |
ಹಾದಿಯರಿದಲೆ ಸರ್ವಜ್ಞ ||

ಲಿಂಗುವಿನ ಮರ್ಮವನ್ನರಿಯದವನಿಗೆ, ಓದು-ಬರಹ. ವಾದ-ವಿವಾದ ಗಳಾಗಲಿ, ವೇದ-ಪುರಾಣಗಳ ಪಠಣವಾಗಲಿ ಏತ್ತಕ್ಕೆ ಬೇಕು ಅದನ್ನರಿತು ಕೊಂಡಿದ್ದರೂ ನಿರುಪಯೋಗ.

೧೬. ಇಂಗಿನೊಳು ನಾತವನು | ತೆಂಗಿನೊಳಗೆಳನೀರು |
ಭೃಂಗ ಕೋಗಿಲೆಯ ಕಂಠದೊಳು ಗಾಯನವ |
ತುಂಬಿದವರಾರು ಸರ್ವಜ್ಞ ||

ಇಂಗಿನೊಳಗೆ ವಾಸನೆಯನ್ನೂ, ತೆಂಗಿನಕಾಯಿಯೊಳಗೆ ಎಳೆನೀರನ್ನೂ ಹಾಗು ಭೃಂಗ ಕೋಗಿಲೆಗಳ ಕಂಠದಲ್ಲಿ ಮಧುರ ಗಾಯನನಿನಾದವನ್ನೂ ತುಂಬಿದವರು ಯಾರು ? (ದೇವರು ಎಂದರ್ಥ.)

೧೭. ಕಳ್ಳಿಯೊಳು ಹಾಲು ಮುಳು | ಗಳ್ಳಿಯೊಳು ಹೆಜ್ಜೇನು |
ಎಳ್ಳಿನೊಳಗೆಣ್ಣೆ ಹಸಿದಿರಲು ಶಿವಲೀಲೆ |
ಸುಳ್ಳೆನ್ನಬಹುದೆ ಸರ್ವಜ್ಞ ||

ಕಳ್ಳಿನೊಳಗೆ ಹಾಲನ್ನೂ ಮುಳಗಳ್ಳಿಯಂಥ ಕಂಟಿಯೊಳಗೆ ಹೆಜ್ಜೇನನ್ನೂ ಎಳ್ಳಿನೊಳಗೆ ಎಣ್ಣೆಯನ್ನೂ ನಿರ್ಮಿಸಿರುವಂಥ ಶಿವನ ಲೀಲೆಯನ್ನು ಸುಳ್ಳೆನ್ನಲು ಸಾಧ್ಯವಿದೆಯೇ? (ಎಂದಿಗೂ ಇಲ್ಲ.)

೧೮. ನರನ ಬೇಡುವ ದೈವ । ವರವೀಯಬಲ್ಲುದೇ ।
ತಿರುವರನಡರಿ ತಿರಿವರೇನಿದನರಿತು ।
ಹರನ ಬೇಡುವದು ಸರ್ವಜ್ಞ ॥

ಮಾನವನನ್ನೇ ಬೇಡುವ ದೈವವು ಅವನಿಗೆ ವರವನ್ನೀಯಲು ಸಾಧ್ಯವಿದೆಯೇ ? ಅಂಥ ದೈವದಿಂದ ವರವನ್ನು ಬಯಸುವದೆಂದರೆ ದರಿದ್ರನ ಮನೆಗೆ ಭಿಕ್ಷುಕನು ಹೋದಂತೆಯೇ ಸರಿ. ಅದಕ್ಕಾಗಿಯೇ ಹರನನ್ನು ಬೇಡುವದು ಒಳಿತು.

೧೯. ತನ್ನಲಿಹ ಲಿಂಗವನು । ಮನ್ನಿಸಲಿಕರಿಯದೆ ।
ಬಿನ್ನಣದಿ ಕಟೆದ ಪ್ರತಿಮೆಗಳಿಗೆರುಗುವ ।
ಅನ್ಯಾಯ ನೋಡ ಸರ್ವಜ್ಞ ॥

ತನ್ನಾತ್ಮದಲ್ಲಿರುವಂಥ ಆತ್ಮಲಿಂಗವನ್ನು ಮನ್ನಿಸಲು ತಿಳಿದುಕೊಳ್ಳದಂಥವನು, ಕಟೆದು ಮಾಡಿದ ಪ್ರತಿಮೆಯ ಮುಂದೆ ಬಾಗುವದು ಅನ್ಯಾಯದ ಅತಿರೇಕವಲ್ಲದೆ ಇನ್ನೇನು ?

೨೦. ಉಣಬಂದ ಜಂಗಮಗೆ ಉಣಬಡಿಸಲೊಲ್ಲದಲೆ ।
ಉಣದಿಪ್ಪ ಲಿಂಗಕುಣಬಡಿಸಿ ಕೈ ಮುಗಿದ ।
ಬಣಗುಗಳ ನೋಡ ಸರ್ವಜ್ಞ ॥

ಊಟಮಾಡಲು ಬಲ್ಲ-ಬಂದ-ಜಂಗಮನಿಗೆ ಊಟಕ್ಕೆ ನೀಡದೆ ಉಣಲಾರದಂಥ ಲಿಂಗಕ್ಕೆ ನೈವೇದ್ಯವನ್ನು ತೋರಿಸಿ ಕೈಮುಗಿಯುವಂಥವರಿಗೆ ಏನೆನ್ನಬೇಕು ?

೨೧. ಬಟ್ಟೆಯಾ ಕಲ್ಲಿಂಗೆ । ಒಟ್ಟೆ ಪ್ರತಿಯನಿಟ್ಟು ।
ಕಟ್ಟಿದಾ ಲಿಂಗವಡಿಯಾಗಿ ಶರಣೆಂಬ ।
ಭ್ರಷ್ಟರನು ನೋಡ ಸರ್ವಜ್ಞ ॥

ಮಾರ್ಗದೊಳಗಿನ ಕಲ್ಲಿಗೆ ಪ್ರತಿಮೆಯನ್ನಿಟ್ಟು ತಮ್ಮಲ್ಲಿದ್ದ ಲಿಂಗವನ್ನು ಮರೆತು ಕಂಡಲ್ಲಿ ಕೈಮುಗಿಯುವಂಥ ಭ್ರಷ್ಟರನ್ನು ನೀನು ನೋಡಬಲ್ಲೆಯಾ ?

೨೨. ಕಲ್ಲು ಗುಂಡಿನ ಮೇಲೆ ಮಲ್ಲಿಗೆಯ ಅರಳಿಕ್ಕಿ |
ನಿಲ್ಲದೆ ಹಣೆಯ ಬಡಿವರ್ಗೆ ಬುಗುಟೆಲ್ಲ |
ದಿಲ್ಲ ಕಾಣಯ್ಯ ಸರ್ವಜ್ಞ ||

ಕಲ್ಲು ಗುಂಡಿನ ಮೇಲೆ (ಮೂರ್ತಿಯ ಮೇಲೆ) ಮಲ್ಲಿಗೆಯ ಹೂಗಳನ್ನಿರಿಸಿ ಅದಕ್ಕೆ ಹಣೆಯನ್ನು ಬಡೆಯುವವರ ಹಣೆಗೆ ಬುಗುಟೆ ಏಳದೆ ಇರಲಾರದು.

೨೩. ಹೆಣ್ಣಿನ ಹೊನ್ನಿನ | ಮಣ್ಣಿನ ಬಲೆಯನ್ನು |
ಹಣ್ಣಿಸಿ ಜಗವನದರೊಳು ಹಿಡಿದ ಮು |
ಕ್ಕಣ್ಣನ ನೋಡು ಸರ್ವಜ್ಞ ||

ಹೆಣ್ಣು–ಹೊನ್ನು ಹಾಗೂ ಮಣ್ಣೆಂಬ ಬಲೆಯನ್ನು ಬೀಸಿ ಸಕಲ ಜಗತ್ತನ್ನೇ ಅದರೊಳಗೆ ಹಿಡಿದುಕೊಂಡಿರುವಂಥ ಮುಕ್ಕಣ್ಣ (ಶಿವ) ನನ್ನು ನೋಡು.

೨೪. ನರಸಿಂಹನವತಾರ | ಹಿರಿದಾದ ಅದ್ಭುತವು |
ಶರಭನುಗುರಿಂದ ಕೊಲುವಾಗ ಹರಿ ಊರ |
ನರಿಯಂತಾದ ಸರ್ವಜ್ಞ ||

ನರಸಿಂಹನ ಅವತಾರವು ಭಯಂಕರ ಅದ್ಭುತವೆಂದು ಅನ್ನುತ್ತಾರೆ. ಓರ್ವ ರಕ್ಕಸನನ್ನು ಉಗುರುಗಳಿಂದ ಕೊಲ್ಲುವದೆಂದರೆ ಆ ಹರಿಯು ಊರ ಮುಂದಿನ ನರಿಯೇ ಸೈ.

೨೫. ಪಾಲಿಸುವ ಹರಿಯು ತಾ | ಸೋಲನೆಂದೆನಬೇಡ |
ಶೂಲಿ ತಾ ಮಗನ ತಲೆಚಿಗುಟೆ, ಹರಿಯೇಕೆ |
ಪಾಲಿಸದೆ ಹೋಗಿ ಸರ್ವಜ್ಞ ||

ಹರಿಯು ಸಂರಕ್ಷಕನು, ಅವನೆಂದಿಗೂ ಹಿಂಜರಿಯಲಾರನು ಎಂದು ಭಾವಿಸಬೇಡ. ಶಿವನು ಅವನ (ಹರಿಯ) ಮಗನ ತಲೆಯನ್ನೇ ಚಿವುಟಿ ಹಾಕಿದಾಗ, ಹರಿಯೇಕೆ ಸಲುಹಲಿಲ್ಲ?

೨೬. ಇಂದ್ರನಾನೆಯನೇರಿ | ಒಂದನೂ ಕೊಡಲರಿಯ |
ಚಂದ್ರಶೇಖರನು ಮುದಿಯೆತ್ತನೇರಿ ಬೇ |
ಕೆಂದುದನು ಕೊಡುವ ಸರ್ವಜ್ಞ ||

ಆನೆಯನ್ನೇರಿ ಹೊರಟರೂ ಇಂದ್ರನು ಏನನ್ನೂ ಕೊಡಲಸಮರ್ಥನು. ಆದರೆ ಮುದಿ ಎತ್ತಿನ ಮೇಲೆ ಕುಳಿತು ಹೊರಡುವ ಚಂದ್ರಶೇಖರ (ಶಿವ) ಬೇಡಿದ್ದನ್ನು ಕೊಡಬಲ್ಲನು.

೨೭. ಸತ್ಯಕ್ಕೆ ಸರಿಯಿಲ್ಲ | ಚಿತ್ತಕ್ಕೆ ಸ್ಥಿರವಿಲ್ಲ |
ಹಸ್ತದಿಂದಧಿಕ ಹಿತರಿಲ್ಲ; ಪರದೈವ |
ನಿತ್ಯನಿಂದಿಲ್ಲ ಸರ್ವಜ್ಞ ||

ಸತ್ಯಕ್ಕೆ ಸರಿಯಾದುದೂ ಚಿತ್ತಕ್ಕೆ ಸ್ಥಿರತೆಯೂ ಹಾಗೂ ಸ್ವಹಸ್ತಕ್ಕಿಂತ ಹೆಚ್ಚಿನ ಹಿತವಂತರೂ ಯಾರೂ ಇಲ್ಲ. ಅದರಂತೆ ಪರದೈವಕ್ಕೆ ಶಿವಶರಣರನ್ನುಳಿದು ಇನ್ನಾರೂ ಅಲ್ಲ.

೨೮. ಭಾಷೆಯಿಂ ಮೇಲಿಲ್ಲ | ದಾಸನಿಂ ಕೀಳಿಲ್ಲ |
ಮೋಸದಿಂದಧಿಕ ಕೇಡಿಲ್ಲ; ಪರದೈವ |
ಈಶನಿಂದಿಲ್ಲ ಸರ್ವಜ್ಞ ||

ಭಾಷೆಗಿಂತ ಹೆಚ್ಚಿನದೂ ಭೃತ್ಯನಿಗಿಂತ ಕೀಳಾದುದೂ ಹಾಗೂ ಮೋಸಕ್ಕಿಂತ ಹೆಚ್ಕಿನ ಕೆಡುಕುತನವು ಯಾವುದೂ ಇಲ್ಲ. ಪರದೈವ ಪ್ರಾಪ್ತಿಯು ಈಶನಿಂದಲ್ಲದೆ ಅನ್ಯರಿಂದ ಅಸಾಧ್ಯವಾದುದು.

೨೯. ಶೇಷನಿಂ ಬಲವಿಲ್ಲ | ಮೋಸದಿಂ ಕಳವಿಲ್ಲ |
ನೇಸರಿಂ ಜಗಕೆ ಹಿತರಿಲ್ಲ; ಪರದೈವ |
ಈಶನಿಂದಿಲ್ಲ ಸರ್ವಜ್ಞ ||

ಆದಿಶೇಷನ ಸಮಾನ ಬಲವುಳ್ಳವರು ಇಲ್ಲ. ಮೋಸದಂಥ ಕಳ್ಳತನವಿಲ್ಲ. ಜಗತ್ತಿಗೆ ಸೂರ್ಯನಿಗಿಂತ ಹೆಚ್ಚಿನ ಹಿತವಂತರಿಲ್ಲ. ಅದರಂತೆ ಪರದೈವ ಪ್ರಾಪ್ತಿಗೆ ಈಶ್ವರನ ಹೊರತು ಇನ್ನಾರೂ ಇಲ್ಲ.

೩೦. ಮಾತೆಯಿಂ ಹಿತರಿಲ್ಲ ಕೋತಿಯಿಂ ಮರುಳಿಲ್ಲ |
ಜ್ಯೋತಿಯಿಂದಧಿಕ ಬೆಳಕಿಲ್ಲ ದೈವವ |
ಜಾತನಿಂದಲ್ಲ ಸರ್ವಜ್ಞ ||

ತಾಯಿಗಿಂತ ಹೆಚ್ಚಿನ ಬಂಧುಗಳಿಲ್ಲ. ಮಂಗನಿಗಿಂತ ಹೆಚ್ಚಿನ ಮೂರ್ಖರಿಲ್ಲ. ಹಾಗೂ ಜ್ಯೋತಿಗಿಂತ ಹೆಚ್ಚಿನ ಬೆಳಕು ಇಲ್ಲ. ಅದರಂತೆಯೇ ದೈವಪ್ರಾಪ್ತಿಯು ಪುತ್ರನಿಂದಲೇ ಹೊರತು ಅನ್ಯರಿಂದಲ್ಲ.

೩೧. ಇದ್ದಲಿಂ ಕರಿದಿಲ್ಲ | ಬುದ್ಧಿಯಿಂ ಹಿರಿದಿಲ್ಲ |
ವಿದ್ಯದಿಂದಧಿಕ ಧನವಿಲ್ಲ; ದೈವತಾ |
ರುದ್ರನಿಂದಲ್ಲ ಸರ್ವಜ್ಞ ||

ಇದ್ದಲಿಗಿಂತ ಕರಿದಾದುದೂ, ಬುದ್ಧಿಗಿಂತ ಹಿರಿದಾದುದೂ ಹಾಗೂ ವಿದ್ಯಕ್ಕಿಂತ ಹೆಚ್ಚಿನ ಧನವೂ ಯಾವದೂ ಇಲ್ಲ. ಅದರಂತೆ ರುದ್ರನಿಗಿಂತ ಹೆಚ್ಚಿನ ದೈವತವು ಕೂಡ ಇಲ್ಲ.

೩೨. ಭಕ್ತಿಯಿಂದಲೇ ಮುಕ್ತಿ | ಭಕ್ತಿಯಿಂದಲೇ ಶಕ್ತಿ |
ಭಕ್ತಿ ವಿರಕ್ತಿಯುಳಿಪರೀ ಜಗದಲ್ಲಿ |
ಮುಕ್ತಿಯಿಲ್ಲೆಂದ ಸರ್ವಜ್ಞ ||

ಭಕ್ತಿಯಿಂದಣ ಮುಕ್ತಿ, ಅದರಿಂದ ಶಕ್ತಿಯೂ ಇದೆ. ಭಕ್ತಿ ವಿರಕ್ತಿಗಳು ಅಳಿದರೆ ಈ ಜಗತ್ತಿನೊಳಗೆ ಮುಕ್ತಿಯೇ ಇಲ್ಲ. ಅದಕ್ಕಾಗಿ ಭಕ್ತಿಯು ಬೇಕೇಬೇಕು.

೩೩. ಕೊಟ್ಟಿದ್ದು ತನಗೆ ಬಚ್ಚಿಟ್ಟದ್ದು ಪರರಿಂಗೆ |
ಕೊಟ್ಟದ್ದು ಕೆಟ್ಟಿತೆನಬೇಡ | ಮುಂದಕ್ಕೆ |
ಕಟ್ಟಿಹುದು ಬುತ್ತಿ ಸರ್ವಜ್ಞ ||

ಕೈ ಎತ್ತಿ ದಾನ ಕೊಟ್ಟದ್ದು ತನಗೆ, ಹಾಗು ಇರಲಿ ಎಂದು ಮುಚ್ಚಿಟ್ಟದ್ದು ಪರರಿಗೆ ಆಗುವದು. ದಾನ ಕೊಟ್ಟು ಕೆಟ್ಟೆ ಎಂದು ನುಡಿಯಬೇಡ. ಅದು ನಿನಗೆ ಮುಂದೆ ಕಟ್ಟಿಟ್ಟ ಬುತ್ತಿಯಂತೆ ಉಪಯೋಗಕ್ಕೆ ಬರುವದು.

೩೪. ಕೊಟ್ಟು ಕುದಿಯಲುಬೇಡ | ಕೊಟ್ಟಾಡಿಕೊಳಬೇಡ |
ಕೊಟ್ಟು ನಾ ಕೆಟ್ಟೆನೆನಬೇಡ | ಶಿವನಲ್ಲಿ |
ಕಟ್ಟಿಹುದು ಬುತ್ತಿ ಸರ್ವಜ್ಞ ||

ಸರ್ವಜ್ಞನ ಈ ವಚನವೂ ಕೂಡ ಮೇಲಿನ ಅರ್ಥವನ್ನೇ ಸೂಚಿಸುತ್ತದೆ.

೩೫. ಆಗ ಬಾ ! ಈಗ ಬಾ ! ಹೋಗಿ ಬಾ ! ಎನ್ನದಲೆ |
ಆಗಲೇ ಕರೆದು ಕೊಡುವವನ ಧರ್ಮ ಹೊ |
ನ್ನಾಗದೆ ಬಿಡದು ಸರ್ವಜ್ಞ ||

ದಾನ ಮಾಡುವಂಥವನು 'ಈಗ ಬಾ, ಇನ್ನು ಸ್ವಲ್ಪ ತಡೆದು ಬಾ, ನಾಳಿಗೆ ಬಾ' ಎಂದು ನುಡಿಯದೆ, ಕೇಳಲು ಬಂದಾಗ ಕೊಟ್ಟುಬಿಡುವಂಥವನ ಧರ್ಮವೇ ಒಳ್ಳೆಯದು. ಅದು ಬಂಗಾರದ ಗಟ್ಟಿಯಂತೆ.

೩೬. ತಿರಿದು ತಂದಾದರೂ | ಕರೆದು ಜಂಗಮಗಿಕ್ಕು |
ಪರಿಣಾಮವಕ್ಕು ಪದವಕ್ಕು, ಕೈಲಾಸ |
ನೆರೆಮನೆಯಕ್ಕು ಸರ್ವಜ್ಞ ||

ತಾನು ತಿರಿದು ತಂದಿದ್ದರೂ ಪರವಿಲ್ಲ; ಜಂಗಮರಿಗೆ ಕರೆತಂದು ಉಣಬಡಿಸುವದರಿಂದ ಅವನಿಗೆ ಕೈಲಾಸವೆಂದರೆ ನೆರೆಮನೆ (ಪಕ್ಕದ ಮನೆ)ಯಷ್ಟು ಸಮೀಪವಾಗುವದು.

೩೭. ಬೀಗರುಂಬುವ ದಿನದಿ | ಯೋಗಿ ಭಿಕ್ಷಕೆ ಬರಲು |
ಬೀಗರಿಗೆ ನೀಡಿ ಯೋಗಿಗಿಲ್ಲೆಂದವಗೆ |
ಕಾಗೆಯ ಜನುಮ ಸರ್ವಜ್ಞ ||

ಬೀಗರಿಗೆ ಮೇಜವಾನಿಯನ್ನು ಮಾಡಿಸಿ, ಊಟಕ್ಕೆ ಕುಳ್ಳಿರಿಸಿದ ಸಮದಲ್ಲಿ ಯೋಗಿ ( ಜೋಗಿ ) ಯೊಬ್ಬನು ಭಿಕ್ಷೆಗೆ ಬರಲು ಆಗ ಅವನಿಗೆ ನೀಡದೆ ಬೀಗರಿಗೆ ಉಣಬಡಿಸುವಂಥವನಿಗೆ ಕಾಗೆಯ ಜನ್ಮವು ತಪ್ಪದು.

೩೮. ಆಪದಲೆ ಕೊಡುವವನು । ರೂಢಿಯೊಳಗುತ್ತಮನು ।
ಅಡಿ ಕೊಡುವವನು ಮಧ್ಯಮನಧಮನು ತಾ ।
ನಾಡಿ ಕೊಡದವನು ಸರ್ವಜ್ಞ ॥

ನಾನು ದಾನವನು ಮಾಡು ( ಕೊಡು ) ತ್ತೇನೆ ಎಂದು ಬಾಯಿಂದ ಹೇಳದೆ ಸುಮ್ಮನೆ ಕೊಟ್ಟುಬಿಡುವಂಥವನು ಉತ್ತಮನು. ಕೊಡುತ್ತೇನೆಂದು ಹೇಳಿ ಕೊಡುವವನು ಮಧ್ಯಮ ತರಗತಿಯವನು. ಆದರೆ ಕೊಡುತ್ತೇನೆಂದು ಹೇಳಿಯೂ ಕೊಡದಂಥವನು ಅಧಮನು. (ನೀಚನು.)

೩೯. ಆನೆಯನು ಏರುವಡೆ । ದಾನವನು ಮಾಡುವದು ।
ಭಾನುಮಂಡಲವನಡರುವಡೆ ಹರಿದರಿಗೆ ।
ನೀನೊಲಿದು ಇಕ್ಕು ಸರ್ವಜ್ಞ ॥

ಆನೆಯನ್ನೇರಿ ತಿರುಗುವವನಿಗೆ ದಾನ ಕೊಡುವದೆಂದರೆ ಸೂರ್ಯಮಂಡಲ ವನ್ನೇರುವಂತೆಯೇ ಸರಿ. (ಆದಕ್ಕಾಗಿ) ನೀನು ಹಸಿದವರಿಗೆ ತಪ್ಪದೇ ನೀಡು ವಂಥವನಾಗು.

೪೦. ಎತ್ತಣಾ ಹನಿಬಿದ್ದು । ಮುತ್ತಾದ ತೆರನಂತೆ ।
ಉತ್ತಮದ ಗತಿಯು ಪಡೆಯುವಡೆ ಯತಿಗೊಂದು ।
ತುತ್ತನಿಕ್ಕೆಂದ ಸರ್ವಜ್ಞ ॥

ಎಲ್ಲಿಯದೋ ಒಂದು ಮಳೆಯ ಹನಿ ಬಿದ್ದು ಮುತ್ತಾಗುವಂತೆ, ಸದ್ಗತಿಯ ಮಾರ್ಗದರ್ಶಕನಾದ ಯತಿಗೂ ಒಂದು ತುತ್ತು ಅನ್ನವನ್ನು ನೀಡಿ ಮೋಕ್ಷ ದೊರಕಿಸಿಬಿಡು.

೪೧. ಅನ್ನವನು ಇಕ್ಕುವ । ಅನ್ಯಜಾತನೆ ಕುಲಜ ।
ಅನ್ನವನು ಇಕ್ಕದುಣುತಿಪ್ಪ ಕುಲಜಾತ ।
ನನ್ಯರೆಂದರಿಗು ಸರ್ವಜ್ಞ ॥

ಅನ್ನವನ್ನಿಕ್ಕುವವನು ಅವನು ಯಾವ ಜಾತಿಯವನೇ ಇರಲಿ ಒಳ್ಳೆಯವನೆಂದೇ ತಿಳಿಯತಕ್ಕದ್ದು. ಅನ್ನವನ್ನೀಯದೆ ತಾನೇ ತಿನ್ನುವಂಥ ಸ್ವಜಾತೀಯನು ಕೂಡ ಪರದೆಂದೇ ತಿಳಿ. ಅವನು ಸ್ವಜನಲ್ಲ !

೪೨. ಅನ್ನವನು ಇಕ್ಕಿ ನೀಂ | ಖಿನ್ನವನು ಪಡಬೇಡ|
ಭಿನ್ನ ಭೇದಗಳು ಇಲ್ಲದಲೆ ಶಿವ ಜಗವ |
ನಿನ್ನು ಸಲಹುವನು ಸರ್ವಜ್ಞ ||

ನೀನು ಅನ್ನವನ್ನಿಕ್ಕಿ ( ಅನ್ನದಾನಮಾಡಿ ) ದುಃಖಪಡಬೇಡ. ಶಿವನು ಯಾವುದೇ ತರಹದ ಭಿನ್ನ-ಭೇದಗಳಿಲ್ಲದೇ ಜಗತ್ತನ್ನು ರಕ್ಷಿಸುತ್ತಿರುವದನ್ನು ನೀನು ಮರೆಯಬೇಡ.

೪೩. ಉಣ್ಣದೊಡವೆಯು ಗಳಿಸಿ | ಮಂಣಿನೊಳು ತಾನಿರಿಸಿ |
ಸಣ್ಣಸಿ ನೆಲವ ಸಾರಿದನ ಬಾಯೊಳಗೆ |
ಮಣ್ಣು ಕಾಣಯ್ಯ ಸರ್ವಜ್ಞ ||

(ತನ್ನ ಹೊಟ್ಟೆಗೆ) ತಿನ್ನದೇ ಒಡವೆಗಳನ್ನು ಸಂಪಾದಿಸಿ ಅವುಗಳನ್ನು ನೆಲದೊಳಗೆ ಹೂತಿಟ್ಟು ಮೇಲೆ ಸೂಸುಮಣ್ಣಿನಿಂದ ಅಲ್ಲಿಯು ನೆಲವನ್ನು ಸಾರಿಸುತ್ತಿರುವವನ ಬಾಯೊಳಗೆ ಮಣ್ಣು ಬೀಳದೇ ಇರಲಾರದು.

೪೪. ಉಣ್ಣೆ ಕೆಚ್ಚಲೋಳಿರ್ದು | ಉಣ್ಣದದು ನೊರೆವಾಲು |
ಪುಣ್ಯವಮಾಡಿ ಉಣಲೊಲ್ಲದನಿರುವು |
ಉಣ್ಣೆಗೂ ಕಷ್ಟ ಸರ್ವಜ್ಞ ||

ಉಣ್ಣೆಯು ಕೆಚ್ಚಲೊಳಗಿದ್ದರೂ ಕೂಡ ಅದು ಹಾಲನ್ನು ಕುಡಿಯುವದಿಲ್ಲ. ( ಅದರಂತೆ ) ಪುಣ್ಯವನ್ನು ಮಾಡಿ ಉಣಲಾರದಂಥವನ ಬಾಳುವೆಯು ಉಣ್ಣೆಗಿಂತಲೂ ಕಷ್ಟಕರವಾಗಿರುವದರಲ್ಲಿ ಸಂದೇಹವಿಲ್ಲ.

೪೫. ಭಿಕ್ಷವೆಂದವರಿಗೆ | ಭಿಕ್ಷವನು ನೀಡಿದರೆ |
ಅಕ್ಷಯ ಪದವು ತಾನಕ್ಕು, ಇಲ್ಲವೆನೆ |
ಭಿಕ್ಷುಕನಕ್ಕು ಸರ್ವಜ್ಞ ||

ದೇಹಿ ಎಂದು ಬಂದವರಿಗೆ ಭಿಕ್ಷೆಯನ್ನು ನೀಡುವವನು ಅಕ್ಷಯಪದವನ್ನು ಪಡೆಯುವನು. ಆದರೆ ನೀಡಲಾರದಂಥವನು ಮಾತ್ರ ( ಒಂದು ದಿನ ) ಭಿಕ್ಷುಕನಾಗುವನು.

೪೬. ಕಾಗೆಯುಗುಳನು ಕಂಡು | ಕೂಗುವನು ಬಳಗವನು |
ಕಾಗೆ ಕೋಳಿಗಳ ತೆರದುಣ್ಣದವನಿರವು |
ಕಾಗೆಗೂ ಕಷ್ಟ ಸರ್ವಜ್ಞ ||

ಒಂದು ಅಗಳು ಅನ್ನವನ್ನು ಕಂಡರೂ ಕೂಡ ಕಾಗೆಯು ಕಾ–ಕಾ ಎಂದು ತನ್ನ ಬಳಗನ್ನೇ ಕರೆದು ಅವುಗಳೊಂದಿಗೆ ಕೂಡಿಕೊಂಡು ತಿನ್ನುವದು. ( ಅದರಂತೆ ) ಕಾಗೆ ಹಾಗೂ ಕೋಳಿಗಳಂತೆ ತನ್ನವರನ್ನು ಕರೆದು ಕೊಂಡು ತಿನ್ನಲಾರದಂಥವನ ಬಾಳುವೆಯು ಕಾಗೆಗಿಂತಲೂ ಕಷ್ಟಕರ ( ಹೀನ )ವಾಗುವದು.

೪೭. ಮಾನವರ ದುರ್ಗುಣವ | ನೇನೆಂದು ಬಣ್ಣಿಪೆನು |
ದಾನಗೈಯೆನಲು ಕನಲುವರು, ದಂಡವನು |
ಮೌನದೀಯುವರು ಸರ್ವಜ್ಞ ||

ಮಾನವರ ದುರ್ಗುಣವನ್ನು ಏನೆಂದು ಹೇಳಲಿ ? ದಾನ ಮಾಡು ಎಂದರೆ ಸಿಟ್ಟಿಗೇಳುವರು. ದಂಡವನ್ನು ( ಆದರೆ ) ಮಾತ್ರ ಮೌನದಿಂದಲೇ ಕೊಡುವರು.

೪೮. ಎರೆಯುಲೊಲ್ಲದ ಲೋಭಿ | ಕರೆಯುಲೊಲ್ಲದ ಗೋವು |
ಬರಿಗಾಲ ಪಯಣ ಇವುಮೂರು ತನ್ನ ತಾ |
ನಿರಿದುಕೊಂಡಂತೆ ಸರ್ವಜ್ಞ ||

ಅನ್ಯರಿಗೆ ಕೊಡಲಾರದ ಜಿಪುಣ, ಹಾಲನ್ನೀಯಲಾರದಂಥ ಹಸು, ಬರಿಗಾಲಿನಿಂದ ( ಪಾದರಕ್ಷೆಗಳಿಲ್ಲದೆ ) ಮಾಡುವ ಪ್ರಯಾಣ, ಇವು ಮೂರು ತನ್ನನ್ನು ತಾನೇ ಇರಿದುಕೊಂಡಂತೆ. ( ಇದರಲ್ಲಿ ಸಂಶಯವೇ ಇಲ್ಲ. )

೪೯. ಕಂಡವರ ದಂಡಿಸುತ | ಕೊಂಡವರ ಒಡವೆಗಳ |
ನುಂಡುಂಡು ಮಲಗಿ, ಮಡಿದ ಮೇಲವಗೆ ಯಮ |
ಗೊಂಡ ತಪ್ಪುವದೆ ಸರ್ವಜ್ಞ ||

ಕಂಡವರನ್ನು ದಂಡಿಸುತ್ತ ಅನ್ಯರ ಒಡವೆಗಳನ್ನು ಅಪಹರಿಸಿ, ಅದನ್ನು ತಿಂದು ಕಾಲ ಕಳೆದು ಸತ್ತು ಹೋದಂಥವನಿಗೆ ಯಮಗೊಂಡ ( ನರಕ )ವು ಎಂದಿಗೂ ತಪ್ಪಲಾರದು.

೫೦. ಉಳ್ಳಲ್ಲಿ ಉಣಲಿಲ್ಲ | ಉಳ್ಳಲ್ಲಿ ಉಡಲಿಲ್ಲ |
ಉಳ್ಳಲ್ಲಿ ದಾನ ಕೊಡಲೊಲ್ಲದವನೊಡವೆ |
ಕಳ್ಳಗೆ ನೃಪಗೆ ಸರ್ವಜ್ಞ ||

(ತನ್ನ ಬಳಿ) ಇದ್ದಾಗ ಸರಿಯಾಗಿ ಊಟ ಮಾಡದಂಥವನು, ಒಳ್ಳೆಯ ಬಟ್ಟೆಗಳನ್ನು ತೊಡಲಾರದಂಥವನು ಹಾಗೂ ( ಸತ್ಪಾತ್ರದಲ್ಲಿ ) ದಾನವನ್ನು ಮಾಡದಂಥವನ ಐಶ್ವರ್ಯವು ಕಳ್ಳರು ಹಾಗೂ ಅರಸನ ಪಾಲಾಗುವದರಲ್ಲಿ ಸಂಶಯವಿಲ್ಲ.

೫೧. ಕೊಟ್ಟುಂಬ ಕಾಲದಲಿ | ಕೊಟ್ಟುಣಲು ಕರಿಯುದಲೆ |
ಹುಟ್ಟಿಯು ಒಳಗೆ ಜೇನಿಕ್ಕಿ ಪರರಿಂಗೆ |
ಬಿಟ್ಟು ಹೋದಂತೆ ಸರ್ವಜ್ಞ ||

ಈ ವಚನದ ಅರ್ಥವೂ ಮೇಲಿನಂತೆಯೇ ಇದೆ. ಅಂದರೆ (ತನ್ನ ಬಳಿ) ಇದ್ದಾಗ ಇತರರಿಗೂ (ಇತ್ತು) ಕೊಟ್ಟು ತಾನೂ ಉಣದಂಥವನ ಬಾಳು ನೆಯ್ಯು, ಜೇನ್ನೊಣವು ತಾನು ತಿನ್ನದೇ ಹುಟ್ಟಿನೊಳಗೆ ತುಪ್ಪವನ್ನು ಕೂಡಿಟ್ಟು ಪರರ ಪಾಲಿಗೆ ಮಾಡಿದಂತೆಯೇ ಸರಿ.

೫೨. ಒಡಲಿಡಿದು ಗಳಿಸಿದಾ | ಒಡವೆಗಳು ಒಡನಿರಲು |
ಕೊಡದುಣ್ಣದಿಟ್ಟು ಮಡಿದರೆ ಒಡವೆಯು |
ನೊಡನೆ ಹೂಳುವರೆ ? ಸರ್ವಜ್ಞ ||

(ತನ್ನ) ಹೊಟ್ಟೆಯನ್ನು ಕಟ್ಟಿ (ಬಂಗಾರದ) ಒಡವೆಗಳನ್ನು ಸಂಗ್ರಹಿಸಿಟ್ಟುಕೊಂಡು (ಯಾರಿಗೂ ದಾನ ಧರ್ಮ ಮಾಡದ) ಒಂದು ದಿನ ಸತ್ತು ಹೋದರೆ ಅವನೊಂದಿಗೆ ಆ ಒಡವೆಗಳನ್ನು ಹೂಳುವರೇ ? ಎಂದಿಗೂ ಇಲ್ಲ.

೫೩. ಈತನ ನೆನಹಿಲ್ಲ | ಮೀಸಲ ತನುವಿಲ್ಲ |
ಲೇಸಪ್ಪುದೊಂದು ನುಡಿಯಿಲ್ಲ, ಕೈಲಾಸ |
ವೇಶಿಯ ಮನೆಯೆ ಸರ್ವಜ್ಞ ||

ಒಂದು ದಿನವೂ ಈಶ್ವರನನ್ನು ನೆನೆಯಲಿಲ್ಲ. ದೇಹವನ್ನು ಶುಚಿಯಾಗಿರಿಸಿಕೊಳ್ಳಲಿಲ್ಲ. ಒಳ್ಳೆಯದೆನ್ನುವ ಒಂದು ಮಾತನ್ನೂ ಆಡಲಿಲ್ಲ. (ಅಂದಾಗ) ಕೈಲಾಸವೇನು ವೇಶ್ಯೆಯ ಮನೆಯೇ (ಎಲ್ಲರೂ ಪ್ರವೇಶಿಸಲು ?)

೫೪. ಸಿರಿಯು ಭರವುಳ್ಳಾಗ । ಮರೆಯದಿರುವವ ಜಾಣ ।
ಕೊರತೆಯಾದಾಗ ಕೊಡಲು ತನಗಿಲ್ಲೆಂದು ।
ಮರುಗುವವನ ನೆಗ್ಗ ಸರ್ವಜ್ಞ ॥

(ತನ್ನ ಬಳಿ) ಐಶ್ವರ್ಯವಿದ್ದಾಗ ( ಅನ್ಯರನ್ನು ) ಮರೆಯಲಾರದಂಥವನು ಜಾಣನು, ಒಳ್ಳೆಯವನು. ಆದರೆ (ತನ್ನಬಳಿ) ಕೊರತೆಯಾದಾಗ (ಮಾತ್ರ) ಕೊಡಲು ಏನೂ ಇಲ್ಲವೆಂದು ಮರುಗುವವನು ಮಹಾ ಮೂರ್ಖನು.

೫೫. ಅನ್ನ ದಾನಗಳಿಂದ । ಮುನ್ನದಾನಗಳಿಲ್ಲ ।
ಅನ್ನಕ್ಕೆ ಮಿಗಿಲು ಇನ್ನಿಲ್ಲ ಜಗದೊಳಗೆ ।
ಅನ್ನವೇ ಪ್ರಾಣ ಸರ್ವಜ್ಞ ॥

ಅನ್ನದಾನಕ್ಕಿಂತ ಹೆಚ್ಚಿನ ದಾನವು ಯಾವದೂ ಇಲ್ಲ. ಅಲ್ಲದೆ ಅನ್ನಕ್ಕಿಂತ ಮಿಗಿಲಾದುದು ಕೂಡ ಯಾವುದೂ ಇಲ್ಲ (ಆದಕ್ಕಾಗಿಯೇ) ಈ ಜಗತ್ತಿನೊಳಗೆ ಅನ್ನವೇ ಪ್ರಾಣವೆನ್ನಲು ಅಡ್ಡಿಯಿಲ್ಲ.

೫೬. ವೇದವೇ ಹಿರಿದೆಂದು । ವಾದವನು ಮಾಡುವಿರಿ ।
ವೇದದಲೇನು ಅರಿಯದಿಹುದು ಅನುಭವಿಯ ।
ವೇದವೇ ವೇದ ಸರ್ವಜ್ಞ ॥

ವೇದವೇ ದೊಡ್ಡದು ಎಂದು ವಾದಿಸುವಿರಿ. ಆದರೆ ವೇದದಲ್ಲಿ(ಯಾರೂ) ಅರಿಯಲಾರದಂತಹದು ಏನಿದೆ ? ವೇದವೆಂದರೆ ಅನುಭವಿಕನ ಹೇಳಿಕೆಯೇ ಹೊರತು ಬೇರೇನೂ ಅಲ್ಲ.

೫೭. ಓದು ವಾದಗಳಿಂದ । ವೇದತಾ ಘನವಹುದೇ ।
ವೇದದ ಹೃದಯವರಿಯದಲೆ ದ್ವಿಜರೆಲ್ಲ ।
ಬೂದಿಯಾಗಿಹರು ಸರ್ವಜ್ಞ ॥

ವಿದ್ಯಾರ್ಜನೆ ಹಾಗು ಚರ್ಚೆಗಳಿಗಿಂತ ವೇದವೇ ಹೆಚ್ಚಿನದೆ? (ಎಂದಿಗೂ ಅಲ್ಲ) ವೇದದ ತಿರುಳನ್ನರಿಯದೇ ದ್ವಿಜರೆಲ್ಲ ( ಇಂದು ) ಬೂದಿಯಾಗುತ್ತಿರುವರು.

೫೮. ಹಾದರದ ಕಥೆಯನ್ನು | ಸೋದರರ ವಧೆಯನ್ನು |
ಆಧರಿಸಿ ಪುಣ್ಯಕಥೆಯೆಂದು ಕೇಳುವವರು |
ಮಾದಿಗರು ನೋಡ ಸರ್ವಜ್ಞ ||

ವ್ಯಭಿಚಾರದಿಂದ ತುಂಬಿದ ಕಥೆಯನ್ನೂ, ಸಹೋದರರ ಕೊಲೆಯನ್ನೂ ಅತ್ಯಂತ ಆದರದಿಂದ ಪುಣ್ಯಕಥೆಯೆಂದು ಕೇಳುವಂಥವರು ಮಾದಿಗರಲ್ಲದೆ ಇನ್ನಾರು ?

೫೯. ನೀರಮುಳುಗಿದ ವಿಪ್ರ | ಹಾರುವಡೆ ಸ್ವರ್ಗಕ್ಕೆ |
ಹಾರುವನೊಲು ಮುಳುಗಿಪ್ಪ ಕಪ್ಪೆ ತಾ |
ಹಾರಬೇಕೆಂದ ಸರ್ವಜ್ಞ ||

ನೀರೊಳಗೆ ಮುಳುಗು ಹಾಕುವ ಬ್ರಾಹ್ಮಣನು ಸ್ವರ್ಗಕ್ಕೆ ಹೋಗಬಹುದಾದರೆ (ಆ) ಹಾರುವನಂತೆ ನೀರೊಳಗೆ ಮುಳುಗುಹಾಕುವ ಕಪ್ಪೆಯು ಕೂಡ ಸ್ವರ್ಗಕ್ಕೆ ಹೋಗಬೇಕಾಗುವದು.

೬೦. ನಿತ್ಯ ನೀರ್ಮುಳುಗುವವನು | ಹತ್ತಿಪಡೆ ಸ್ವರ್ಗವನು |
ಎತ್ತಿ ಜನ್ಮವನು ಜಲದೊಳಿಪ್ಪಾ ಕಪ್ಪೆ |
ಹತ್ತದೇಕೆಂದ ಸರ್ವಜ್ಞ ||

ಪ್ರತಿನಿತ್ಯವೂ ನೀರೊಳಗೆ ಮುಳುಗಿಮುಳುಗಿ ಏಳುವಂಥವನು ಸ್ವರ್ಗಕ್ಕೆ ಹೋಗುತ್ತಿದ್ದರೆ, ನೀರೊಳಗೇ ಜನ್ಮವೆತ್ತಿದ ಕಪ್ಪೆ ಏತಕ್ಕೆ ಸ್ವರ್ಗಕ್ಕೆ ಹತ್ತಲಾರದು?

೬೧. ಮುಟ್ಟಿ ಶ್ರೀ ಗಂಧವನು | ಇಟ್ಟು ತಾ ನೊಸಲೊಳಗೆ |
ನೆಟ್ಟನೆಯೆ ಸ್ವರ್ಗ ಪಡೆವಡೆ ಸಾಣೆಕಲ್ |
ಪಟ್ಟ ಕೇಡೇನು ಸರ್ವಜ್ಞ ||

ಬಹಳಷ್ಟು ಶ್ರೀಗಂಧವನ್ನು ಹಣೆಯ ಮೇಲೆ ಧರಿಸಿಕೊಂಡಾ ಕ್ಷಣಕ್ಕೆ ನೆಟ್ಟಗೆ ಸ್ವರ್ಗಕ್ಕೆ ಹೋಗುವಂತಾದರೆ (ತನ್ನ ಮೇಲೆಯೇ ಶ್ರೀಗಂಧವನ್ನು ತಯಾರಿಸಲು ಅನುವು ಮಾಡಿಕೊಟ್ಟ) ಸಾಣೆಕಲ್ಲು ಮಾಡಿದ ಪಾಪವೇನು ? (ಅದು ಏಕೆ ಸ್ವರ್ಗಕ್ಕೆ ಸೇರಬಾರದು ?)

೬೨. ಸುಟ್ಟ ಬೂದಿಯ ತಂದು। ದಟ್ಟವಾಗಿಯೇ ಬಡಿದು।
ಶ್ರೇಷ್ಠ ಸ್ವರ್ಗವನು ಅಡರುವಡೆ ಕತ್ತೆ ತಾ।
ಪಟ್ಟ ಕೇಡೇನು ಸರ್ವಜ್ಞ॥

ಸುಟ್ಟ ಬೂದಿಯನ್ನು ತಂದು ಮೈಗೆಲ್ಲ ಬಳಿದುಕೊಳ್ಳುವದರಿಂದ ಶ್ರೇಷ್ಠ ಸ್ವರ್ಗವನ್ನು ಸೇರುತ್ತಿದ್ದರೆ (ಅಂಥ ಬೂದಿಯಲ್ಲಿಯೇ ಹೊರಳಾಡುವ) ಕತ್ತೆ ಮಾಡಿದ ಪಾಪವೇನು ? (ಅದು ಏತಕ್ಕೆ ಸ್ವರ್ಗವನ್ನು ಸೇರಬಾರದು?)

೬೩. ಮೂರೆಳೆಯನುಟ್ಟಾತ। ಹಾರುವಡೆ ಸ್ವರ್ಗಕೆ।
ನೂರೆಂಟು ಎಳೆಯ ಕವುದಿಯನು ಹೊದ್ದಾತ।
ಹಾರನೇಕಯ್ಯ ಸರ್ವಜ್ಞ॥

ಮೂರೆಳೆಯ (ಜನಿವಾರವ) ನ್ನು ಧರಿಸಿಕೊಂಡವನು ಸ್ವರ್ಗಕ್ಕೆ ಹೋಗಬಲ್ಲನಾದರೆ ನೂರಾ ಎಂಟು ಎಳೆಗಳುಳ್ಳಂಥ ಕವುದಿಯನ್ನು ಹೊದ್ದುಕೊಳ್ಳುವಂಥವನು ಸ್ವರ್ಗಕ್ಕೇಕೆ ಹೋಗಲಾರ ?

೬೪. ಹಿರಿದು ಕರ್ಮವ ಮಾಡಿ। ಹರಿವ ನೀರೊಳು ಮುಳುಗೆ।
ಕರಗುವದೇ ಪಾಪ ? ತಾ ಮುನ್ನ ಮಾಡಿದ್ದು।
ಎರೆಯ ಕಲ್ದೆಂಟೆ ಸರ್ವಜ್ಞ॥

ಪಾಪ ಕರ್ಮವನ್ನು ಮಾಡಿ ಹರಿಯುವ (ಹೊಳೆಯ) ನೀರೊಳಗೆ ಮುಳುಗಿ ಎದ್ದರೆ ಪಾಪವು ಕರಗಿ ಹೋಗುವದೇ ? (ಆ ರೀತಿ ಕರಗಿಹೋಗಲು ಅದು, ಅಂದರೆ) ಮೊದಲು ಮಾಡಿದ ಪಾಪವು ಎರೆ ಮಣ್ಣಿನ ಮುದ್ದೆಯೇ ಕರಗಿ ಹೋಗಲಿಕ್ಕೆ ?

೬೫. ಮೀಪರೆ ಪೋಪರೇ। ಪಾಪವೇನದು ಕೆಸರೇ।
ಮೀಪರೇ ಮೈಯ್ಯ ಮಲ ಪೋಪುದಾ ಪಾಪ।
ಲೇಪವಾಗಿಕ್ಕು ಸರ್ವಜ್ಞ॥

ಸ್ನಾನ ಮಾಡಿದರೆ ಹೋಗಲಿಕ್ಕೆ ಪಾಪವೇನು ಕೆಸರೇ ? ಸ್ನಾನಮಾಡುವದರಿಂದ ಮೈಮೇಲಿನ ಹೊಲಸು ಹೋಗಬಹುದು; (ಆದರೆ) ಪಾಪವು ಲೇಪದಂತೆ ಅಂಟಿಕೊಂಡೇ ಇರುವದು.

೩೬. ಪಾಪ ಹೋಯಿತು ಎಂದು । ಸೋಪಾನೆಗಳನೇರಿ ।
ಕೋಪ ಕರ್ಮಗಳ ಬಿಡದಿರೆ ಅದು ವಜ್ರ ।
ಲೇಪವಂತಿಹುದು ಸರ್ವಜ್ಞ ॥

(ಸ್ನಾನಾದಿಗಳಿಂದ) ಪಾಪವೆಲ್ಲ ಹೋಗಿಬಿಟ್ಟಿತು. ಎಂದು (ತನ್ನಷ್ಟಕ್ಕೆ ತಾನೇ ತಿಳಿದುಕೊಂಡು) ಸೋಪಾನವನ್ನೇರಿ ಕೋಪವೇ ಮೊದಲಾದ ಕರ್ಮಗಳಿಂದ ದೂರವಿರದೇ ಅಂಥವುಗಳನ್ನು ಮುಂದುವರಿಸುತ್ತ ಹೋದರೆ ಅದು (ಪಾಪವು) ವಜ್ರಲೇಪದಂತೆ ಕಠಿಣವಾಗುತ್ತ ಹೋಗುವದೇ ವಿನಹ ಕಡಿಮೆಯಾಗಲಾರದು.

೩೭. ಕನ್ನೆಯಾಡನು ತಂದು । ಬನ್ನಬಡಿಸುತ ಕೊಂದು ।
ಉನ್ನತವ ಪಡೆವ ವಿಪ್ರನಿಂ ಅಗಸರ ।
ಕುನ್ನಿ ಲೇಸೆಂದ ಸರ್ವಜ್ಞ ॥

(ಮಾಡಲಿರುವ ಯಾಗಕ್ಕಾಗಿ) ಒಂದು ಆಡನ್ನು ತಂದು ಅದನ್ನು ಕೊಂದು ಸ್ವರ್ಗವನ್ನು ಸೇರುವ ಬ್ರಾಹ್ಮಣನಿಗಿಂತ ಅಗಸರವನ ಕುನ್ನಿಯು ಎಷ್ಟೋ ಪಾಲು ಮೇಲು.

೩೮. ಜನ್ಮವಿದ್ಯವು ಎಂದು । ಕನ್ಯೆಯಾಡನು ತಿಂದು ।
ಉನ್ನತದ ಸ್ವರ್ಗ ಪಡೆಯುವಡೆ, ಹಿಂಡಾಡ ।
ತಿನ್ಬನೇಕುಳಿದ ಸರ್ವಜ್ಞ ॥

ಯಜ್ಞದ ವಿದ್ಯವು ಎಂದುಕೊಂಡು ಎಳೆಯ ಆಡನ್ನು ಕೊಂದು ತಿಂದು ಸ್ವರ್ಗವನ್ನು ಸೇರುತ್ತಿರುವಾಗ ಅಪರಿಮಿತ ಆಡುಗಳನ್ನು ತಿನ್ನುವವನು ಏತಕ್ಕೆ ಹಿಂದುಳಿದ ?

೩೯. ಒಂದಾಡ ತಿಂಬಾತ । ಹೊಂದಿದಡೆ ಸ್ವರ್ಗವನು ।
ಎಂದೆಂದು ಆಡನು ಕಡಿತಿಂಬ ಕಟಿಕ ತಾ ।
ನಿಂದ್ರನೇಕಾಗ ಸರ್ವಜ್ಞ ॥

(ಕೇವಲ) ಒಂದೇ ಆಡನ್ನು ತಿನ್ನುವವನು ಸ್ವರ್ಗವನ್ನು ಸೇರಿದರೆ, ತಾನು ಜೀವಿಸಿರುವವರೆಗೆ ಪ್ರತಿದಿನವೂ ಆಡುಗಳನ್ನು ಕಡಿದು ತಿನ್ನುವ ಕಟುಕನೇಕೆ ಇಂದ್ರಪದವಿಯನ್ನು ಪಡೆಯಲೊಲ್ಲ ?

೭೦. ಬಾಡ ತಿಂಬಾತಂಗೆ । ಆಡೇನು ಆವೇನು ? ।
ಕೋಡಗವೇನು ನರಿಯೇನು ? ಮನೆಯಲಿ ।
ದಡ್ಡನಾಯಿಯೇನು ಸರ್ವಜ್ಞ ॥

ಮಾಂಸವನ್ನು ತಿನ್ನುವವನಿಗೆ (ಅದು ಯಾವ ಪ್ರಾಣಿಯದಿದ್ದರೇನು?) ಆಡಿನದು ಇರಲಿ, ಆಕಳದ್ದೇ ಇರಲಿ, ಮಂಗನದೇ ಇರಲಿ, ನರಿಯದೇ ಇರಲಿ (ಕೊನೆಗೆ) ಮನೆಯೊಳಗಿನ ನಾಯಿಯಾದರೂ ಅಷ್ಟೇ (ಒಟ್ಟು ಮಾಂಸವಿದ್ದರಾಯಿತು.

೭೧. ಹೊಲೆಯ ಮಾದಿಗರುಂಡು। ತೊಲಗಿಟ್ಟ ತೊಗಲುಗುಸಲೆ ।
ಕುಲಜರೆಂಬವರಿಗುಣಲಾಯ್ತು ಹೊಲೆಯರ ।
ಕುಲವಾವುದಯ್ಯ ಸರ್ವಜ್ಞ॥

ಹೊಲೆ–ಮಾದಿಗರು ತಾವು ತಿಂದು ಉಳಿಸಿದ ಚರ್ಮವನ್ನೇ ಒಳ್ಳೆಯ ಕುಲದವರು ಎಂದು ಹೇಳಿಕೊಳ್ಳುವಂಥವರು, ಊಟಕ್ಕೆ ಕೂಡಲು ಅದನ್ನು ಉಪಯೋಗಿಸಿಕೊಳ್ಳುವಾಗ ಹೊಲೆಯರ ಕುಲವು ಎಂಥದೆಂದು ಹೇಳಬೇಕು ?

೭೨. ಕುಲವಿಲ್ಲ ಯೋಗಿಗೆ । ಛಲವಿಲ್ಲ ಜ್ಞಾನಿಗೆ ।
ತೊಲೆಗಂಬವಿಲ್ಲ ಗಗನಕ್ಕೆ, ಸ್ವರ್ಗದಲ್ಲಿ ।
ಹೊಲಗೇರಿಯಿಲ್ಲ ಸರ್ವಜ್ಞ ॥

ಯೋಗಿಗೆ ಕುಲವೆಂಬುದು ಇರುವದಿಲ್ಲ, ಜ್ಞಾನಿಯಾದವನಿಗೆ ಛಲ (ಹಟ) ವಿರುವದಿಲ್ಲ; ಆಕಾಶಕ್ಕೆ ಆಧಾರರೂಪವಾಗಿ ತೊಲೆ ಕಂಬಗಳೂ ಇಲ್ಲ; (ಅದರಂತೆ ಸ್ವರ್ಗದಲ್ಲಿ ಮೇಲು-ಕೀಳೆಂಬ ಭೇದಗಳಿರುವದಿಲ್ಲ.

೭೩. ಎಲುವಿಲ್ಲ ನಾಲಿಗೆಗೆ । ಬಲವಿಲ್ಲ ಬಡವಂಗೆ ।
ತೊಲೆಕಂಬವಿಲ್ಲ ಗಗನಕ್ಕೆ, ದೇವರಲಿ ।
ಕುಲಭೇದವಿಲ್ಲ ಸರ್ವಜ್ಞ ॥

ನಾಲಿಗೆಗೆ ಎಲುಬು ಇರುವದಿಲ್ಲ: ಬಡವನಿಗೆ (ಯಾರದೂ) ಬೆಂಬಲವಿರುವದಿಲ್ಲ; ಆಕಾಶಕ್ಕೆ ತೊಲೆಯ ಕಂಬಗಳು ಇರುವದಿಲ್ಲ. (ಅದರಂತೆ) ದೇವರ ಬಳಿ (ಯಾವುದೇ ರೀತಿಯ) ಜಾತಿಭೇದವಿರುವದಿಲ್ಲ.

೭೪. ಸತ್ತ ಕತ್ತೆಯ ಹೊತ್ತ । ರೆತ್ತಣವ ಹೊಲೆಯನು ? ।
ಉತ್ತಮನೆಂದು ಹೆರರೊಡವೆ ಹೊತ್ತರವ ।
ನಿತ್ಯವೂ ಹೊಲೆಯ ಸರ್ವಜ್ಞ ॥

(ಕೇವಲ ಸತ್ತು ಬಿದ್ದಂಥ ಕತ್ತೆಯನ್ನು ಹೊತ್ತಾ ಕ್ಷಣಕ್ಕೆ (ಅವನು) ಹೊಲೆಯನಾಗಲಾರನು. ಉತ್ತಮನೆಂದು ಹೇಳಿಸಿಕೊಂಡು ನಿತ್ಯವೂ ಅನ್ಯರ (ಎರಡನೆಯವರ) ಸೊತ್ತನ್ನು ಎತ್ತಿಹಾಕುವವನು ಮಾತ್ರ ನಿತ್ಯವೂ ಹೊಲೆಯನು. (ಇದರಲ್ಲಿ ಸಂಶಯವೇ ಇಲ್ಲ.)

೭೫. ಮುಟ್ಟಾದ ಹೊಲೆಯೊಳಗೆ । ಹುಟ್ಟಿಹುದು ಜಗವೆಲ್ಲ ।
ಮುಟ್ಟಬೇಡೆಂದು ತೊಲಗುವಾ ಹಾರುವನು ।
ಹುಟ್ಟಿದನು ಎಲ್ಲಿ ಸರ್ವಜ್ಞ ॥

ಮುಟ್ಟಾದಂಥ ಹೊಲಸಿನೊಳಗೇ ಇಡಿಯ ಜಗತ್ತೆಲ್ಲ ಹುಟ್ಟಿರುವಾಗ ಮುಟ್ಟಬೇಡವೆಂದು ದೂರ ಹಾಯುವಂಥ ಹಾರುವನು ಹುಟ್ಟಿರುವದಾದರೂ ಎಲ್ಲಿ ? (ಅದೇ ಹೊಲೆಯಲ್ಲಿಯೇ ತಾನೆ ?)

೭೬. ಮುಟ್ಟುಕಂಡವಳನ್ನು । ಮುಟ್ಟಲೊಲ್ಲರು ನೋಡ ।
ಮುಟ್ಟು ತಾ ತಡೆದು ಹುಟ್ಟಿದಾ ದೇಹವನು ।
ಮುಟ್ಟುತಿಹರೇಕೆ ಸರ್ವಜ್ಞ ॥

ಮುಟ್ಟಾದ ಹೆಂಗಸನ್ನು ಮುಟ್ಟಲು ಹೆದರುತ್ತಾರೆ. (ಆದರೆ) ಮುಟ್ಟು ತಡೆದ ನಂತರವೇ ಹುಟ್ಟಿದ ದೇಹವನ್ನು ಮಾತ್ರ ಮುಟ್ಟುತ್ತಾರೆ. ಅದು ಏಕೆ ?

೭೭. ಉತ್ತಮ ಪಾಲ್ಗಡಲೋ । ಳೆತ್ತಿಹರೆ ಜನ್ಮವನು ? ।
ಉತ್ತಮರು ಅಧಮರೆನಬೇಡ, ಹೊಲೆಯಿಲ್ಲ ।
ದುತ್ತಮರು ಎಲ್ಲಿ ಸರ್ವಜ್ಞ ॥

(ತಾವು) ಉತ್ತಮರು, ಒಳ್ಳೆಯ ಕುಲದಲ್ಲಿ ಜನಿಸಿದವರು ಎಂದು ಹೇಳಿಕೊಳ್ಳುವವರು ಹಾಲಿನ ಸಾಗರದೊಳಗೆ ಜನ್ಮವೆತ್ತಿದ್ದಾರೆಯೇ ? (ಅದಕ್ಕಾಗಿ) ಉತ್ತಮರು–ಅಧಮರು ಎಂಬ ಭೇದಗಳೆಣಿಸಬೇಡ. ಹೊಲೆಯಿಲ್ಲದಂಥ ಉತ್ತಮರಾದರೂ ಎಲ್ಲಿದ್ದಾರೆ ? (ಇಲ್ಲವೇ ಇಲ್ಲ.)

೭೮. ಎಂಜಲೆಂಜಲು ಎಂದು । ಅಂಜುವರು ಹಾರುವರು ।
ಎಂಜಲಿಂದಾದ ತನುವಿರಲು, ಅದನರಿದು ।
ಅಂಜುತಿಹರೇಕೆ ಸರ್ವಜ್ಞ ॥

(ಈ) ಹಾರುವರು 'ಎಂಜಲು ಎಂಜಲು' ಎಂದು ಹಾರುತ್ತಿರುವರು. ತನುವೇ ಎಂಜಲಿನಿಂದಾದ ಬಳಿಕ ಅದನ್ನರಿತೂ ( ಈ ರೀತಿ ) ಅಂಜುವದೇ ತಕ್ಕೆ ? ( ಅದರಲ್ಲೇನೂ ಹುರುಳಿಲ್ಲ. )

೭೯. ಹಲ್ಲು ಎಲುವೆಂಬುದನು । ಎಲ್ಲರೂ ಅರಿದಿಹರು ।
ಹಲ್ಲಿನಿಂದೆಲ್ಲ ಅಗಿದು ನುಂಗಿದಬಳಿಕ ।
ಎಲ್ಲಿಯದು ಶೀಲ ? ಸರ್ವಜ್ಞ ॥

( ಬಾಯೊಳಗಿನ ) ಹಲ್ಲು, ಎಲುವೆಂಬುದು ಎಲ್ಲರಿಗೂ ಗೊತ್ತಿದ್ದ ಮಾತಾಗಿದೆ. ( ಹೀಗಿದ್ದರೂ ಆ ) ಹಲ್ಲಿನಿಂದ ಎಲ್ಲ ಪದಾರ್ಥಗಳನ್ನೂ ಜಗಿದು ತಿನ್ನುತ್ತಾರೆಂದ ಮೇಲೆ (ಅವರ) ಶೀಲವೆಲ್ಲಿ ಉಳಿಯಿತು ?

೮೦. ನಡೆವುದೊಂದೇ ಭೂಮಿ । ಕುಡಿವುದೊಂದೇ ನೀರು ।
ನಡುವಗ್ನಿಯೊಂದೇ ಇರುತಿರಲು, ಕುಲಗೋತ್ರ ।
ನಡುವೆ ಎತ್ತಣದು ಸರ್ವಜ್ಞ ॥

(ಎಲ್ಲರೂ) ತಿರುಗಾಡವಂಥ ಭೂಮಿಯು ಒಂದೇ; (ಎಲ್ಲರೂ) ಕುಡಿಯುವ ನೀರು ಒಂದೇ; ಹಾಗೂ ಸುಡುವಂಥ ಅಗ್ನಿಯೂ ಕೂಡ ಒಂದೇ ಇರುತ್ತಿರುವಾಗ (ಎಲ್ಲರ) ನಡುವೆ ಬರುವಂಥ ಕುಲಗೋತ್ರಗಳು ಎಲ್ಲಿಯವು ?

೮೧. ಕುಡಿವ ನೀರನು ತಂದು । ಅಡಿಗೆ ಮಾಡಿದ ಮೇಲೆ ।
ಒಡನುಣ್ಣಲಾಗದಿಂತೆಂಬ ಮನುಜರ ।
ಒಡನಾಟವೇಕೆ ಸರ್ವಜ್ಞ ॥

(ಎಲ್ಲರೂ) ಕುಡಿಯುವಂಥ ನೀರನ್ನೇ ತಂದು ಅಡಿಗೆ ಮಾಡಿದ ಮೇಲೆ ( ಅನ್ಯರನ್ನು )ಜೊತೆಗೆ ಸೇರಿಸಿಕೊಂಡು ಊಟ ಮಾಡಲಾರೆ ಎಂಬವರ ಸಹವಾಸವಾದರೂ ಎತಕ್ಕೆ ? ( ಬೇಡವೇ ಬೇಡ. )

೮೨. ಅವಯವಗಳೆಲ್ಲರಿಗೆ | ಸಮನಾಗಿ ಇರುತಿರಲು |
ಭವಿ, ಭಕ್ತ, ಶ್ವಪಚ ಶೂದ್ರರಿವರಿಂತೆಂಬ |
ಕವನನೆತ್ತಣದು ಸರ್ವಜ್ಞ ||

ಎಲ್ಲರಿಗೂ ಒಂದೇ ರೀತಿಯ ಅವಯವಗಳಿರುತ್ತಿರಲು ಇವನು ಶ್ರೇಷ್ಠ ಇವನು ಕನಿಷ್ಠ, ಇವನು ಶೂದ್ರನೆಂಬ ಸುಳ್ಳು ಕತೆಯೆಲ್ಲಿಯದು ? (ಆದರಲ್ಲಿ ಹುರುಳಿಲ್ಲವೆಂದರ್ಥ.)

೮೩. ಜಾತಿ ಹೀನನ ಮನೆಯ | ಜ್ಯೋತಿ ತಾ ಹೀನವೇ ? |
ಜಾತಿ ವಿಜಾತಿ ಎನಬೇಡ, ದೇವನೊಲಿ |
ದಾತನೇ ಜಾತ ! ಸರ್ವಜ್ಞ ||

ಜಾತಿಹೀನನೆಂಬುವವನ ಮನೆಯಲ್ಲಿಯ ಜ್ಯೋತಿಯೂ ಹೀನವೇ ? ( ತನ್ನ ) ಜಾತಿ-ಪರಜಾತಿಯೆಂದು ಭೇದವನ್ನಿಡಬೇಡ. ದೇವರನ್ನೊಲಿಸಿ ಕೊಂಡವನೇ ಉತ್ತಮ ಜಾತಿಯವನು.

೮೪. ಹಸಿವಿಲ್ಲದುಣಬೇಡ | ಹಸಿದು ಮತ್ತಿರಬೇಡ |
ಬಿಸಿಗೂಡಿ ತಂಗಳುಣಬೇಡ ವೈದ್ಯನ |
ಬೆಸಸಲೇ ಬೇಡ ಸರ್ವಜ್ಞ ||

ಹಸಿವು ಇಲ್ಲದೇ ಊಟ ಮಾಡಬೇಡ, ಹಸಿವಾಗಿದ್ದರೆ ಮಾತ್ರ ಊಟ ಮಾಡದೆ ಇರಬೇಡ. ಬಿಸಿಯಲ್ಲಿ ತಂಗುಳ ಬೆರೆಸಿದ ಅನ್ನವನ್ನು ಉಣಬೇಡ. ಅಂದರೆ ಯಾವಾಗಲೂ ವೈದ್ಯನಿಂದ ದೂರ ಇರುವಿ.

೮೫. ಹಾರುವರು ಸ್ವರ್ಗದ | ದಾರಿಯನು ಬಲ್ಲರೇ ? |
ನಾರಿ ಪ್ರತಿವೃತದಿ ನಡೆದಿಹರೆ ಸ್ವರ್ಗದ |
ದಾರಿ ದೋರುವಳು ಸರ್ವಜ್ಞ ||

ಹಾರುವರು (ಬ್ರಾಹ್ಮಣರು) ಸ್ವರ್ಗದ ಹಾದಿಯನ್ನು ಬಲ್ಲರೇ ? (ಅವರೇನು ನೋಡಿಕೊಂಡು ಬಂದಿದ್ದಾರೆಯೇ) (ಆದರೆ) ಪತಿವ್ರತಾ ಶಿರೋಮಣಿಯಾದ ನಾರಿಯು (ಮಾತ್ರ) ಸ್ವರ್ಗದ ದಾರಿಯನ್ನು ತೋರಿಸಬಲ್ಲಳು.

೬೭. ಉತ್ತಮರು ಎಂಬವರು । ಸತ್ಯದಲಿ ನಡೆದಿಹರು ।
ಉತ್ತಮರಧಮರೆನಬೇಡ, ಅವರೊಂದು ।
ಮುತ್ತಿನಂಥವರು ಸರ್ವಜ್ಞ ॥

ಒಳ್ಳೆಯರೆಂದೆನ್ನಿಸಿಕೊಳ್ಳುವವರು ಸತ್ಯದಿಂದಲೇ ನಡೆದಿರುವರು. (ನಡೆಯುತ್ತಾರೆ.) ಅಂಥ ಉತ್ತಮರನ್ನು ಅಧಮರೆಂದು ತೆಗಳಬೇಡ. ಅವರೊಂದು ಅಮೂಲ್ಯ ಮುತ್ತಿನಂತೆ ಇರುವರು.

೬೭. ಉತ್ತಮದ ವರ್ಣಿಗಳೇ । ಉತ್ತಮರು ಎನಬೇಡ ।
ಮತ್ತೆ ತನ್ನಂತೆ ಬಗೆವರನೆಲ್ಲರನು ।
ಉತ್ತಮರೆನ್ನು ಸರ್ವಜ್ಞ ॥

(ವರ್ಣಾಶ್ರಮದಲ್ಲಿಯ ಪ್ರಕಾರ) ಮೇಲಿನವರನ್ನು ಉತ್ತಮರೆನಬೇಡ. ತನ್ನಂತೆಯೇ ಪರರನ್ನೂ ತಿಳಿದುಕೊಳ್ಳುವಂಥವನನ್ನೇ ಉತ್ತಮನೆಂದು ಕರೆ.

೬೮. ಕೊಟ್ಟವರ ತಲೆಬೆನ್ನ । ತಟ್ಟುವರು ಹಾರುವರು ।
ಬಿಟ್ಟರೆ ಕುಟ್ಟಿಕೆಡಹುವರು, ಹಾರುವರ ।
ಬಟ್ಟೆ ಬೇಡೆಂದ ಸರ್ವಜ್ಞ ॥

(ತಮಗೆ ಏನಾದರೂ) ಕೊಟ್ಟವರ ಬೆನ್ನನ್ನು ಹಾರುವರು ಛಪ್ಪರಿಸುವರು. (ಒಂದುವೇಳೆ) ಕೊಡದೆ ಹೋದರೆ ಹೊಡೆದು ಕೆಡವುವರು. (ಅದಕ್ಕಾಗಿ ಅಂಥ) ಹಾರುವರ ಹಾದಿಯೇ ಬೇಡ.

೬೯. ಅರ್ಥ ಸಿಕ್ಕರೆ ಬಿಡರು । ವ್ಯರ್ಥದಿ ಶ್ರಮ ಬಡರ ।
ನರ್ಥಕೆ ಪರರ ನೂಂಕಿಪರು, ವಿಪ್ರರಿಂ ।
ಸ್ವಾರ್ಥರಿನ್ನಿಲ್ಲ ಸರ್ವಜ್ಞ ॥

( ಈ ಬ್ರಾಹ್ಮಣರು ) ಹಣ ಸಿಕ್ಕರೆ ಬಿಡಲಾರರು. ವ್ಯರ್ಥ ಶ್ರಮಪಡಲಾರರು. (ಅಲ್ಲದೆ) ಇತರರನ್ನು ಅನರ್ಥದೆಡೆಗೆ ನೂಕಲೂ ಹಿಂದೆ ಮುಂದೆ ನೋಡುವದಿಲ್ಲ. ( ಅದಕ್ಕಾಗಿ ) ಬ್ರಾಹ್ಮಣರಂಥಾ ಸ್ವಾರ್ಥಿಗಳು ಎಲ್ಲಿಯೂ ಇಲ್ಲ.

೬೨. ಅವಯುವಗಳೆಲ್ಲರಿಗೆ । ಸಮನಾಗಿ ಇರುತಿರಲು ।
ಭವಿ, ಭಕ್ತ, ಶ್ವಪಚ ಶೂದ್ರರಿವರಿಂತೆಂಬ ।
ಕವನವೆತ್ತಣದು ಸರ್ವಜ್ಞ ॥

ಎಲ್ಲರಿಗೂ ಒಂದೇ ರೀತಿಯ ಅವಯುವಗಳಿರುತ್ತಿರಲು ಇವನು ಶ್ರೇಷ್ಠ, ಇವನು ಕನಿಷ್ಠ, ಇವನು ಶೂದ್ರನೆಂಬ ಸುಳ್ಳು ಕತೆಯೆಲ್ಲಿಯದು ? (ಅದರಲ್ಲಿ ಹುರುಳಿಲ್ಲವೆಂದರ್ಥ.)

೬೫. ಜಾತಿ ಹೀನನ ಮನೆಯ । ಜ್ಯೋತಿ ತಾ ಹೀನವೇ ? ।
ಜಾತಿ ವಿಜಾತಿ ಎನಬೇಡ, ದೇವನೊಲಿ ।
ದಾತನೇ ಜಾತ ! ಸರ್ವಜ್ಞ ॥

ಜಾತಿಹೀನನೆಂಬುವವನ ಮನೆಯಲ್ಲಿಯ ಜ್ಯೋತಿಯೂ ಹೀನವೇ ? (ತನ್ನ) ಜಾತಿ-ಪರಜಾತಿಯೆಂದು ಭೇದವನ್ನಿಡಬೇಡ. ದೇವರನ್ನೊಲಿಸಿ ಕೊಂಡವನೇ ಉತ್ತಮ ಜಾತಿಯವನು.

೬೪. ಹಸಿವಿಲ್ಲದುಣಬೇಡ । ಹಸಿದು ಮತ್ತಿರಬೇಡ ।
ಬಿಸಿಗೂಡಿ ತಂಗಳುಣಬೇಡ ವೈದ್ಯನ ।
ಬೆಸಸಲೇ ಬೇಡ ಸರ್ವಜ್ಞ ॥

ಹಸಿವು ಇಲ್ಲದೇ ಊಟ ಮಾಡಬೇಡ, ಹಸಿವಾಗಿದ್ದರೆ ಮಾತ್ರ ಊಟ ಮಾಡದೆ ಇರಬೇಡ. ಬಿಸಿಯಲ್ಲಿ ತಂಗುಳ ಬೆರೆಸಿದ ಅನ್ನವನ್ನು ಉಣಬೇಡ. ಅಂದರೆ ಯಾವಾಗಲೂ ವೈದ್ಯನಿಂದ ದೂರ ಇರುವಿ.

೬೫. ಹಾರುವರು ಸ್ವರ್ಗದ । ದಾರಿಯನು ಬಲ್ಲರೇ ? ।
ನಾರಿ ಪ್ರತಿವ್ರತದಿ ನಡೆದಿಹರೆ ಸ್ವರ್ಗದ ।
ದಾರಿ ದೋರುವಳು ಸರ್ವಜ್ಞ ॥

ಹಾರುವರು (ಬ್ರಾಹ್ಮಣರು) ಸ್ವರ್ಗದ ಹಾದಿಯನ್ನು ಬಲ್ಲರೇ ? (ಅವರೇನು ನೋಡಿಕೊಂಡು ಬಂದಿದ್ದಾರೆಯೇ) (ಆದರೆ) ಪತಿವೃತಾ ಶಿರೋಮಣಿಯಾದ ನಾರಿಯು (ಮಾತ್ರ) ಸ್ವರ್ಗದ ದಾರಿಯನ್ನು ತೋರಿಸಬಲ್ಲಳು.

೮೬. ಉತ್ತಮರು ಎಂಬವರು | ಸತ್ಯದಲಿ ನಡೆದಿಹರು |
ಉತ್ತಮರಧಮರೆನಬೇಡ, ಅವರೊಂದು |
ಮುತ್ತಿನಂಥವರು ಸರ್ವಜ್ಞ ||

ಒಳ್ಳೆಯರೆಂದೆನ್ನಿಸಿಕೊಳ್ಳುವವರು ಸತ್ಯದಿಂದಲೇ ನಡೆದಿರುವರು. (ನಡೆಯುತ್ತಾರೆ.) ಅಂಥ ಉತ್ತಮರನ್ನು ಅಧಮರೆಂದು ತೆಗಳಬೇಡ. ಅವರೊಂದು ಅಮೂಲ್ಯ ಮುತ್ತಿನಂತೆ ಇರುವರು.

೮೭. ಉತ್ತಮದ ವರ್ಣಗಳೇ | ಉತ್ತಮರು ಎನಬೇಡ |
ಮತ್ತೆ ತನ್ನಂತೆ ಬಗೆವರನೆಲ್ಲರನು |
ಉತ್ತಮರೆನ್ನು ಸರ್ವಜ್ಞ ||

(ವರ್ಣಾಶ್ರಮದಲ್ಲಿಯ ಪ್ರಕಾರ) ಮೇಲಿನವರನ್ನು ಉತ್ತಮರೆನಬೇಡ. ತನ್ನಂತೆಯೇ ಪರರನ್ನೂ ತಿಳಿದುಕೊಳ್ಳುವಂಥವನನ್ನೇ ಉತ್ತಮನೆಂದು ಕರೆ.

೮೮. ಕೊಟ್ಟವರ ತಲೆಬೆನ್ನ | ತಟ್ಟುವರು ಹಾರುವರು |
ಬಿಟ್ಟರೆ ಕುಟ್ಟಿಕೆಡಹುವರು, ಹಾರುವರ |
ಬಟ್ಟೆ ಬೇಡೆಂದ ಸರ್ವಜ್ಞ ||

(ತಮಗೆ ಏನಾದರೂ) ಕೊಟ್ಟವರ ಬೆನ್ನನ್ನು ಹಾರುವರು ಥಪ್ಪರಿಸುವರು. (ಒಂದುವೇಳೆ) ಕೊಡದೆ ಹೋದರೆ ಹೊಡೆದು ಕೆಡವುವರು. (ಅದಕ್ಕಾಗಿ ಅಂಥ) ಹಾರುವರ ಹಾದಿಯೇ ಬೇಡ.

೮೯. ಅರ್ಥ ಸಿಕ್ಕರೆ ಬಿಡರು | ವ್ಯರ್ಥದಿ ಶ್ರಮ ಬಡರ |
ನರ್ಥಕೆ ಪರರ ನೂಂಕಿಪರು, ವಿಪ್ರರಿಂ |
ಸ್ವಾರ್ಥರಿನ್ನಿಲ್ಲ ಸರ್ವಜ್ಞ ||

( ಈ ಬ್ರಾಹ್ಮಣರು ) ಹಣ ಸಿಕ್ಕರೆ ಬಿಡಲಾರರು. ವ್ಯರ್ಥ ಶ್ರಮಪಡಲಾರರು. (ಅಲ್ಲದೆ) ಇತರರನ್ನು ಅನರ್ಥದೆಡೆಗೆ ನೂಕಲೂ ಹಿಂದೆ ಮುಂದೆ ನೋಡುವದಿಲ್ಲ. ( ಅದಕ್ಕಾಗಿ ) ಬ್ರಾಹ್ಮಣರಂಥಾ ಸ್ವಾರ್ಥಿಗಳು ಎಲ್ಲಿಯೂ ಇಲ್ಲ.

೬೦. ಜ್ಯೋತಿಯಿಲ್ಲದ ಮನೆಯು । ರೀತಿಯಿಲ್ಲದ ಸತಿಯು ।
ನೀತಿಯಿಲ್ಲದ ವಿಪ್ರನು, ಭಿಕ್ಷದ ।
ಭಿಕ್ಷದ ಪಾತ್ರೆಯೊಡೆದಂತೆ ಸರ್ವಜ್ಞ ॥

ದೀಪವಿಲ್ಲದಂಥ ಮನೆಯು, ರೀತಿ ನಡಾವಳಿಗಳಿಲ್ಲದಂಥ ಪತ್ನಿಯೇ ( ಹಾಗು ) ದುರ್ನೀತಿಯ ಬ್ರಾಹ್ಮಣನು ( ಇವು ಮೂರು ) ಒಡೆದು ಹೋದ ಭಿಕ್ಷೆಯ ಪಾತ್ರೆಯಿದ್ದಂತೆ. ( ಉಪಯೋಗವಿಲ್ಲದ್ದು. )

೬೧. ಗೊರವನೂ ಸೂಳೆಯೂ । ಹರದಕ್ಕಸಾಲೆಯೂ ।
ತಿರಿವನು, ವೈದ್ಯ, ದ್ವಿಜ, ಗಣಿಕ ಇನ್ನೊಬ್ಬ ।
ಶಿರವ ಸೈರಿಸರು ಸರ್ವಜ್ಞ ॥

ತಿರುಕ, ಸೂಳೆ, ಅಕ್ಕಸಾಲಿಗ, ವೈದ್ಯ ಹಾಗು ಬ್ರಾಹ್ಮಣ ಇವರುಗಳು ಒಬ್ಬರು ಇನ್ನೊಬ್ಬರು ಇರುವಿಕೆಯನ್ನು ನೋಡಿ ಸಹಿಸಲಾರರು.

೬೨. ಹಾರುವರ ನಂಬಿದವ । ರಾರಾರು ಉಳಿದಿಹರು ।
ಹಾರುವರ ನಂಬಿ ಭೂಪರು ಕೆಟ್ಟರಿ ।
ನ್ನಾರು ನಂಬುವರು ಸರ್ವಜ್ಞ ॥

ಬ್ರಾಹ್ಮಣರನ್ನು ನಂಬಿ ಯಾರಾದರೂ ಉಳಿದಿರುವರೇ ? ( ಇಲ್ಲವೆ ಇಲ್ಲ ) ಆ ಹಾರುವರನ್ನು ನಂಬಿ ಅರಸರೇ ಕೆಟ್ಟು ಹೋಗಿರುವಾಗ ಇನ್ನಾರ ನಂಬುತ್ತಾರೆ ಅವರನ್ನು ?

೬೩. ಮೂರ್ಖಂಗೆ ಬುದ್ಧಿಯನು । ನೂರ್ಕಾಲ ಹೇಳಿದರೆ ।
ಗೋರ್ಕಲ್ಲ ಮೇಲೆ ಮಳೆ ಹುಯಿದರಾ ಕಲ್ಲು ।
ನೀರ್ಕೊಂಬುದುಂಟೆ ಸರ್ವಜ್ಞ ॥

ಮೂರ್ಖನಿಗೆ ನೂರು ಸಲ ಬುದ್ಧಿ ಹೇಳಿದರೂ ಅದು ವ್ಯರ್ಥ. ( ಹೇಗೆಂದರೆ ) ಕಲ್ಲುಬಂಡೆಯ ಮೇಲೆ ಮಳೆ ಸುರಿದರೆ ಆ ಕಲ್ಲು ಎಂದಿಗಾದರೂ ನೀರನ್ನು ಹೀರಿಕೊಳ್ಳಬಹುದೇ ? ( ಅದಕ್ಕಾಗಿಯೇ ) ಅಂಥವರಿಗೆ ಬುದ್ಧಿ ಹೇಳಬಾರದು.

೯೪. ಆರುಬೆಟ್ಟವನೊಬ್ಬ । ಹಾರಬಹುದೆಂದಿಹರೆ ।
ಹಾರಬಹುದೆಂದು ಎನಬೇಕು, ಮೂರ್ಖನೊಡ ।
ಹೋರಾಟ ಸಲ್ಲ ಸರ್ವಜ್ಞ ॥

ಆರು ಪರ್ವತಗಳನ್ನು ಹಾರಬಹುದೆಂದು ಒಬ್ಬನು ನುಡಿದರೆ (ಆಗ) ಹಾರಬಹುದು ಎಂದು ನುಡಿಯಬೇಕಲ್ಲದೆ (ಅಂಥ) ಮೂರ್ಖನೊಂದಿಗೆ ವಾದ ಮಾಡಬಾರದು.

೯೫. ಒಲೆಗುಂಡನೊಬ್ಬನೇ । ಮೆಲಬಹುದು ಎಂದಿಹರೆ ।
ಮೆಲಬಹುದು ಎಂಬುವನೆ ಜಾಣ, ಮೂರ್ಖನ ।
ಗೆಲುವಾಗದಯ್ಯ ಸರ್ವಜ್ಞ ॥

ಒಲೆಯ ಗುಂಡನು ಒಬ್ಬನೇ ತಿನ್ನಬಹುದು ಎಂದು ಯಾರಾದರೂ ಹೇಳಿದರೆ 'ಹೌದು ತಿನ್ನಬಹುದು' ಎನ್ನುವವನೆ ಜಾಣ. ಮೂರ್ಖರನ್ನು ಗೆಲ್ಲುವ ಹವ್ಯಾಸಕ್ಕೆ ಹೋಗಬಾರದು. (ಅದು ಸಾಧ್ಯವಿಲ್ಲ.)

೯೬. ಮೊಲ ನಾಯಿ ಬೆನ್ನಟ್ಟಿ । ಗೆಲಬಹುದು ಎಂದಿಹರೆ ।
ಗೆಲಬಹುದು ಎನಬೇಕು, ಮೂರ್ಖನಲಿ ।
ಕಲಹ ಬೇಡೆಂದ ಸರ್ವಜ್ಞ ॥

ಮೊಲವು ನಾಯಿಯನ್ನು ಬೆನ್ನಟ್ಟಿ ಗೆಲ್ಲಬಹುದು ಎಂದು ಯಾವನಾದರೂ (ಮೂರ್ಖನು) ನುಡಿದರೆ 'ಗೆಲ್ಲಬಹುದೆಂದು 'ಹೇಳಬೇಕೇ ವಿನಹ ಮೂರ್ಖನೊಂದಿಗೆ ಕಲಹಕ್ಕೆ ಬೀಳಬಾರದು. (ಅದು ಒಳ್ಳೆಯದಲ್ಲ.)

೯೭. ಒಂದನ್ನು ಎರಡೆಂಬ । ಹಂದಿಗ್ಹೆಬ್ಬುಲಿಯೆಂಬ ।
ನಿಂದ ದೇಗುಲವು ಮರನೆಂಬ ಮೂರ್ಖ ತಾ ।
ನೆಂದಂತೆ ಎನ್ನಿ ಸರ್ವಜ್ಞ ॥

ಒಂದಕ್ಕೆ ಎರಡೆನ್ನುವಂಥ, ಹಂದಿಗೆ ಹೆಬ್ಬುಲಿಯೆನ್ನುವಂಥ, ದೇವಾಲಯಕ್ಕೆ ಮರವೆನ್ನುವಂಥ ಮೂರ್ಖನೆಂದಂತೆಯೇ ಅಂದು ಸುಮ್ಮನಾಗಬೇಕು. (ಎದುರು ವಾದಿಸಲು ಹೋಗಬಾರದು.)

೯೮. ನೆಲವನ್ನು ಮುಗಿಲನ್ನು । ಹೊಲಿವರುಂಟೆಂದರಿಪ ।
ಹೊಲಿವರು ಹೊಲಿವರೆನಬೇಕು, ಮೂರ್ಖನಲಿ ।
ಕಲಹ ಬೇಡೆಂದ ಸರ್ವಜ್ಞ ॥

ಭೂಮಿ ಮತ್ತು ಆಕಾಶವನ್ನು ಕೂಡಿಸಿ ಹೊಲಿಯುವರುಂಟು ಎಂದರೆ 'ಹೌದು ಹೊಲಿಯುವರು' ಎಂದು ಹೇಳಬೇಕೇ ವಿನಹ ಮೂರ್ಖನೊಂದಿಗೆ ವಾದಕ್ಕೆ ನಿಲ್ಲಬಾರದು.

೯೯. ಬೆಟ್ಟವನು ಕೊಂಡೊಬ್ಬ । ನಿಟ್ಟಿಹನು ಎಂದಿಹರೆ ।
ಇಟ್ಟಿಹನು ಎನಬೇಕು, ಮೂರ್ಖನ ।
ಬಟ್ಟೆ ಬೇಡೆಂದ ಸರ್ವಜ್ಞ ॥

ಒಬ್ಬನು ಬೆಟ್ಟವನ್ನು ಎತ್ತಿಕೊಂಡು ಹೋಗಿ ಇಟ್ಟಿರುವನು ಎಂದು ಒಬ್ಬ ಮೂರ್ಖನು ಹೇಳಿದರೆ, 'ಹೌದು ಇಟ್ಟಿರುವನು' ಎಂದು ಹೇಳಿ ಅಲ್ಲಿಂದ ಸರಿಯಬೇಕೇ ವಿನಹ ಅವನೊಂದಿಗೆ ವಾದ ಮಾಡಕೂಡದು.

೧೦೦. ಹೊಳೆಯ ನೀರೊಬ್ಬನೆ । ಅಳಿಯಬಹುದೆಂದರವ ।
ಅಳಿಯಬಹುದೆಂದು ಎನಬೇಕು, ಮೂರ್ಖತನ ।
ಕೆಳೆಯಲಳವಲ್ಲ ಸರ್ವಜ್ಞ ॥

ಹೊಳೆಯೊಳಗಿನ ನೀರನ್ನು ಒಬ್ಬನೇ ಅಳೆಯಬಹುದು ಎಂದೋರ್ವ ಮೂರ್ಖನು ಹೇಳಿದರೆ ಅವನೆದುರು ಹೌದೆಂದು ಹೇಳಬೇಕೇ ವಿನಹ ಅವನಲ್ಲಿಯ ಮೂರ್ಖತನ ಹೋಗಲಾಡಿಸುವ ಹವ್ಯಾಸಕ್ಕೆ ಹೋಗಬಾರದು.

೧೦೧. ಹಂಗಿನಾ ಹಾಲಿನಿಂ । ದಂಬಲಿಯು ತಿಳಿಲೇಸು ।
ಭಂಗಬಟ್ಟುಂಬ ಬಿಸಿಯಿಂದ ತಿರಿವರ ।
ಸಂಗವೇ ಲೇಸು ಸರ್ವಜ್ಞ ॥

(ಎರಡನೆಯವರ) ಹಂಗಿನಿಂದ ದೊರೆಯುವ ಹಾಲಿಗಿಂತಲೂ, ತಿಳಿಯಾದ ಅಂಬಲಿಯು ಒಳ್ಳೆಯದು. ಅವಮಾನಕಾರಕವಾದ ಬಿಸಿ ಅನ್ನಕ್ಕಿಂತಲೂ ತಿರುಪೆಯದೇನೂ ಕೆಡುಕಲ್ಲ.

೧೦೨. ಸುಟ್ಟ ಬೆಳಸಿಯೂ ಲೇಸು। ಅಟ್ಟ ಬೋನವು ಲೇಸು।
ಕಟ್ಟಾಣಿ ಸತಿಯೂ ಇರೆ ಲೇಸು, ನಡುವಿಗೆ।
ದಟ್ಟಿ ಲೇಸೆಂದ ಸರ್ವಜ್ಞ॥

(ತಿನ್ನಲು) ಸುಟ್ಟಂಥ ಬೆಳಸಿಯ (ಬಿಸಿಲುಗಾಳಿನ ತೆನೆಗಳು) ಒಳ್ಳೆಯದು. ಬೋನವು ಒಳ್ಳೆಯದು. ಪ್ರೀತಿಯ ಹೆಂಡತಿಯಿದ್ದರೆ ಬಹಳ ಒಳ್ಳೇದು. (ಅದರಂತೆ) ನಡುವಿಗೆ ಸೀರೆ ಇದ್ದರೆ ಒಳ್ಳೆಯದು.

೧೦೩. ಹಸಿಯು ಅಲ್ಲವು ಲೇಸು। ಬಿಸಿಯು ಪಳಿದವು ಲೇಸು।
ಹುಸಿ ಲೇಸು ಕಳ್ಳ ಹೆಣ್ಣಿಂಗೆ, ಬೈಗಿನ।
ಬಿಸಿಲು ಲೇಸೆಂದ ಸರ್ವಜ್ಞ॥

(ಯಾವುದಕ್ಕಾದರೂ) ಹಸಿಯ ಶುಂಠಿಯು ಒಳ್ಳೆಯದು. (ಅದರಂತೆ) ಬಿಸಿಯ ಪಳಿದ್ಯವೂ ಒಳ್ಳೆಯದು. ಜಾರೆಯಾದ ಹೆಣ್ಣಿಗೆ ಅಸತ್ಯವು ಒಳ್ಳೆಯದು. ಸಾಯಂಕಾಲದ ಬಿಸಿಲೂ ಒಳ್ಳೆಯದು.

೧೦೪. ಮಜ್ಜಿಗೂಟಕೆ ಲೇಸು। ಮಜ್ಜನಕೆ ಮಡಿ ಲೇಸು।
ಕಜ್ಜಾಯ ತುಪ್ಪ ಉಣಲೇಸು ಮನೆಗೊಬ್ಬ।
ಅಜ್ಜಿ ಲೇಸೆಂದ ಸರ್ವಜ್ಞ॥

ಊಟಕ್ಕೆ ಮಜ್ಜಿಗೆಯು ಒಳ್ಳೆಯದು. ಮಡಿಯು ಸ್ನಾನಕ್ಕೆ ಒಳ್ಳೆಯದು; ಕಜ್ಜಾಯ (ಸಿಹಿ ತಿಂಡಿ) ದೊಂದಿಗೆ ತುಪ್ಪವಿದ್ದರೆ ಅದೂ ಊಟಕ್ಕೆ ಒಳ್ಳೆಯದು. ಅದರಂತೆ ಮನೆಗೊಬ್ಬ ಅಜ್ಜಿಯೂ (ಮುದುಕಿಯೂ) ಇದ್ದರೆ ಒಳ್ಳೆಯದು.

೧೦೫. ಹಸಿದಂಬಲಿ ಲೇಸು। ಬಿಸಿಲಲ್ಲಿ ಕೊಡೆ ಲೇಸು।
ಬಸುರಿನ ಸೊಸೆ ಇರಲು ಲೇಸು, ಸಭೆಗೊಬ್ಬ।
ರಸಿಕ ಲೇಸೆಂದ ಸರ್ವಜ್ಞ॥

ಹಸಿದ ಸಮಯದಲ್ಲಿ ಅಂಬಲಿಯೂ ಒಳ್ಳೆಯದು. ಬಿಸಲಿನ ವೇಳೆಯಲ್ಲಿ ಕೊಡೆಯು ಒಳ್ಳೆಯದು; ಬಸುರೆಯಾದ ಸೊಸೆಯು (ಮನೆಯಲ್ಲಿ) ಇದ್ದರೆ ಒಳ್ಳೆಯದು. (ಅದರಂತೆ) ಸಭೆಗೆ ಒಬ್ಬ ರಸಿಕನಿರುವದು ಒಳ್ಳೆಯದು.

೧೦೬. ಹರಳ ಉಂಗರ ಲೇಸು | ಹುರುಳಿ ಕುದುರೆಗೆ ಲೇಸು |
ಮರಳು ನೆಲ ತೆಂಗಿಗಿರೆಲೇಸು, ಸ್ತ್ರೀಯರಿಗೆ |
ಕುರುಳು ಲೇಸೆಂದ ಸರ್ವಜ್ಞ ||

ಉಂಗುರಕ್ಕೆ ಹರಳು ಒಳ್ಳೆಯದು. ಕುದುರೆಗೆ ಹುರುಳಿಯು ಒಳ್ಳೆಯದು. ಉಸುಕಿನ ನೆಲವು ತೆಂಗಿನ ಗಿಡಗಳಿಗೆ ಒಳ್ಳೆಯದು. (ಅದರಂತೆ) ಉಂಗುರುಗೂದಲುಗಳು ಸ್ತ್ರೀಯರಿಗೆ ಒಳ್ಳೆಯವು.

೧೦೭. ಹುತ್ತ ಹಾವಿಗೆ ಲೇಸು | ಮುತ್ತು ಕೊರಳಿಗೆ ಲೇಸು |
ಕತ್ತೆಯು ಹೇರು ತರೆಲೇಸು, ತುಪ್ಪದ |
ತುತ್ತು ಲೇಸೆಂದ ಸರ್ವಜ್ಞ ||

ಹಾವಿಗೆ ಹುತ್ತು ಒಳ್ಳೆಯದು. ಕೊರಳಿಗೆ ಮುತ್ತು ಇದ್ದರೆ ಒಳ್ಳೆಯದು. ಒಜ್ಜೆಯನ್ನು ಹೊರಲು ಕತ್ತೆ ಇದ್ದರೆ ಒಳ್ಳೆಯದು. (ಅದರಂತೆ) ತುಪ್ಪದಿಂದ ಕೂಡಿದಂಥ ತುತ್ತು (ಊಟಕ್ಕೆ) ಒಳ್ಳೆಯದು.

೧೦೮. ಒಸರುವಾ ತೊರೆ ಲೇಸು | ಹಸನಾದ ಕೆರೆಲೇಸು |
ಪಸರವಿರುವವನ ನೆರೆ ಲೇಸು, ಸಾಗರವು |
ವಸುಧಿಗೆ ಲೇಸು ಸರ್ವಜ್ಞ ||

ಯಾವಾಗಲೂ ಹರಿಯುತ್ತಿರುವ ಹೊಳೆಯು ಒಳ್ಳೆಯದು; ಹಸನಾದ ಕೆರೆಯು ಒಳ್ಳೆಯದು. ಕಂಚುಗಾರನ ನೆರೆ-ಹೊರೆಯಲ್ಲಿರುವದು ಒಳ್ಳೆಯದು. (ಅದರಂತೆ) ಸಮುದ್ರವು ಭೂಮಿಗೆ ಒಳ್ಳೆಯದು.

೧೦೯. ಕರಿಕೆ ಕುದುರೆಗೆ ಲೇಸು | ಮುರುಕು ಹೆಣ್ಣಿಗೆ ಲೇಸು |
ಅರಿಕೆಯುಳ್ಳವರ ಕಳೆಲೇಸು, ಸೇವಿಗೆಯ |
ಸುರುಕು ಲೇಸೆಂದ ಸರ್ವಜ್ಞ ||

ಕುದುರೆಗೆ ಕರಿಕೆಯು, ಹೆಣ್ಣಿಗೆ ಒಯ್ಯಾರವು ಹಾಗು ಅರಿವುಳ್ಳವರ ಗೆಳೆತನವು ಒಳ್ಳೆಯದಾಗಿರುವಂತೆ ಸುರಕಿಕೊಳ್ಳಲು ಸೇವಿಗೆಯ ಪಾಯಸವೂ ಒಳ್ಳೆಯದು.

೧೧೦. ಗಿಡ್ಡ ಹೆಂಡತಿಲೇಸು | ಮಡ್ಡಿ ಕುದುರೆಗೆ ಲೇಸು |
ಬಡ್ಡಿಯು ಸಾಲ ಕೊಡೆಲೇಸು, ಹಿರಿಯರಿಗೆ !
ಗಡ್ಡ ಲೇಸೆಂದ ಸರ್ವಜ್ಞ ||

ಹೆಂಡತಿಯು ಗಿಡ್ಡ ವಾಗಿದ್ದರೆ, ಮಡ್ಡಿಯು ಕುದುರೆಗೆ ಹಾಗೂ ಕೊಡಲು ಬಡ್ಡಿಯ ಸಾಲವು ಒಳ್ಳೆಯದಾಗಿರುವಂತೆ ಹಿರಿಯರಾದವರಿಗೆ ಗಡ್ಡವು ಒಳ್ಳೆಯದು.

೧೧೧. ಜ್ಞಾನಿಗೆ ಗುಣಲೇಸು | ಮಾನಿನಿಗೆ ಪತಿಲೇಸು |
ಸ್ವಾನುಭವಿಗಳ ನುಡಿ ಲೇಸು, ಎಲ್ಲಕು ನಿ |
ಧಾನಿಯೇ ಲೇಸು ಸರ್ವಜ್ಞ ||

ಜ್ಞಾನಿಯಾದವನಿಗೆ ಗುಣವೂ, ಹೆಂಗಸಿಗೆ ಪತಿಯೂ ಹಾಗು ಸ್ವಾನುಭವಿಗಳ ನುಡಿಯೂ ಒಳ್ಳೆಯದಾಗಿರುವಂತೆ ಪ್ರತಿಯೊಂದು ಕಾರ್ಯ ದಲ್ಲೂ ಅವಸರ ಮಾಡವಂಥವನು (ನಿಧಾನಿಯು) ಒಳ್ಳೆಯವನು.

೧೧೨. ಜಾಣ ಜಾಣಗೆ ಲೇಸು | ಕೋಣ ಕೋಣಗೆ ಲೇಸು |
ನಾಣ್ಯವದು ಲೇಸು ಲೋಕಕ್ಕೆ, ಊರಿಂಗೆ |
ಗಾಣಿಗನು ಲೇಸು ಸರ್ವಜ್ಞ ||

ಜಾಣನು ಜಾಣನಿಗೆ, ಕೋಣವು ಕೋಣಕ್ಕೆ ಒಳ್ಳೆಯದಾಗುವಂತೆ ನಾಣ್ಯದಿಂದ ಲೋಕಕ್ಕೆ ಒಳ್ಳೆಯದಾಗುವದು. ಆದರಂತೆ ಗಾಣಿಗನೊಬ್ಬ ನಿದ್ದರೆ ಊರಿಗೆ ಒಳ್ಳೆಯದು.

೧೧೩. ಮುನ್ನ ಮಾಡಿದ ಪಾಪ | ಹೊನ್ನಿಂದ ಪೋಪುದೆ?
ಹೊನ್ನಿನಾ ಪುಣ್ಯವದು ಬೇರೆ, ಪಾಪ ತಾ |
ಮುನ್ನಿನಂತಿಹುದು ಸರ್ವಜ್ಞ ||

ಮೊದಲು ಮಾಡಿದಂಥ ಪಾಪವು ಹೊನ್ನಿನಿಂದ ಹೋಗುವದೇ ? (ಅಂದರೆ ಹೊನ್ನಿನ ದಾನದಿಂದ) ಆದರೆ ಆ ಹೊನ್ನಿನಿಂದ ಸಂಚಯವಾ ಗುವ ಪುಣ್ಯ ಮಾತ್ರ ಬೇರೆ. ಪಾಪವು ಮೊದಲಿನಂತೆಯೇ ಉಳಿದು ಕೊಳ್ಳುವದು.

೧೧೪. ಅರಿಯದೆಸಗಿದ ಪಾಪ। ಅರಿತರದು ತನಗೊಳಿತು।
ಅರಿತರಿತು ಮಾಡಿ ಮರೆತದು, ನಯನವನು।
ಇರಿದುಕೊಂಡಂತೆ ಸರ್ವಜ್ಞ॥

(ಒಂದು ಸಲ) ಅರಿಯದೆ ಮಾಡಿದಂಥ ಪಾಪದ ಬಗ್ಗೆ ತಿಳಿದುಕೊಂಡು ಅದನ್ನು ಬಿಟ್ಟರೆ ಅದು (ಅವನಿಗೇ) ಒಳ್ಳೆಯದು. (ಒಂದು ವೇಳೆ ಅದು ಪಾಪವೆಂದು ಅರಿತ ನಂತರವೂ ಮತ್ತೆ ಮಾಡಿ ಮರೆತರೆ (ತನ್ನ) ಕಣ್ಣೊಳಗೆ (ತಾನೇ) ಇರಿದುಕೊಂಡಂತಾಗುವದು.

೧೧೫. ತೋಡಿರ್ಪ ಭಾವಿಂಗೆ ಕೂಡಿರ್ಪ ಜಲಸಾಕ್ಷಿ।
ಮಾಡಿರ್ದಕೆಲ್ಲ ಮನಸಾಕ್ಷಿ, ಸರ್ವಕು।
ಮೃಡನೆ ಸಾಕ್ಷಿ ಸರ್ವಜ್ಞ॥

ತೋಡಿದಂಥ ಭಾವಿಗೆ (ಆದರೊಳಗೆ) ಸಂಚಯವಾದ ಜಲವೇ ಸಾಕ್ಷಿಯಾಗುತ್ತದೆ. (ತಾನು) ಮಾಡಿದ ಕೆಲಸಕ್ಕೆ (ಅವನ) ಮನವೇ ಸಾಕ್ಷಿಯಾಗಿರುತ್ತದೆ! (ಆದರಂತೆ) ಎಲ್ಲದಕ್ಕೆ ಶಿವನೇ ಸಾಕ್ಷಿಯಾಗಿರುತ್ತಾನೆ.

೧೧೬. ಸತ್ಯವೆಂಬುದು ತಾನು। ನಿತ್ಯದಲಿ ಮೆರೆದಿಹುದು।
ಮಿಥ್ಯ ಸತ್ಯವನು ಬೆರೆದರೂ, ಇಹಪರದಿ।
ಸತ್ಯಕ್ಕೆ ಜಯವು ಸರ್ವಜ್ಞ॥

ಸತ್ಯವೆಂಬುದು ಯಾವಾಗಲೂ (ತಾನೇ ತಾನಾಗಿ) ಮೆರೆಯುವದು. (ಮೆರೆಯುತ್ತದೆ.) (ಒಮ್ಮೊಮ್ಮೆ) ಸತ್ಯದಲ್ಲಿ ಮಿಥ್ಯವು ಬೆರೆದರೂ ಕೂಡ ಇಹ–ಪರಗಳಲ್ಲಿ ಸತ್ಯಕ್ಕೆ ಜಯವು ಕಟ್ಟಿಟ್ಟದ್ದು.

೧೧೭. ಸತ್ಯರಿಗೆ ಧರೆಯಲ್ಲಿ। ಮಸ್ತಕವನೆರೆಗುವರು।
ಹೆತ್ತ ತಾಯ್ ಮಗನ ಕರೆವಂತೆ ಶಿವನವರ।
ನೆತ್ತಿಕೊಂಬುವನು ಸರ್ವಜ್ಞ॥

ಸತ್ಯವಂತರಿಗೆ ಜಗತ್ತಿನೊಳಗಿರುವವರೆಲ್ಲ ನಮಸ್ಕರಿಸುವವರು. (ಅಂಥವರನ್ನು) ಹಡೆದ ತಾಯಿಯ ತನ್ನ ಮಗುವನ್ನು ಅಕ್ಕರೆಯಿಂದ ಕರೆದುಕೊಳ್ಳುವಂತೆ ಶಿವನು ಎತ್ತಿಕೊಳುವನು.

೧೧೮. ಹಾಲಿನ ಹಸು ಲೇಸು | ಶೀಲದ ಶಿಶು ಲೇಸು |
ಬಾಲೆಯು ಸಜ್ಜನೆಯು ಲೇಸು, ಹುಸಿಯಾದ |
ನಾಲಿಗೆಯು ಲೇಸು ಸರ್ವಜ್ಞ ||

ಹಾಲು ಕರೆಯುವಂಥವಳು ಆಕಳು ಒಳ್ಳೆಯದಿದ್ದಂತೆ ಶೀಲವಂತ ಶಿಶುವೂ ಸದ್ಗುಣಶೀಲೆಯಾದ ಬಾಲೆಯೂ ಒಳ್ಳೆಯವಳು. ಅದರಂತೆ ಹುಸಿಯಾಡದ ನಾಲಿಗೆಯೂ ಒಳ್ಳೆಯದು.

೧೧೯. ಕಾಲು ಹೋದರೆ ಹೊಲ್ಲ | ಬಾಲೆ ಮುದುಕಗೆ ಹೊಲ್ಲ |
ನಾಲಿಗೆಯೆರಡು ನುಡಿ ಹೊಲ್ಲ, ಸಮರದಲಿ |
ಸೋಲುವದೆ ಹೊಲ್ಲ ಸರ್ವಜ್ಞ ||

ಕಾಲಿಲ್ಲದವನ ಜೀವನವು ಅಯೋಗ್ಯವಾದುದು. ಮುದುಕನಿಗೆ ಬಾಲೆಯು ಅಯೋಗ್ಯಳು. ಎರಡು ಮಾತನಾಡುವ ನಾಲಿಗೆಯು ಒಳ್ಳೆಯದಲ್ಲ. ಅದರಂತೆ ಯುದ್ಧದಲ್ಲಿ ಸೋಲುವದು ಕೂಡ ಅಯೋಗ್ಯವಾದದ್ದು.

೧೨೦. ಹುಸಿಯು ಪೇಳ್ವುದಕಿಂತ | ಹಸಿದು ಸಾವುದು ಲೇಸು |
ಹಸಿದು ಮೆರೆಯುವನ ಬದುಕಿಂದ, ಹಂದಿಯು |
ಐಸಿರಿಯು ಲೇಸೆಂದ ಸರ್ವಜ್ಞ ||

ಸುಳ್ಳು ಹೇಳಿ ಬದುಕುವದಕ್ಕಿಂತ ಹಸಿವೆಯಿಂದ ಬಳಲುತ್ತ ಸತ್ತು ಹೋಗುವದು ಒಳ್ಳೆಯದು; ಆ ರೀತಿ ಸುಳ್ಳನಿಂದ ಮೆರೆಯುವವನ ಬದುಕಿಗಿಂತ ಹಂದಿಯು ಹೊಲಸು ಬಹು ಉತ್ತಮವಾದುದೆಂದು ಹೇಳಬಹುದು.

೧೨೧. ಒಳ್ಳೆಯನು ಇರದೂರ | ಕಳ್ಳನೊಡನಾಟವೂ |
ಸುಳ್ಳನ ಮಾತು ಇವು ಮೂರು ಕೆಸರೊಳಗೆ |
ಮುಳ್ಳು, ತುಳಿದಂತೆ ಸರ್ವಜ್ಞ ||

ಒಳ್ಳೆಯವನು ಇರದಂಥ ಊರು, ಕಳ್ಳನೊಡನೆ ಸುಲಿಗೆ ಹಾಗೂ ಸುಳ್ಳನ ಮಾತುಗಳು ಇವು ಮೂರು ಕೆಸರೊಳಗೆ ಮುಳ್ಳು ತುಳಿದಂತೆಯೇ ಸರಿ.

೧೨೨. ಅಂದು ಕಾಮನ ಹರನು। ಕೊಂದನೆಂಬುದು ಪುಸಿಯು।
ಇಂದುವದನೆಯರ ಕಡೆಗಣ್ಣ ನೋಟದಿ।
ನಿಂದಿಹನು ಸ್ಮರನು ಸರ್ವಜ್ಞ॥

ಅಂದು ಶಿವನು ಕಾಮನನ್ನು ಕೊಂದನೆಂಬುದು ಸುಳ್ಳು (ಏಕೆಂದರೆ) ಈಗಲೂ ಚಂದ್ರಮುಖಿಯರ ಕಡೆಗಣ್ಣ ನೋಟದಲ್ಲಿ ಕಾಮನು ನಿಂತು ಕೊಂಡೇ ಇರುತ್ತಾನೆಂಬುದು ಯಾರಿಗೆ ಗೊತ್ತಿಲ್ಲ?

೧೨೩. ಬೇಡ ಕಾಯದೆ ಕೆಟ್ಟ। ಜೇಡ ನೇಯದೆ ಕೆಟ್ಟ।
ನೋಡದಲೆ ಕೆಟ್ಟ ಕೃಷಿಕನು, ಸತಿಯ ಬಿ।
ಟ್ಟಾಡಿದವ ಕೆಟ್ಟ ಸರ್ವಜ್ಞ॥

ಬೇಡನು (ಬಲೆಯನ್ನು) ಕಾಯದೇ ಕೆಟ್ಟನು. ಜೇಡರವನು (ನೇಕಾರನು) ನೇಯದೆ ಕೆಟ್ಟನು. ಒಕ್ಕಲಿಗನು (ತನ್ನ ಹೊಲದ ಬೆಳೆಯನ್ನು) ನೋಡದೇ ಕೆಟ್ಟನು. (ಅದರಂತೆ) ಸತಿಯನ್ನು ಬಿಟ್ಟು ಅಡ್ಡಾಡಿದವನೂ ಕೆಟ್ಟನು.

೧೨೪. ಕೊಟ್ಟು ಮರುಗಲು ಬೇಡ। ಬಿಟ್ಟು ಹಿಡಿಯಲು ಬೇಡ।
ಕೆಟ್ಟ ನಡೆಯುವಳ ನೆರೆ ಬೇಡ, ಪರಸತಿಯ।
ಮುಟ್ಟಬೇಡೆಂದ ಸರ್ವಜ್ಞ॥

(ಇತರರಿಗೆ) ಕೊಟ್ಟದ್ದಕ್ಕಾಗಿ ಮರುಗಬೇಡ ಹಾಗು ಕೆಟ್ಟ ನಡತೆಯುಳ್ಳಂಥ ಹೆಂಗಸಿನ ನೆರೆಹೊರೆಯಲ್ಲಿರಬೇಡ. (ಅದರಂತೆ) ಎರಡನೆಯವರ ಮನೆಯ ಸ್ತ್ರೀಯನ್ನು ಮುಟ್ಟಬೇಡ.

೧೨೫. ಹಣವಳಿದು ಹೋದರೂ। ಹೆಣಬೀಳ ಹೊಡೆದರೂ।
ಮೊಣಕಾಲ ಗಣಿಕೆ ಮುರಿದರೂ ಹಾದರದ।
ಕುಣಿಕೆ ಬೇಡೆಂದ ಸರ್ವಜ್ಞ॥

(ತನ್ನಲ್ಲಿಯ) ಹಣವು ಹಾಳಾಗಿ ಹೊದರೂ. ಸಾಯುವಂತೆ ಹೊಡೆದರೂ; ಮೊಳಕಾಲ ಗಣಿಕೆಗಳನ್ನು ಮುರಿದರೂ ಕೂಡ ವ್ಯಭಿಚಾರ (ಹಾದರ) ಮಾಡಬೇಡ.

೧೨೬. ಅನ್ನ ಸತಿಯನು ಕಂಡು | ತನ್ನ ಹೆತ್ತವಳೆಂದು |
ಮನ್ನಿಸಿ ನಡೆವ ಪುರುಷಂಗೆ, ಇಹಪರದಿ |
ಮುನ್ನ ಭಯವಿಲ್ಲ ಸರ್ವಜ್ಞ ||

ಪರಸ್ತ್ರೀಯೊಡನೆ ತನ್ನ ಹೆತ್ತ ತಾಯೋಪಾದಿಯಲ್ಲಿ ನಡೆದುಕೊಳ್ಳುವ ಪುರುಷನಿಗೆ ಇಹದಲ್ಲೂ ಪರದಲ್ಲೂ ಯಾರ ಭಯವೂ ಇಲ್ಲ. (ಅದಕ್ಕಾಗಿ ಹಾಗೆ ನಡೆದುಕೊಳ್ಳುವದು ಒಳ್ಳೆಯದು.)

೧೨೭. ಮಾಳಿಗೆಯ ಮನೆ ಲೇಸು | ಗೂಳಿಯ ಪಶು ಲೇಸು |
ಈಳಿಯ ಹಿತ್ತಲಿರೆಲೇಸು, ಪತಿವೃತೆಯ |
ಬಾಳು ಲೇಸೆಂದ ಸರ್ವಜ್ಞ ||

ಮಾಳಿಗೆಯುಳ್ಳ ಮನೆಯು ಒಳ್ಳೆಯದು. ಗೂಳಿಯಾದ ಪಶುವು ಒಳ್ಳೆಯದು. ಹಾಗೂ ಹಿತ್ತಲಲ್ಲಿ ನಿಂಬೆಯ ಗಿಡವಿದ್ದರೆ ಒಳ್ಳೆಯದು. ಅದರಂತೆ ಪತಿವ್ರತೆಯಾದವಳ ಬಾಳುವೆಯೇ ಒಳ್ಳೆಯದಾಗಿರುತ್ತದೆ.

೧೨೮. ಅನ್ಯ ಪುರುಷನ ಕಂಡು | ತನ್ನ ಪಡೆದವನೆಂದು |
ಮನ್ನಿಸಿ ನಡೆವ ಸತಿಯಳಿಗೆ, ಸ್ವರ್ಗದೊಳು |
ಹೊನ್ನಿನ ಮನೆಯು ಸರ್ವಜ್ಞ ||

ಅನ್ಯ ಪುರುಷರನ್ನು ತಂದೆಯ ಸಮಾನವೆಂದು ತಿಳಿದು ಅದರಂತೆ ನಡೆಯುವಂಥ ಸಾಧ್ವಿಮಣಿಗೆ ಸ್ವರ್ಗದೊಳಗಿನ ಬಂಗಾರ ಮಹಲು ಕಾಯ್ದಿರಿಸಲಾಗಿರುತ್ತದೆ.

೧೨೯. ತಂದೆತಾಯಿಗಳ ಘನ | ದಿಂದ ವಂದಿಸುವಂಗೆ |
ಬಂದ ಕುತ್ತುಗಳು ಬಯಲಾಗಿ, ಸ್ವರ್ಗವದು |
ಮುಂದೆ ಬಂದಕ್ಕು ಸರ್ವಜ್ಞ ||

ತಂದೆ – ತಾಯಿಗಳಲ್ಲಿ ವಿನಯದಿಂದ ನಡೆದುಕೊಳ್ಳುವಂಥವನಿಗೆ ಬಂಥಂಥ ಕುತ್ತು (ಗಂಡಾಂತರ) ಗಳೆಲ್ಲವೂ ಬಯಲಾಗಿ ಸ್ವರ್ಗವು ಎದುರಿಗೇ ಬರುವದರಲ್ಲಿ ಸಂದೇಹವಿಲ್ಲ.

೧೩೦. ಮಾಡಿದುದ ಒಪ್ಪದನ | ಮೂಢನಾಗಿಪ್ಪವನ |
ಕೂಡಿ ತಾ ಮಾಡಿ ಇದಿರಾಡಿಕೊಳ್ಳುವನ |
ನೋಡಿದರೆ ತೊಲಗು ಸರ್ವಜ್ಞ ||

( ತಾನು ) ಮಾಡಿದ ತಪ್ಪನ್ನು ಒಪ್ಪದೆ ಇರುವಂಥವನ, ಮೂರ್ಖನಾಗಿರುವಂಥವನ, ಹಾಗು ಪರನಿಂದೆ ಮಾಡುವಂಥವನನ್ನು ಕಂಡರೆ (ಕೂಡಲೆ) ಅಲ್ಲಿಂದ ತೊಲಗಿಬಿಡು.

೧೩೧. ಒಡಹುಟ್ಟಿದವ ಭಾಗ | ದೊಡೆವೆಯನು ಕೇಳಿದರೆ |
ಕೊಡದೆ ಕದನದಲಿ ಮಡದಿಹರೆ, ಅದನು ತ |
ನ್ನೊಡನೆ ಹೂಳುವರೆ ಸರ್ವಜ್ಞ ||

ಒಡಹುಟ್ಟಿದ ಸೋದರನು (ತನ್ನ) ಪಾಲಿನ ಒಡವೆಗಳನ್ನು ಕೇಳಿದರೆ ಅವನಿಗೆ ಕೊಡದೆ ಹೊಡೆದಾಡಿ ಕದನದಲ್ಲಿಯೇ ಮಡಿದರೆ ಆ ಒಡವೆಗಳನ್ನು ಅವನೊಂದಿಗೆ ಹೂಳುವರೇ ? (ಎಂದಿಗೂ ಇಲ್ಲ.)

೧೩೨. ಅಂಧಕರು ನಿಂದಿರಲು ಮುಂದೆ ಬಪ್ಪರ ಕಾಣ |
ಬಂದರೆ ಬಾಯೆಂದೆನದಿರ್ಪ ಗರುವಿಯ |
ದಂದುಗವೇ ಬೇಡ ಸರ್ವಜ್ಞ ||

ಕುರುಡನೊಬ್ಬನು ನಿಂತುಕೊಂಡಿರಲು ಅವನಿಗೆ ಮುಂದೆ ಬರುವಂಥವರು ಕಾಣಲಾರರು. (ಆದರೆ ಬರುವಂಥವರನ್ನು ಕಂಡು) ಬಂದರೂ ಬಾ ಎಂದು ಎನ್ನಲಾರದ ಗರ್ವಿಯ ಸಂಗವೇ ಬೇಡ.

೧೩೩. ಜಾತಿ ಜಾತಿಗೆ ವೈರ | ನೀತಿ ಮೂರ್ಖಗೆ ವೈರ |
ಪಾತಕವು ವೈರ ಸುಜನರ್ಗೆ, ಅರಿದಂಗೆ |
ಏತರಮ ವೈರ ಸರ್ವಜ್ಞ ||

ಜಾತಿ–ಜಾತಿಗಳಲ್ಲಿ ವೈರವು ಸ್ವಾಭಾವಿಕ. ಮೂರ್ಖನಿಗೆ ನೀತಿಯನ್ನು ಕಂಡರೆ ವೈರ ಹಾಗು ಸುಜನರಾದವರು ಪಾತಕವನ್ನು ವಿರೋಧಿಸುತ್ತಾರೆ. ಅಂದರೆ ( ಎಲ್ಲವನ್ನೂ ) ಅರಿತಂಥವನಿಗೆ ಯಾರ ವೈರತ್ವವೂ ಇರುವದಿಲ್ಲ.

ಧನ

೧೩೪. ಧನಕನಕವುಳ್ಳನಕ | ದಿನಕರನವೋಲಕ್ಕು |
ಧನಕನಕ ಹೋದ ಮರುದಿನವೇ ಹಾಳೂರ |
ಶುನಕನಂತಕ್ಕು ಸರ್ವಜ್ಞ ||

(ತನ್ನ ಬಳಿ) ಐಶ್ವರ್ಯವಿರುವವರೆಗೆ (ಅವನು) ಸೂರ್ಯನಂತೆ ಪ್ರಕಾಶಿಸುತ್ತಾನೆ. ಆದರೆ ಐಶ್ವರ್ಯವು ಹೋದ ಮರುದಿನವೇ (ಅವನು) ಹಾಳೂರಿನ ನಾಯಿಯಂತಾಗುತ್ತಾನೆ.

೧೩೫. ಮಡದಿ ಮಕ್ಕಳ ಮಮತೆ | ಒಡಲೊಡವೆಯಿರುತನಕ |
ಒಡಲೊಡವೆ ಕೆಟ್ಟ ಮರುದಿನವೆ, ಅವರೆಲ್ಲ |
ಕಡೆಗೆ ಸಾಗುವರು ಸರ್ವಜ್ಞ ||

ಮಡದಿ–ಮಕ್ಕಳ ಪ್ರೀತಿಯು (ನಿನ್ನಲ್ಲಿ) ಒಡವೆಗಳಿರುವತನಕ ಮಾತ್ರ. (ಆದರೆ ನಿನ್ನಲ್ಲಿಯ) ಒಡವೆಗಳು ನಾಶವಾದ ಮರುದಿನವೇ (ನಿನ್ನಿಂದ) ಅವರೆಲ್ಲರೂ ದೂರಾಗುವರು.

೧೩೬. ಮುನಿವರನ ನೆನೆಯುತಿರು | ವಿನಯದಲಿ ನಡಿಯುತಿರು |
ವನಿತೆಯರ ಬಲೆಗೆ ಸಿಲುಕದಿರು, ಸಿರಿಸುಖವು |
ಮನದಣಿಯಲಿಕ್ಕು ಸರ್ವಜ್ಞ ||

ಮುನಿಗಳನ್ನು ನೆನೆಯುತ್ತಿರು. (ಯಾವಾಗಲೂ) ವಿನಯದಿಂದ ನಡೆಯುತ್ತಿರು. ಹಾಗು ವನಿತೆಯರ ಬಲೆಗೆ ಸಿಲುಕದೆ ದೂರ ಇರು. (ಅಂದರೆ ನಿನಗೆ) ಸ್ವರ್ಗಸುಖವು ಮನದಣಿಯೇ ದೊರೆಯುವದು.

೧೩೭. ಕಂಡುದನು ಅಡೆ ಭೂ | ಮಂಡಲವು ಮುನಿಯುವದು |
ಕೊಂಡಾಡುತಿಚ್ಛೆ ನುಡಿದಿಹರೆ ಜಗವೆಲ್ಲ |
ಮುಂಡಾಡುತಿಹುದು ಸರ್ವಜ್ಞ ||

ಕಂಡದ್ದನ್ನು (ಕಂಡಂತೆ) ಆಡಿದರೆ (ಇಡಿಯ) ಭೂಮಂಡಲವೇ ಸಿಟ್ಟಾಗುವದು. (ಆದರೆ ಅವರನ್ನು) ಕೊಂಡಾಡುತ್ತ ಹೊಗಳಿದರೆ ಮಾತ್ರ ಜಗತ್ತೇ (ನಿಮ್ಮನ್ನು) ಮುದ್ದಾಡುವದು.

೧೩೮. ತನ್ನ ದೋಷವ ನೂರ | ಬೆನ್ನ ಹಿಂದಕೆ ಇರಿಸಿ |
ಅನ್ಯನೊಂದಕ್ಕೆ ಹುಲಿಯಪ್ಪ ಮಾನವನು |
ಕುನ್ನಿಯಲ್ಲೇನು ಸರ್ವಜ್ಞ ||

ತಾನು ಮಾಡಿದ ನೂರಾರು ದೋಷಗಳನ್ನು ಬೆನ್ನು ಹಿಂದೆ ಇರಿಸಿ ಕೊಂಡು, ಅನ್ಯರು ಮಾಡಿದ ಒಂದೇ ಒಂದು ತಪ್ಪಿಗೂ ಕೂಡ ಹುಲಿಯಂತೆ ಗರ್ಜಿಸುವವನು ನಾಯಿಯಲ್ಲದೆ ಮತ್ತೇನು !

೧೩೯. ಉಳ್ಳವನು ನುಡಿದಿಹರೆ | ಬೆನ್ನ ಹಿಂದಕೆ ಇರಿಸಿ |
ಇಲ್ಲದ ಬಡವ ನುಡಿದರೆ ತುತ್ತಿನಲಿ |
ಕಲ್ಲು ಕಡಿದಂತೆ ಸರ್ವಜ್ಞ ||

( ಹಣ ) ಉಳ್ಳವನು ಏನನ್ನು ನುಡಿದರೂ ( ಅದು ) ಒಳ್ಳೆಯದೆಂದ ಅನ್ನುವರು. ಆದರೆ ಬಡವನು ನಿಜವನ್ನು ನುಡಿದರೂ ಕೂಡ ( ಅವನ ಮಾತು ) ತುತ್ತಿನೊಳಗೆ ಹಳ್ಳು ಕಡಿದಂತೆ ಅಸಹ್ಯವಾದುದು.

೧೪೦. ತಪ್ಪು ಮಾಡಿದ ಮನುಜ | ಗೊಪ್ಪುವದೆ ಸಂಕೋಲೆ |
ತೆಪ್ಪು ಮಾಡಿದಗೆ ಸೆರೆಯು, ಸಂಕೋಲೆಗಳು |
ಇಪ್ಪುದೇ ಸರಿಯು ಸರ್ವಜ್ಞ ||

ತಪ್ಪು ಮಾಡಿದಂಥ ಮನುಷ್ಯನಿಗೆ ಸಂಕೋಲೆ ( ಕೈತೋಳ ) ಗಳು ಒಪ್ಪುವದಿಲ್ಲ. (ಆದರೆ) ತಪ್ಪು ಮಾಡಿದಂಥ ಮನುಷ್ಯನಿಗಾಗಿ (ಮಾತ್ರ) ಸಂಕೋಲೆ ಹಾಗೂ ಸೆರೆಮನೆಗಳು ಇರುವದು ಒಳ್ಳೆಯದು.

೧೪೧. ತಪ್ಪು ಮಾಡದವಂಗೆ | ತಪ್ಪದದು ಸಂಕೋಲೆ |
ತಪ್ಪಿಲ್ಲದಿಪ್ಪ ಶರಣಂಗೆ, ಸಂಕೋಲೆ |
ಬಪ್ಪುವದೇಕೆ ಸರ್ವಜ್ಞ ||

ತಪ್ಪು ಮಾಡಿದಂಥವನಿಗೆ ಸಂಕೋಲೆಯು ಎಂದಿಗೂ ತಪ್ಪಲಾರದು (ಆದರೆ ಅದೇ) ತಪ್ಪು ಮಾಡದಂಥ ಶರಣರಿಗೆ ಸಂಕೋಲೆಗಳೇಕೆ ಬರುತ್ತವೆ (ಬರುವದಿಲ್ಲವೆಂದರ್ಥ.)

೧೪೨. ಹೆಣ್ಣನ್ನು ಹೊನ್ನನ್ನು । ಹಣ್ಣಾದ ಮರಗಳನು ।
ಕಣ್ಣಿನಲಿ ಕಂಡು ಮನದಲಿ ಬಯಸದಿಹ ।
ಅಣ್ಣಗಳು ಯಾರ ಸರ್ವಜ್ಞ ॥

(ಚಲುವೆಯಾದ) ಹೆಣ್ಣನ್ನು, ಬಂಗಾರವನ್ನು ಹಾಗೂ ಹಣ್ಣುಗಳಿಂದ ತುಂಬಿದ ಮರಗಳನ್ನು ಕಣ್ಣಿನಿಂದ ನೋಡಿ ಅವುಗಳನ್ನು (ಮನದಲ್ಲಿಯಾದರೂ) ಬಯಸದಂಥ ಅಣ್ಣಗಳು ಯಾರಾದರೂ ಇದ್ದಾರೆಯೇ ? (ಇಲ್ಲ.)

೧೪೩. ವಚನದೊಳಗೆಲ್ಲರೂ । ಶುಚಿ, ವೀರ, ಸಾಧುಗಳು ।
ಕುಚ, ಶಸ್ತ್ರ, ಹೇಮ ಸೋಂಕಿದರೆ ಲೋಕದೊಳ ।
ಗಚಲದವರಾರು ಸರ್ವಜ್ಞ ॥

ನಾನು ಶುಚಿ, ನಾನು ವೀರ, ನಾನು ಸಾಧು ಎಂದು ಮಾತಿನೊಳಗೆ ಹೇಳಿಕೊಳ್ಳಬೇಕಷ್ಟೆ. ( ಆದರೆ ) ಕುಚ, ಶಸ್ತ್ರ ಹಾಗೂ ಬಂಗಾರ ಇವು ಮೂರು ವಸ್ತುಗಳು ಸೋಂಕಿದರೂ ಕೂಡ ಚಂಚಲನಾಗದಂಥವನು ಯಾವನಾದರೂ ಇದ್ದಾನೆಯೇ ?

೧೪೪. ತರಿಸುವದು ಮಿತ್ರರರನು । ಮರೆಸುವದು ಬಳಗವನು ।
ಇರಿಸುವದು ತನ್ನ ಇದಿರನು ಹೊನ್ನಿನ ।
ತರವ ಬೇಡೆಂದ ಸರ್ವಜ್ಞ ॥

ಐಶ್ವರ್ಯವು ಮಿತ್ರರನ್ನು ತರಿಸುವದು. ಬಂಧು-ಬಳಗದವರನ್ನು ಮರೆಯಿಸುವದು ( ಹಾಗೂ ಅವರನ್ನು ) ಆದರಲ್ಲಿಯೇ ತನ್ಮಯನನ್ನಾಗಿ ಮಾಡುವದು. ಇಂಥ ಸಿರಿಯ ಸಂಗವೇ ಬೇಡ.

೧೪೫. ಕಣ್ಣು ನಾಲಿಗೆ ಮನವು । ತನ್ನದೆಂದೆನಬೇಡ ।
ಅನ್ಯರನು ಕೊಂದರೆನಬೇಡ, ಇವು ಮೂರು ।
ತನ್ನ ಕೊಲ್ಲುವವು ಸರ್ವಜ್ಞ ॥

ಕಣ್ಣು, ನಾಲಿಗೆ ಹಾಗು ಮನಸ್ಸು (ಇವು ಮೂರನ್ನೂ) ನಿನ್ನದೆಂದೆಂದು ಕೊಳ್ಳಬೇಡ. ಇವು ಮೂರು ವಸ್ತುಗಳು ನಿನ್ನನ್ನೇ ಕೊಲ್ಲುತ್ತವೆ. (ಆಗ ಮಾತ್ರ ನೀನು) “ನನ್ನನ್ನು ಅನ್ಯರು ಕೊಂದರು” ಎಂದು ನುಡಿಯಬೇಡ.

೧೪೬. ವದನೆ ಯೋಗಿಗೆ ಹೊಲ್ಲ | ಬದನೆ ರೋಗಿಗೆ ಹೊಲ್ಲ |
ಕದನವದು ಹೊಲ್ಲ ನೆರೆಯಲಿ ನಿದ್ದೆಗೆ |
ತುದಿಗಟ್ಟೆ ಹೊಲ್ಲ ಸರ್ವಜ್ಞ ||

ಯೋಗಿಗೆ ಸುಂದರ ಸ್ತ್ರೀಯು ಬೇಡ. ರೋಗಿಗೆ ಬದನೆಕಾಯಿಯು ಕೆಟ್ಟ. ನೆರೆಹೊರೆಯಲ್ಲಿ ಜಗಳವು ಒಳ್ಳೆಯದಲ್ಲ. (ಅದರಂತೆ) ನಿದ್ರೆಮಾಡಲು ತುದಿಗಟ್ಟೆಯು ಒಳ್ಳೆಯದಲ್ಲ. (ಏಕೆಂದರೆ ಕೆಳಗೆ ಬೀಳುವ ಭಯವಿರುತ್ತದೆ.)

೧೪೭. ಸಿಂದಿಯನು ಸೇವಿಪನು | ಹಂದಿಯಂತಿರುತಿಹನು |
ಹಂದಿಯೊಂದೆಡೆಗೆ ಉಪಕಾರಿ, ಕುಡುಕನು |
ಎಂದಿಗೂ ಬೇಡ ಸರ್ವಜ್ಞ ||

ಸಿಂದಿ (ಹೆಂಡ) ವನ್ನು ಕುಡಿಯುವಂಥವನು ಹಂದಿಯಂತೆ ಇರುತ್ತಾನೆ. ಹಂದಿಯು ಒಂದು ಸಲ ಉಪಕಾರವಾದರೂ ಮಾಡೀತು. ಆದರೆ ಕುಡುಕನು ಮಾತ್ರ ಎಂದೆಂದಿಗೂ ಬೇಡ. ( ಅವನಿಂದ ಏನೊಂದೂ ಆಗಲಾರದು. )

೧೪೮. ಹೆಂಡವನು ಸುರಿಸುರಿದು | ಕಂಡವರ ತಾ ಜರಿದು |
ಬಂಡು ನುಡಿಗಳನು ಸುರಿಯುತ್ತಲಿರುವವನ |
ಕಂಡಿಹರೆ ಸರ್ವಜ್ಞ ||

ಮೇಲಿಂದ ಮೇಲೆ ಹೆಂಡವನ್ನು ಕುಡಿಯುತ್ತ ಕಂಡವರನ್ನು ಜರಿಯುತ್ತ ಬಾಯಿಂದ ಅಪದ್ಧ ಮಾತುಗಳನ್ನಾಡುತ್ತ ತಿರುಗುವವರನ್ನು ಕಂಡರೆ ಅಲ್ಲಿ ನಿಲ್ಲಬೇಡ.

೧೪೯. ನೀಚ ಜನ ನೆರೆಗಿಂತ | ಈಚಲದ ಮರ ಲೇಸು |
ಈಚಲೊಂದೆಡೆ ಉಪಕಾರಿ, ನೀಚ ತಾ |
ಈಚಲಿಂ ಕೆಟ್ಟ ಸರ್ವಜ್ಞ ||

ನೀಚ ಮನುಷ್ಯನ ನೆರೆಹೊರೆಯಲ್ಲಿರುವದಕ್ಕಿಂತ ಈಚಲ ಮರವು ಎಷ್ಟೋ ಪಾಲು ಉತ್ತಮ. ಈಚಲಗಿಡವು ಒಂದಿಲ್ಲೊಂದು ಕೆಲಸಕ್ಕಾದರೂ ( ನೆರಳು ) ಬರುತ್ತದೆ. ಆದರೆ ನೀಚನು ಮಾತ್ರ ಈಚಲಿಗಿಂತಲೂ ಕೆಟ್ಟವನಾಗಿರುತ್ತಾನೆ.

೧೫೦. ಗಾಳಿದೂಳಿಯು ದಿನಕೆ । ಮಾಳಿಗೆಯು ಮನೆಲೇಸು ।
ಹೋಳಿಗೆ ತುಪ್ಪ ಉಣಲೇಸು, ಬಾಯಿಗೆ ।
ವೀಳೆಯೇ ಲೇಸು ಸರ್ವಜ್ಞ ॥

ಗಾಳಿಯ ದಿನದಲ್ಲಿ ಧೂಳಿನಿಂದ ರಕ್ಷಿಸಿಕೊಳ್ಳಲು ಮಾಳಿಗೆಯ ಮನೆಯು ಒಳ್ಳೆಯದು. ಊಟ ಮಾಡಲು ಹೋಳಿಗೆ ತುಪ್ಪ ಒಳ್ಳೆಯದು. (ಅದರಂತೆ) ಬಾಯಿಗೆ ವೀಳ್ಯವೂ ಒಳ್ಳೆಯದು.

೧೫೧. ವೀಳೆಯಿಲ್ಲದ ಬಾಯಿ । ಕೂಳು ಇಲ್ಲದ ನಾಯಿ ।
ಬಾಳೆಗಳು ಇಲ್ಲದೆಲೆದೋಟ, ಪಾತರದ ।
ಮೇಳ ಮುರಿದಂತೆ ಸರ್ವಜ್ಞ ॥

ವೀಳ್ಯವನ್ನು ಮೆಲ್ಲದಂಥ ಬಾಯಿ, ಕೂಳು ಇಲ್ಲದಂಥ ನಾಯಿ ಹಾಗು ಬಾಳೆಯ ಗಿಡಗಳು ಇಲ್ಲದಂಥ ಎಲೆದೋಟ ಇವುಗಳು ಕುಣಿತದವರ ಮೇಳವು ಮುರಿದಂತೆ.

೧೫೨. ಅಡಿಕೆ ಕಾಣದ ಬಾಯಿ । ಕುಡುಕು ಕಾಣದ ಕಿವಿಯು ।
ಒಡಕಿನ ಮನೆಯು ನಿಲುಕದಾ ಫಲಕೆ ನರಿ ।
ಮಿಡುಕಿ ಸತ್ತಂತೆ ಸರ್ವಜ್ಞ ॥

ಅಡಿಕೆ ಕಾಣದಂಥ ಬಾಯಿಯೂ, ಆಭರಣವನ್ನು ಕಾಣದಂಥ ಕಿವಿಯೂ ಹಾಗು ಸೋರುವಂಥ ಮನೆಯೂ (ಇವೆಲ್ಲ) ತನಗೆ ನಿಲುಕದಂಥ ಫಲಕ್ಕಾಗಿ ಮಿಡುಕಿದ ನರಿಯಂತೆಯೇ ಸರಿ.

೧೫೩. ಲೆತ್ತವೂ ಕುತ್ತವೂ । ಹತ್ತಿದೊಡೆ ಅಳವಲ್ಲ ।
ಕುತ್ತದಿಂ ದೇಹ ಬಡವಕ್ಕು, ಲೆತ್ತದಿಂ ।
ಬತ್ತಲೆವಕ್ಕು ಸರ್ವಜ್ಞ ॥

ಪಗಡೆ ಹಾಗು ರೋಗಗಳ ಸೋಂಕುವಿಕೆಯು ಒಳ್ಳೆಯದಲ್ಲ. ರೋಗದಿಂದ (ಮನುಷ್ಯನ) ದೇಹವು ಸೊರಗುತ್ತದೆ. ಪಗಡೆಯಾಟದಿಂದ (ಆವನು) (ಎಲ್ಲವನ್ನು ಕಳೆದುಕೊಂಡು) ಬತ್ತಲೆಯಾಗುತ್ತಾನೆ.

೧೫೪. ಲೆತ್ತವದು ಒಳಿತೆಂದು । ನಿತ್ಯವಾಡಲು ಬೇಡ ।
ಲೆತ್ತದಿಂ ಕುತ್ತು ಮುತ್ತಿ ಬರೆ, ಸುತ್ತಲೂ ।
ಕತ್ತಲಾಗಿಹುದು ಸರ್ವಜ್ಞ ॥

ಪಗಡೆಯಾಟವು ಒಳ್ಳೆಯದೆಂದು ಪ್ರತಿನಿತ್ಯವೂ ಆಡಲಿಕ್ಕೆ ಹೋಗ ಬೇಡ. ಅದರಿಂದ ಸಂಕಟಗಳು ಪ್ರಾಪ್ತವಾಗಿ ( ನಿನಗೆ ) ಎಲ್ಲೆಡೆಯೂ ಕತ್ತಲೆಯೇ ಕಂಡು ಬರುವದು.

೧೫೫. ವಿದ್ಯಕ್ಕೆ ಕಡೆಯಿಲ್ಲ । ಬುದ್ಧಿಗೆ ಬೆಲೆಯಿಲ್ಲ ।
ಛಿದ್ರಿಸುವವಗೆ ಗತಿಯಿಲ್ಲ ಮರಣಕ್ಕೆ ।
ಮದ್ದುಗಳಿಲ್ಲ ಸರ್ವಜ್ಞ ॥

ವಿದ್ಯೆಗೆ ಕೊನೆಯೇ ಇಲ್ಲ. ( ಅದರಂತೆ ) ಬುದ್ಧಿಯು ಅಮೂಲ್ಯ ವಾದುದು ( ಅದಕ್ಕೆ ಬೆಲೆ ಕಟ್ಟುವದು ಯಾರಿಂದಲೂ ಸಾಧ್ಯವಿಲ್ಲ. ) ಚಾಡಿ ಕೋರನಿಗೆ ಗತಿಯಿಲ್ಲ. ಮರಣಕ್ಕೆ ಯಾವ ಔಷಧಿಯೂ ಇಲ್ಲ.

೧೫೬. ವಿದ್ಯೆಯುಳ್ಳವನ ಮುಖವು । ಮುದ್ದು ಬರುವಂತಿಕ್ಕು ।
ವಿದ್ಯೆಯಿಲ್ಲದವನ ಬರಿ ಮುಖವು, ಹಾಳೂರ ।
ಹದ್ದಿನಂತಿಕ್ಕು ಸರ್ವಜ್ಞ ॥

ವಿದ್ಯಾವಂತನ ಮುಖವು ಎಲ್ಲರಿಗೂ ಮುದ್ದು ಬರುವಂತಿರುತ್ತದೆ. (ಆದರೆ) ವಿದ್ಯೆ ಇಲ್ಲದವನ ಬರಿಮುಖವು ಹಾಳೂರುನೊಳತರುವ ಹದ್ದಿನಂತಿರುತ್ತದೆ.

೧೫೭. ಒಡಲೊಳಡಗಿದ ವಿದ್ಯೆ । ಒಡಗೂಡಿ ಬರುತಿರಲು ।
ಒಡಹುಟ್ಟಿದವರು, ಕಳ್ಳರು, ನೃಪರದನು ।
ಪಡೆಯರೆಂತೆಂದ ಸರ್ವಜ್ಞ ॥

ಒಡಲೊಳಗೆ ಅಡಗಿಕೊಂಡಂಥ ವಿದ್ಯೆಯು ( ನಿನ್ನ ) ಜೊತೆಗೇ ಬರುವದು ( ಅದನ್ನು ನಿನ್ನ ) ಒಡಹುಟ್ಟಿದವರಾಗಲಿ, ಕಳ್ಳಕಾಕರಾಗಲಿ, ಅರಸನಾಗಲಿ ( ನಿನ್ನಿಂದ ) ಕಸಿದು ಕೊಳ್ಳಲಾರರು ?

೧೫೮. ವನಕೆ ಕೋಗಿಲೆ ಲೇಸು | ಮನಕೆ ಹರುಷವು ಲೇಸು |
ಕನಕವುಳ್ಳವನ ಕೆಳೆ ಲೇಸು, ವಿದ್ಯಕೆ |
ಅನುಭಾವ ಲೇಸು ಸರ್ವಜ್ಞ ||

ವನದಲ್ಲಿ ಕೋಕಿಲೆ ಇದ್ದರೆ ಶೋಭೆ. ಮನಕ್ಕೆ ಸಂತೋಷವಿದ್ದರೆ ಒಳ್ಳೆಯದು. ಹಾಗೂ ಶಿರಿವಂತರ ಗೆಳೆತನ ಒಳ್ಳೆಯದು. ಅದರಂತೆ ವಿದ್ಯಕ್ಕೆ ಅಂತಃಸ್ಫೂರ್ತಿಯಿದ್ದರೆ ಒಳ್ಳೆಯದು. (ಅತ್ಯಗತ್ಯ.)

೧೫೯. ಉದ್ಯೋಗವುಳ್ಳವನ | ಹೊದ್ದುವುದು ಸಿರಿ ಬಂದು |
ಉದ್ಯೋಗವಿಲ್ಲದಿರುವವನ ಕರದೊಳಗೆ |
ಇದ್ದದೂ ಪೋಪ ಸರ್ವಜ್ಞ ||

( ಯಾವಾಗಲೂ ) ಕೆಲಸ ಮಾಡುವವನ ಬಳಿ ಐಶ್ವರ್ಯವೂ ತಾನಾಗಿಯೇ ಬಂದು ಆಶ್ರಯಿಸುತ್ತದೆ. (ಆದರೆ) ನಿರುದ್ಯೋಗಿಯಾದವನ ಕೈಯಲ್ಲಿದ್ದ ಹಣ ಕೂಡ ಹೋಗಿಬಿಡುತ್ತದೆ.

೧೬೦. ಹೋರುವಾ ಸತಿಯಿಂದ | ಸೋರುವಾ ಮನೆಯಿಂದ |
ಪೂರೈಸದವನ ಬದುಕಿಂದ ಕೊಂಡೊಯ್ವ |
ಮಾರಿ ಲೇಸೆಂಬ ಸರ್ವಜ್ಞ ||

(ಯಾವಾಗಲೂ) ಜಗಳಾಡುವಂಥ ಹೆಂಡತಿಗಿಂತ, (ಮಳೆ ಬಂದಾಗ) ಸೋರುವ ಮನೆಗಿಂತ ಹಾಗೂ ಪೂರೈಸಲಾಗದ ಬದುಕಿಗಿಂತ ಒಮ್ಮೆಲೆ ಎತ್ತಿಕೊಂಡು ಹೋಗುವಂಥ ಮರಣವು (ಸಾವಿರ ಪಾಲಿಗೆ) ಉತ್ತಮವಾದದ್ದು.

೧೬೧. ಪ್ರಾಸವಿಲ್ಲದ ಪದವ | ತಾಸು ಹಾಡಿದರೇನು |
ಸಾಸುವೆ ಎಣ್ಣೆ ಹದಮಾಡಿ, ಕಣ್ಣಿಂಗೆ |
ಹೂಸಿಕೊಂಡಂತೆ ಸರ್ವಜ್ಞ ||

ಪ್ರಾಸವಿಲ್ಲದ ಪದವನ್ನು ತಾಸುಗಟ್ಟಲೆ ಹಾಡುವದರಿಂದ ಫಲವೇನು ? ( ಆ ರೀತಿ ಮಾಡುವದೆಂದರೆ ) ಹದಮಾಡಿದ ಸಾಸಿವೆಯ ಎಣ್ಣೆಯನ್ನು ಕಣ್ಣಿನೊಳಗೆ ಹಾಕಿಕೊಂಡಂತೆಯೇ ಸರಿ. ( ಹಾಕಿಕೊಂಡರೂ ಅದು ವ್ಯರ್ಥ. )

೧೬೨. ಓದಿದಾ ಓದು ತಾ । ಸೋದ ಕಬ್ಬಿನ ಸಿಪ್ಪೆ ।
ಓದಿನಾ ಒಡಲ ನರಿದಿಹರೆ ಸಿಪ್ಪೆ ಕ ।
ಬ್ಬಾದಂತೆ ಕಾಣೊ ಸರ್ವಜ್ಞ ॥

ಓದಿಕೊಂಡಂಥ ಪುಸ್ತಕವು, ತಿಂದುಹಾಕಿದ ಕಬ್ಬಿನ ಸಿಪ್ಪೆಯಂತೆ. ಓದಿನೊಳಗಿನ ತಿರುಳನ್ನರಿತುಕೊಂಡರೆ ಆ ಸಿಪ್ಪೆಯೇ ಮರಳಿ ಕಬ್ಬಾದಂತೆ.

೧೬೩. ಹೊತ್ತಿಗೊದಗದ ಮಾತು । ಹತ್ತುಸಾವಿರ ವ್ಯರ್ಥ ।
ಕತ್ತೆ ಕೂಗಿದರೆ ಫಲವುಂಟು, ಭಹುಮಾತು ।
ಕತ್ತೆಗೂ ಕಷ್ಟ ಸರ್ವಜ್ಞ ॥

ಹೊತ್ತಿಗೆ ಒದಗಲಾರದಂಥ ಹತ್ತು ಸಾವಿರ ಮಾತುಗಳಿದ್ದರೂ ವ್ಯರ್ಥವೇ ಸರಿ. ಕತ್ತೆಯು ಕಿರುಚಿಕೊಂಡರೆ (ಒಂದು ವೇಳೆ) ಫಲವುಂಟು. (ಆದರೆ) ಬಹಳ ಮಾತು ಕತ್ತೆಯ ಕೂಗಿಗಿಂತಲೂ ಕೀಳಾದದ್ದು.

೧೬೪. ಹೊಲಬನರಿಯದ ಮಾತು । ತಲೆಬೇನೆ ಎದ್ದಂತೆ ।
ಹೊಲಬನರಿತು ಒಂದು ನುಡಿದರೆ, ಅದು ದಿವ್ಯ ।
ಫಲಪಕ್ವದಂತೆ ಸರ್ವಜ್ಞ ॥

ದಾರಿ ಬಿಟ್ಟು ಆಡಿದ ಮಾತುಗಳು ತಲೆನೋವು ಎದ್ದಂತೆ. ( ಬೇಸರಿಕೆಯನ್ನುಂಟು ಮಾಡುವವು. ) ಸರಿಯಾಗಿ ಆಡಿದ ಒಂದೇ ಒಂದು ಮಾತು ಪಕ್ವವಾದ ಫಲದಂತೆ ದಿವ್ಯವಾಗಿರುತ್ತದೆ.

೧೬೫. ಮಾತಿನಿಂ ನಡೆನುಡಿಯು । ಮಾತಿನಿಂದಲೆ ಕೊಲೆಯು ।
ಮಾತಿನಿಂ ಸರ್ವ ಸಂಪದವು, ಲೋಕಕ್ಕೆ ।
ಮಾತೆ ಮಾಣಿಕವು ಸರ್ವಜ್ಞ ॥

ಮಾತಿನಿಂದಲೇ ನಡೆನುಡಿಗಳು, ಶತೃವಿನ ಕೊಲೆಯು ಕೂಡ ಮಾತಿನಿಂದ, ಹಾಗು ಮಾತಿನಿಂದಲೇ ಸರ್ವ ಸಂಪತ್ತು. (ಹೀಗಿರುವಾಗ) ಮಾತೇ ಲೋಕಕ್ಕೆ ಮಾಣಿಕ್ಯವಾಗಿದೆ.

೧೬೭. ಮಾತು ಬಲ್ಲಾತಂಗೆ ಯೋತವದು ಸುರಿದಂತೆ |
ಮಾತಾಡಲರಿಯದಾಂತಗೆ, ಬರಿಯೋತ |
ನೇತಾಡಿದಂತೆ ಸರ್ವಜ್ಞ ||

ಮಾತು ಬಲ್ಲವನಿಗೆ ಕಪ್ಪಲಿಯು ನೀರು ಸುರಿದಂತೆ, ( ಆದರೆ ಮಾತಾಡಲು ಅರಿಯದವನಿಗೆ ಬರಿಯ ಕಪ್ಪಲಿ ಜೋತುಬಿದ್ದಂತೆಯೇ ಸರಿ.

೧೬೭. ಮಾತು ಬಲ್ಲಡ ತಾನು | ಸೋತು ಹೋಹುದು ಲೇಸು |
ಮಾತಿಂಗೆ ಮಾತು ಮಥಿಸಲ್ಕೆ ವಿಧಿ ಬಂದು |
ಆತುಕೊಂಡಿಹುದು ಸರ್ವಜ್ಞ ||

ಮಾತು ಬಲ್ಲಂಥವನು ( ಪ್ರಸಂಗ ಬಂದಾಗ ) ಸೋತುಹೋಗುವದೇ ಒಳ್ಳೆಯದು. (ಇಲ್ಲದಿದ್ದರೆ) ಮಾತಿಗೆ ಮಾತು ಬೆಳೆಯಲು (ವಿರಸವುಂಟಾಗುತ್ತದೆ.) ಇಂಥ ಸಮಯವನ್ನೇ ಕಾಯುತ್ತ ವಿಧಿಯು ಕುಳಿತುಕೊಂಡಿರುತ್ತದೆ.

೧೬೮. ರಸಿಕನಾಡಿದ ಮಾತು | ಶಶಿಯುದಿಸಿ ಬಂದಂತೆ |
ರಸಿಕವಲ್ಲದವನ ಬರಿ ಮಾತು ಕಿವಿಗೆ ಕೂರ್ |
ದಶಿಯು ಬಡಿದಂತೆ ಸರ್ವಜ್ಞ ||

ರಸಿಕನಾಡಿದಂಥ ಮಾತುಗಳು ಚಂದ್ರನುದಯಿಸಿ ಬಂದಷ್ಟು ಸಂತಸವನ್ನೀಯುತ್ತವೆ. ಆದರೆ ನಸಿಕನಲ್ಲದವನ ಮಾತುಗಳಿಂದ ಮಾತ್ರ ಕಿವಿಯಲ್ಲಿ ಚೂಪಾದ ಗೂಟವನ್ನು ಹೊಡೆದಂತಾಗುತ್ತದೆ.

೧೬೯. ಹೊತ್ತಿಗೊದಗಿದ ಮಾತು | ಸತ್ತವನು ಎದ್ದಂತೆ |
ಹೊತ್ತಾಗಿ ನುಡಿದ ಮಾತು, ಕೈ ಜಾರಿದ |
ಮುತ್ತಿನಂತಿಹುದು ಸರ್ವಜ್ಞ ||

ಸಮಯೋಚಿತವಾಗಿ ಬಂದ ಮಾತು, ಸತ್ತವನು ಎದ್ದು ಬಂದಷ್ಟು ಒಳ್ಳೆಯದಾಗುತ್ತದೆ. ಆದರೆ ಸಮಯ ಮೀರಿದ ನಂತರ ಆಡಿದ ಮಾತು ಕೈ ಜಾರಿ ಕೆಳಗೆ ಬಿದ್ದ ಮುತ್ತಿನಂತಾಗುತ್ತದೆ. (ಅಂದರೆ ವ್ಯರ್ಥ.)

೧೭೦. ಮಾತಿಂಗೆ ಮಾತುಗಳು । ಓತುಸಾಸಿರವುಂಟು ।
ಮಾತಾಡಿದಂತೆ ನಡೆದಾತ ಜಗವನು ।
ಕೂತಲ್ಲಿಯೇ ಅಳ್ವ ಸರ್ವಜ್ಞ ॥

ಮಾತಿಗೆ ಮಾತಾಗಿ ಸಂಗ್ರಹಿಸಿದ್ದು ಸಾವಿರದಷ್ಟಿದ್ದರೂ ಮಾತಾಡಿದಂತೆ ನಡೆಯುವಂಥವನು ಕುಳಿತಲ್ಲಿಯೇ ಎಲ್ಲವನ್ನು ನಡೆಯಿಸಿಕೊಂಡು ಹೋಗಬಲ್ಲನು.

೧೭೧. ಕೋಟಿ ವಿದ್ಯೆಗಳಲ್ಲಿ । ಮೇಟಿ ವಿದ್ಯೆಯೇ ಮೇಲು ।
ಮೇಟಿಯಿಂ ರಾಟಿ ನಡೆದುದಲ್ಲದೆ, ದೇಶ ।
ದಾಟವೆ ಕೆಡಗು ಸರ್ವಜ್ಞ ॥

ಕೋಟಿ ವಿದ್ಯೆಗಳಲ್ಲಿ ಒಕ್ಕಲುತನದ ಉದ್ಯೋಗವೇ ಮಿಗಿಲಾದದ್ದು. ಅದರಿಂದಲೆ ಉಳಿದೆಲ್ಲ ವ್ಯವಸಾಯಗಳು ನಡೆಯುತ್ತವೆ. ಅದಿಲ್ಲದಿದ್ದರೆ ದೇಶವೇ ತಲೆಕೆಳಗಾಗುತ್ತದೆ.

೧೭೨. ಉತ್ತೊಮ್ಮೆ ಹರಗದಲೆ । ಬಿತ್ತೊಮ್ಮೆ ನೋಡದೆಲೆ ।
ಹೊತ್ತೇರಿ ಹೊಲಕೆ ಹೋದರೆ ಅವ ತನ್ನ ।
ನೆತ್ತರವ ಸುಡುವ ಸರ್ವಜ್ಞ ॥

ಬಿತ್ತುವ ಪೂರ್ವದಲ್ಲಿ ಒಂದು ಸಲ ಹರಗದೆ, ಬಿತ್ತಿದ ನಂತರ ಒಂದು ಸಲ ನೋಡದೆ, ಮತ್ತು ಹೊತ್ತು ಏರಿದ ನಂತರ ಹೊಲಕ್ಕೆ ಹೋಗುವಂಥವನು ತನ್ನ ರಕ್ತವನ್ನು ತಾನೇ ಸುಟ್ಟುಕೊಂಡಂತೆ.

೧೭೩. ಹಗರಣ ಎತ್ತಾಗೆ । ಬರಡಾದ ಹಯನಾಗೆ ।
ಹರಟೆ ಹೊಡೆಯುವ ಮಗನಾಗೆ, ಹೊಲದಲ್ಲಿ ।
ಕರಡವೇ ಬೆಳಗು ಸರ್ವಜ್ಞ ॥

( ಹೊಲವನ್ನು) ಹರಗದಂಥ ಎತ್ತುಗಳು, (ಮನೆಯಲ್ಲಿ) ಹಿಂಡಲಾರದಂಥ ಎಮ್ಮೆ-ಆಕಳುಗಳು, ಹಾಳು ಹರಟೆಯಲ್ಲಿಯೇ ಹೊತ್ತು ಕಳೆಯುವಂಥ ಮಗನು ಇದ್ದುದಾದರೆ ಹೊಲದಲ್ಲಿ ಹುಲ್ಲಿನ ಹೊರತು ಮತ್ತೇನನ್ನೂ ಬೆಳೆಯಲು ಸಾಧ್ಯವಿಲ್ಲ.

೧೭೪. ದಂಡು ಇಲ್ಲದ ಅರಸು । ಕುಂಡವಿಲ್ಲದ ಹೋಮ ।
ಬಂಡಿಯಿಲ್ಲದ ಬೇಸಾಯ ತಲೆ ಹೋದ ।
ಮುಂಡದಂತಕ್ಕು ಸರ್ವಜ್ಞ ॥

ಸೈನ್ಯವಿರದೆ ಇದ್ದ ಅರಸನು, ಕುಂಡವಿಲ್ಲದಂಥ ಯಜ್ಞವು ಹಾಗೂ ಚಕ್ಕಡಿಯಿಲ್ಲದಂಥವನ ಬೇಸಾಯವು ( ಒಕ್ಕಲುತನವು ) ಇವು ಮೂವರು ತಲೆಯಿಲ್ಲದ ಮುಂಡದಂತೆಯೇ ಸರಿ.

೧೭೫. ಬೆಕ್ಕು ಮನೆಯೊಳು ಲೇಸು । ಮುಕ್ಕು ಕಲ್ಲಿಗೆ ಲೇಸು ।
ನಕ್ಕು ನಗಿಸುವ ನುಡಿ ಲೇಸು, ಊರಿಗೆ ।
ಒಕ್ಕಲಿಗ ಲೇಸು ಸರ್ವಜ್ಞ ॥

ಮನೆಯೊಳಗೆ ಬೆಕ್ಕು ಇದ್ದರೆ ಒಳ್ಳೆಯದು, ( ಕಾಳಿನ ) ಮುಕ್ಕು (ಬೀಸುವ) ಕಲ್ಲಿಗೆ ಶೋಭೆಯು. ಹಾಗೂ (ತಾನು) ನಕ್ಕು ( ಇತರರನ್ನು ) ನಗಿಸುವಂಥ ಮಾತುಗಳು ಬಹಳ ಒಳ್ಳೆಯವು. ( ಅದರಂತೆ ) ಊರಿಗೆ ಒಕ್ಕಲಿಗನೇ ಭೂಷಣನು.

೧೭೬. ತುರುಕರುವು ಇರದೂರ । ನರಕಭಾಜನಮುಕ್ಕು ।
ತುರುಕರುಂಟಾದರಣಲುಂಟು, ಜಗಕೆಲ್ಲ ।
ತುರುಕರುವೆ ದೈವ ಸರ್ವಜ್ಞ ॥

( ಹೈನವನ್ನೀಯುವ ) ದನಕರುಗಳು ಇಲ್ಲದಂಥ ಊರುಗಳು ನರಕ ಸಮಾನವೆಂದೇ ಹೇಳಬೇಕು. (ಅಂಥ ದನಕರುಗಳಿದ್ದರೆ) ಊಟಕ್ಕೆ ಕೊರತೆ ಇರುವದಿಲ್ಲ. ( ಒಂದೇ ಮಾತಿನಲ್ಲಿ ಹೇಳಬೇಕೆಂದರೆ ) ಜಗತ್ತಿಗೆಲ್ಲ ದನ ಕರುಗಳೇ ದೈವ.

೧೭೭. ಅಂಗನೆಯು ಗುಣಿಯಾಗಿ । ಅಂಗಳಕೆ ಹೊರಸಾಗಿ ।
ತಂಗಾಳಿ ಜೊನ್ನದಿರುಳಾಗಿ ಬೇಸಿಗೆಯು ।
ಹಿಂಗದೇ ಇರಲಿ ಸರ್ವಜ್ಞ ॥

ಸದ್ಗುಣಿಯಾದ ಹೆಂಡತಿಯಿರಬೇಕು. ( ಮಲಗಲು ) ಅಂಗಳದಲ್ಲಿ ಹೊರಸಿರಬೇಕು. ಹಾಗೂ ತಂಗಾಳಿಯನ್ನೀಯುವ ಬೆಳದಿಂಗಳಿನ ರಾತ್ರಿಯಾಗಿರಲು ಸದಾಕಾಲ ಬೇಸಿಗೆಯೇ ಇರಲಿ. (ಎಂದು ಹೇಳುವದು ಸ್ವಾಭಾವಿಕ.)

೧೭೮. ತುಂಬಿದಾ ಕೆರೆಭಾವಿ | ತುಂಬಿದಂತಿರುವದೇ ? |
ನಂಬಿರಬೇಡ ಲಕ್ಷ್ಮಿಯನು, ಬಡತನವು |
ಬೆಂಬಿದಡೆ ಬಹುದು ಸರ್ವಜ್ಞ ||

ತುಂಬಿದಂಥ ಕೆರೆ ಬಾವಿಗಳು (ಯಾವಾಗಲೂ) ತುಂಬಿಕೊಂಡೇ ಇರುವವೇ ? ( ಸಾಧ್ಯವಿಲ್ಲ. ) ಅದರಂತೆ ಐಶ್ವರ್ಯವನ್ನು ನಂಬಬೇಡ. ಸಿರಿಯ ಹಿಂದೆ ಬಡತನವು ಬಂದೇ ಬರುವದು.

೧೭೯. ಉದ್ದಾದ ಮೊಲೆ ಹೊಲ್ಲ | ಇದ್ದೂರ ಹಗೆ ಹೊಲ್ಲ |
ತಿದ್ದಿದ ಹೋರಿ ಉಳ ಹೊಲ್ಲ ಬಡವಂಗೆ |
ಬಿದ್ದ ನಡು ಹೊಲ್ಲ ಸರ್ವಜ್ಞ ||

( ಅತಿಶಯ, ) ಉದ್ದವಾದ ಮೊಲೆಗಳು ಅನವಶ್ಯ; ಇದ್ದೂರಲ್ಲಿ ದ್ವೇಷವನ್ನು ಬೆಳೆಸುವದು ಅಪಾಯಕರ. ಕೆಲಸಕ್ಕೆ ( ಬರುವಂತೆ ) ಅಳವಡಿಸಿಕೊಳ್ಳಲಾರದಂಥ ಹೋರಿಯು ಬಿತ್ತನೆಯ ಕೆಲಸಕ್ಕೆ ನಿರುಪಯೋಗಿಯು. (ಅದರಂತೆ) ನಡುಬಾಗಿದರೆ ಬಡವನು ನಿರುಪಯೋಗಿಯಾಗುತ್ತಾನೆ.

೧೮೦. ಹುಣಸೆಯಿಂ ನೊರೆವಾಲು | ಗಣಿಕೆಯಿಂ ಹಿರಿತನವು |
ಮೆಣಸಿನಿಂ ಕದಳಿ ಕೆಡುವಂತೆ, ಬಡವ ತಾ |
ಸೆಣಸಿನಿಂ ಕೆಡುಗು ಸರ್ವಜ್ಞ ||

ಹುಣಸೆಯು ಹುಳಿಯಿಂದ ಹಾಲು, ಸೂಳೆಯಿಂದ (ಮನೆಯ) ಹಿರಿತನವು, ಮೆಣಸಿನಿಂದ ಬಾಳೆಯು ಕೆಡುವಂತೆ ಬಡವನು ( ತನ್ನಲ್ಲಿಯ ) ಸಿಡುಕಿನಿಂದ ಕೆಡುತ್ತಾನೆ.

೧೮೧. ಅಕ್ಕಿಯನು ಬೀಯೆಂಬ | ಬೆಕ್ಕನ್ನು ಪಿಲ್ಲೆಂಬ |
ಚೊಕ್ಕಟದ ತೇಜಿ ಗುರ್‍ರ್ರೆಂಬ ತೆಲುಗನ |
ಸೊಕ್ಕ ನೋಡೆಂದ ಸರ್ವಜ್ಞ ||

ಅಕ್ಕಿಗೆ 'ಬಿ' ಎನ್ನುವ, ಬೆಕ್ಕಿಗೆ 'ಪಿಲ್ಲಿ' ಎಂಬುವ ಹಾಗೂ ಚೊಕ್ಕಟವಾದ ಕುದುರೆಗೆ 'ಗುರ್‍ರ್ರಂ' ಎನ್ನುವಂಥ ಆಂಧ್ರನ (ತೆಲುಗನ) ಸೊಕ್ಕು ಎಷ್ಟಿರಬೇಕು ?

೧೪೨. ತಿಗುಳಿ ಜನ ಗೆಣೆಯಿಂದ | ಬೊಗಳುವಾ ಶುನಿ ಲೇಸು |
ಮುಗುಳಿಯು ಮರದ ನೆರಳಿಂದ ನುಂಗುವ |
ನೆಗಳು ಲೇಸೆಂದ ಸರ್ವಜ್ಞ ||

ತಿಗುಳು ಜನರು(ತಮಿಳರ ) ಗೆಳೆತನಕ್ಕಿಂತ ಬೊಗಳುವ ನಾಯಿಯೇ ಒಳ್ಳೆಯದು. (ಅದರಂತೆ) ಮುಗುಳಿಯು (ಒಂದು ಜಾತಿಯ ಜಾಲಿಯ ಮರ) ಮರದ ನೆರಳಿಗಿಂತ ನುಂಗಿಬಿಡುವಂಥಹ ಮೊಸಳೆ ಉತ್ತಮ.

೧೪೩. ಹರಳು ಕಾಲಿಗೆ ಹೊಲ್ಲ | ಹುರುಳಿ ಕತ್ತೆಗೆ ಹೊಲ್ಲ |
ಇರುಳೊಳು ಪಯಣ ಬರೆಹೊಲ್ಲ, ತೊತ್ತಿಂಗೆ |
ಕುರುಳು ತಾ ಹೊಲ್ಲ ಸರ್ವಜ್ಞ ||

ಕಾಲಿಗೆ ಹರಳು ಅನವಶ್ಯಕ ಕತ್ತೆಗೆ ಹುರುಳಿಯು ಅನವಶ್ಯಕ, ರಾತ್ರಿಯಲ್ಲಿಯ ಪ್ರಯಾಣವು ಅಯೋಗ್ಯವಾದದು. (ಅದರಂತೆ) ಸೇವಕಳಿಗೆ ಮುಂಗುರುಳುಗಳು ಗಂಡಾಂತರಕಾರಕವಾಗಿವೆ.

೧೪೪. ಸಾಲವನು ತರುವಾಗ | ಹಾಲುಬೋನುಂಡಂತೆ |
ಸಾಲಿಗನು ಬಂದು ಕೇಳಿದರೆ, ಕುಂಡೆಗೆ |
ಚೇಳು ಕಡಿದಂತೆ ಸರ್ವಜ್ಞ ||

( ಎರಡನೆಯವರಿಂದ) ಸಾಲವನ್ನು ತೆಗೆದುಕೊಂಡು ಬರುವಾಗ ಹಾಲು-ಅನ್ನವನು ಉಂಡಂತಾಗುತ್ತದೆ. (ಆದರೆ) ಆದನ್ನೇ ಅವನು ಮರಳಿ ಕೇಳಲು ಬಂದಾಗ (ಮಾತ್ರ) ತಿಗಕ್ಕೆ ಚೇಳು ಕಡಿದಂತಾಗುತ್ತದೆ.

೧೪೫. ನೂರು ಹಣ ಕೊಡುವನಕ | ಮೀರಿ ವಿನಯದಲಿಪ್ಪ |
ನೂರರೊಳೆಳ್ಮೂರ ಕೇಳಿದರೆ ಸಾಲಿಗನು |
ತೊರುವನು ಮಣ್ಣು ಸರ್ವಜ್ಞ ||

ಸಾಲವನ್ನು ಕೊಡುತ್ತಿರುವ ವರೆಗೆ (ಅದು ನೂರಿರಲಿ, ಎಷ್ಟೇ ಇರಲಿ) ಅವನೊಂದಿಗೆ ( ಸಾಲತೆಗೆದುಕೊಳ್ಳುವವನು ) ಅತಿಯಾದ ವಿನಯದಿಂದ ನಡೆದುಕೊಳ್ಳುತ್ತಾನೆ. ಆದರೆ ( ಕೊಟ್ಟವನು ತಾನು ಕೊಟ್ಟದ್ದರಲ್ಲಿಯ ಕೇವಲ) ಎರಡು-ಮೂರು ರೂಪಾಯಿಗಳನ್ನು ಮರಳಿ ಕೇಳಿದರೆ ( ಮಾತ್ರ ಅವನ ಮೇಲೆ ) ಮಣ್ಣು ತೂರಲು ಪ್ರಾರಂಭಿಸುವನು.

೧೪೬. ಗಡ್ಡವಿಲ್ಲದ ಮೋರೆ | ದುಡ್ಡು ಇಲ್ಲದ ಚೀಲ |
ಬಡ್ಡಿ ಸಾಲ ತರುವವನ ಬಾಳುವೆಯು |
ಅಡ್ಡಕ್ಕೂ ಬೇಡ ಸರ್ವಜ್ಞ ||

ಗಡ್ಡವಿಲ್ಲದಂಥ ಮೋರೆಯು ( ಮುಖವು ), ಹಣವಿಲ್ಲದಂಥವ ಬರಿಯ ಚೀಲವು ಹಾಗೂ ಬಡ್ಡಿಯ ಸಾಲವನ್ನು ತರುತ್ತಲೇ ಇರುವಂಥವನ ಬಾಳುವೆಯು ಇವು ಮೂರು ಯಾತಕ್ಕೂ ಬೇಡ.

೧೪೭. ಉದ್ದರಿಯ ಕೊಟ್ಟಣ್ಣ | ಹದ್ದಾದ ಹಾವಾದ |
ಎದ್ದೆದ್ದು ಹರಿವ ನಾಯಾದ, ಹುತ್ತದ |
ಗೊದ್ದದಂತಾದ ಸರ್ವಜ್ಞ ||

( ಯಾವುದೊಂದು ) ವಸ್ತುವನ್ನು ಉದ್ದರಿಯಾಗಿ ಕೊಟ್ಟಂಥವನು, ಹದ್ದಿನಂತೆ, ಹಾವಿನಂತೆ ಹಾಗೂ ಎದ್ದೆದ್ದು ಕಚ್ಚಲು ಬರುವ ನಾಯಿಯಂತಾಗುವನಲ್ಲದೆ ಹುತ್ತದೊಳಗಿನ ಇರುವೆಯಂತೆಯೂ ಆಗುತ್ತಾನೆ.

೧೪೮. ಹಾಲು ಬೋನಕೆ ಲೇಸು | ಮಾಲೆ ಕೊರಳಿಗೆ ಲೇಸು |
ಸಾಲವಿಲ್ಲದವನ ಮನೆ ಲೇಸು, ಬಾಲರ |
ಲೀಲೆ ಲೇಸೆಂದ ಸರ್ವಜ್ಞ ||

(ಊಟಕ್ಕೆ) ಹಾಲು ಬಹಳ ಒಳ್ಳೇಯದು; (ಹೂವಿನ) ಮಾಲೆಯು ಕೊರಳಿಗೆ ಶೋಭೆಯನ್ನುಂಟು ಮಾಡುವದು. ಯಾರ ಮನೆಯಲ್ಲಿ ಸಾವೇ ಕಂಡಿಲ್ಲವೋ ಅಂಥ ಮನೆ ಲೇಸು. (ಅದರಂತೆ) ಚಿಕ್ಕ ಬಾಲಕರ ಲೀಲೆಯು ಇನ್ನೂ ಒಳ್ಳೆಯದು. (ಮನಕ್ಕೆ ಅಹ್ಲಾದ ನೀಡುವದು.)

೧೪೯. ಅಕ್ಕಸಾಲೆಯನೂರಿ | ಗೊಕ್ಕಲೆಂದೆನಬೇಡ |
ಬೆಕ್ಕುಬಂದಿಲಿಯ ಹಿಡಿವಂತೆ, ಊರಿಗವ |
ರಕ್ಕಸನು ನೋಡು ಸರ್ವಜ್ಞ ||

ಅಕ್ಕಸಾಲಿಗನನ್ನು ಒಂದೂರಿನ ಒಕ್ಕಲು ( ಮನೆತನಸ್ಥ ) ಎಂದು ಭಾವಿಸಬೇಡ. ಬೆಕ್ಕು (ಸದ್ದಿಲ್ಲದೆ) ಬಂದು ಇಲಿಯನ್ನು ಹಿಡಿದು ತಿನ್ನುವಂತೆ ಅವನು (ಅಕ್ಕಸಾಲಿಗನು) ಊರಿಗೊಬ್ಬ ರಾಕ್ಷಸನಿದ್ದಂತೆ (ಆಗುವನು.)

೧೯೦. ಬೂದಿಯೊಳು ಹುದುಗಿಸುತ | ವೇದಿಸುತ ಮರೆಮಾಡಿ |
ಕಾದಿರ್ದ ಚಿನ್ನದೊಳು ಬೆರೆಸಿ, ಒರೆಹಚ್ಚಿ |
ಊದುತಲೆ ಟೊಣೆವ ಸರ್ವಜ್ಞ ||

( ಬಂಗಾರವನ್ನು ) ಬೂದಿಯೊಳಗೆ ಮುಚ್ಚಿಡುತ್ತ, (ಗಿರಾಕಿ) ನೋಡುತ್ತಿರುವಂತೆಯೇ ಮರೆಮಾಡಿ ಕಾಯ್ದು ಬಂಗಾರದೊಳಗೆ ಕೂಡಿಸಿ ಒರೆಹಚ್ಚಿ ಊದುತ್ತಿದ್ದಂತೆಯೇ ಹಾರಿಸಿಬಿಡುವನು. (ಅಕ್ಕಸಾಲಿಗನು)

೧೯೧. ಅಕ್ಕಸಾಲೆಯ ಮಗುವು | ಚಿಕ್ಕದೆಂದನ ಬೇಡ |
ಚಿಕ್ಕಟವು ಮೈಯ ಕಡಿವಂತೆ, ಚಿಮ್ಮಟವ |
ನಿಕ್ಕುತಲೆ ಕಳುವ ಸರ್ವಜ್ಞ ||

ಅಕ್ಕಸಾಲಿಗನ ಮಗನನ್ನು ಚಿಕ್ಕವನೆಂದು ಭಾವಿಸಬೇಡ. ಅತಿ ಚಿಕ್ಕದಾದ ಚಿಕ್ಕಾಡು ಮೈತುಂಬ ಕಡಿಯುವಂತೆ ಅವನು ( ಚಿಮ್ಮಟಿಯು ಕೈಗೆ ಬರುತ್ತಲೆ ) ತನ್ನ 'ಉದ್ಯಮ'ವನ್ನು ಪ್ರಾರಂಭಿಸುವನು.

೧೯೨. ಅಡ್ಡ ಬಡ್ಡಿಯು ಹೊಲ್ಲ | ಗಿಡ್ಡ ಬಾಗಿಲ ಹೊಲ್ಲ |
ಹೆಡ್ಡರೊಡನಾಟ ಹೊಲ್ಲ, ಬಡಿಗ ತಾ |
ರೊಡ್ಡನಿರೆ ಹೊಲ್ಲ ಸರ್ವಜ್ಞ ||

ಅಡ್ಡವಾದಂಥ ಬಡ್ಡಿಯು ಅಯೋಗ್ಯವಾದುದು. ಗಿಡ್ಡವಾದ (ಎತ್ತರವಿಲ್ಲದ) ಬಾಗಿಲು ಸಹ ಅಯೋಗ್ಯವಾದುದು. ಮೂರ್ಖರ ಸಂಗವು ಒಳ್ಳೆಯದಲ್ಲ. ಆದರಂತೆ ಎಡಗೈಯಿಂದ ಕೆಲಸ ಮಾಡುವಂಥ ಬಡಿಗನೂ ನಿರುಪಯೋಗಿಯು.

೧೯೩. ಹಣಜಿ ಬತ್ತವು ಅಲ್ಲ | ಅಣಬೆ ಸತ್ತಿಗೆಯಲ್ಲ |
ಕಣಕದ ಕಲ್ಲು ಮಣಿಯಲ್ಲ, ಬಣಜಿಗನು |
ಗುಣವಂಥನಲ್ಲ ಸರ್ವಜ್ಞ ||

ಹಣಜಿ (ಒಂದು ತರದ ಹುಲ್ಲು) ಯು ಬತ್ತವಾಗಲಾರದು. ನಾಯಿಕೊಡೆಯು ಕೊಡೆಯಾಗಲಾರದು. ಕಣಕವನ್ನರಿಯುವ ಕಲ್ಲು ಮಣಿಯಾಗಲಾರದು. ಆದರಂತೆ ಬಣಜಿಗನು ಗುಣವಂತನಾಗಲಾರನು.

೧೯೪. ಎಳ್ಳು ಗಾಣಿಗ ಬಲ್ಲ | ಸುಳ್ಳು ಸಿಂಪಿಗ ಬಲ್ಲ |
ಕಳ್ಳರನ್ನು ಬಲ್ಲ ತಳವಾರ, ಬಣಜಿಗನು |
ಎಲ್ಲವನು ಬಲ್ಲ ಸರ್ವಜ್ಞ ||

ಗಾಣಿಗರವನು ಎಳ್ಳನ್ನೂ ಸಿಂಪಿಗರವನು ಸುಳ್ಳು ಹೇಳುವದನ್ನೂ ಹಾಗು ತಳವಾರ ( ವಾಲೀಕಾರ )ನು ಕಳ್ಳನನ್ನೂ ಬಲ್ಲನಾದರೆ ಬಣಜಿಗನು ಮಾತ್ರ ಎಲ್ಲವನ್ನೂ ಬಲ್ಲವನಾಗಿರುತ್ತಾನೆ.

೧೯೫. ಕೊಂಬು ಹೋರಿಗೆ ಲೇಸು | ತುಂಬು ಕೇರಿಗೆ ಲೇಸು |
ಕುಂಬಾರ ಲೇಸು ಊರಿಂಗೆ, ಹರದಂಗೆ |
ನಂಬುಗೆಯೇ ಲೇಸು ಸರ್ವಜ್ಞ ||

ಹೋರಿಗೆ ಕೊಂಬುಗಳು, ಓಣಿಗೆ ಜನವಸತಿಯು, ಊರಿಗೆ ಕುಂಬಾರನು ಶೋಭಾಯಮಾನನಾಗುವಂತೆ ವ್ಯಾಪಾರಸ್ಥನಿಗೆ ನಂಬುಗೆಯೇ ಭೂಷಣವು.

೧೯೬. ಹರದನ ಮಾತನ್ನು | ಹಿರಿದು ನಂಬಲು ಬೇಡ |
ಗರಗಸದೊಡನೆ ಮರ ಹೋರಿ ತನ್ನ ತಾ |
ನಿರಿದುಕೊಂಡಂತೆ ಸರ್ವಜ್ಞ ||

ವ್ಯಾಪಾರಸ್ಥನ ಮಾತಿನಲ್ಲಿ ಹೆಚ್ಚಿನ ನಂಬಿಗೆಯನ್ನಿರಿಸಬೇಡ. (ಒಂದು ವೇಳೆ ಹಾಗೆ ಮಾಡಿದರೆ) ಕರಗಸದೊಂದಿಗೆ ಕಟ್ಟಿಗೆಯ ತುಂಡು ಹೋರಾಡಿ ತನ್ನನ್ನೆ ತಾನು ಇರಿದುಕೊಂಡು ನಾಶವಾದಂತಾಗುತ್ತದೆ.

೧೯೭. ಪಂಚಾಳಛೈವರು | ವಂಚನೆಗೆ ಗುರುವರು |
ಕಿಂಚಿತ್ತು ನಂಬಿ ಕೆಡಬೇಡ, ತಿಗುಣಿಯ |
ಮಂಡದಂತಿಹುದು ಸರ್ವಜ್ಞ ||

ಐದು ವಿಧದ ಪಂಚಾಳರು ವಂಚಕತನದಲ್ಲಿ ಎತ್ತಿದಕೈಯಾಗಿರುತ್ತಾರೆ. ( ಇದಕ್ಕಾಗಿ ಅವರನ್ನು ) ಎಳ್ಳಷ್ಟೂ ನಂಬಿ ಕೆಡಬೇಡ. ಅವರು ತಿರುಗಣಿಯ ಮಡವಿನಂತಿರುತ್ತಾರೆ.

೧೯೮. ಕಳ್ಳನೂ ಒಳ್ಳಿದರೂ | ಎಲ್ಲ ಜಾತಿಯೊಳಿಹರು |
ಕಳ್ಳನೊಂದೆಡೆ ಉಪಕಾರಿ, ಪಾಂಚಾಳ |
ನೆಲ್ಲರಲಿ ಕಳ್ಳ ಸರ್ವಜ್ಞ ||

ಒಳ್ಳೆಯವರು ಹಾಗು ಕಳ್ಳರು ಎಲ್ಲ ಜಾತಿಯಲ್ಲಿಯೂ ಇರುತ್ತಾರೆ. (ಕೆಲ ಸಮಯಗಳಲ್ಲಿ) ಕಳ್ಳನಿಂದ ಉಪಕಾರವಾದರೂ ಆಗಬಹುದು (ಆದರೆ) ಪಂಚಾಳರು (ಬಡಿಗ' ಹಜಾಮ, ಆಗಸ, ನೇಕಾರ, ಮಚೆಗಾರ ಇವರಿಗೆ ಪಾಂಚಾಳರು ಅನ್ನುತ್ತಾರೆ.) ಮಾತ್ರ ಎಲ್ಲರಗಿಂತ ಹೆಚ್ಚಿನ ಕಳ್ಳರು.

೧೯೯. ಹೆಂಡತಿಗೆ ಅಂಜುವ | ಗಂಡನಂ ಏನೆಂಬೆ |
ಹಿಂಡು ಕೋಳಿಗಳ ಮುರಿ ತಿಂಬ ನರಿ, ನಾಯಿ |
ಕಂಡೋಡಿದಂತೆ ಸರ್ವಜ್ಞ ||

ಹೆಂಡತಿಗೆ ಅಂಜುವಂಥ ಗಂಡನಿಗೆ ಏನೆನ್ನಬೇಕು ? ಕೋಳಿಗಳ ಹಿಂಡನ್ನೇ ಮುರಿದು ತಿನ್ನುವ ನರಿಯು ನಾಯಿಯನ್ನು ಕಂಡು ಓಡಿದ ಹಾಗೆಯೇ ಸರಿ.

೨೦೦. ವಾಜಿ ಹಾರುವದಲ್ಲ | ತೇಜಿ ಹೇರುವದಲ್ಲ |
ಗಾಜಿನ ಕಾಣಿಕೆ ಮಣಿಯಲ್ಲ, ಅತ್ತಿ ಫಲ |
ಬೀಜದೊಳಗಲ್ಲ ಸರ್ವಜ್ಞ ||

ಕುದುರೆಯು ಹಾರುವದಕ್ಕಲ್ಲ; ಭಾರವನ್ನು ಹೋರುವದಕ್ಕೂ ಅಲ್ಲ ಕಾಜಿನ ಕುಣಿಕೆಯು ಮಣಿಯೂ ಅಲ್ಲ. (ಅದರಂತೆ) ಅತ್ತೀಯ ಹಣ್ಣು ಬೀಜದೊಳಗೆ ಎಣಿಸಲ್ಪಡುವದಿಲ್ಲ.

೨೦೧. ಗಾಣಿಗನು ಈಶ್ವರನ ಕಾಣನೆಂಬುದು ಸಹಜ |
ಏಣಾಂಕಧರನ್ನು ಧರೆಳಿಯಲವನಿಂದ |
ಗಾಣವಾಡಿಸುವ ಸರ್ವಜ್ಞ ||

ಗಾಣಿಗರವನು ಈಶ್ವರನನ್ನು ಕಂಡಿಲ್ಲವೆಂದರೆ ನಿಜ. (ಆದರೆಒಂದು ವೇಳೆ) ಮಹದೇವನೇ ಅವನ ಬಳಿ ಇಳಿದುದಾದರೆ ( ಗಾಣಿಗನು ) ಶಿವನಿಗೂ ಗಾಣ ತಿರುಗಿಸಲು ಹಚ್ಚದೇ ಬಿಡಲಾರನು.

೨೦೨. ಅಗ್ಗ ಬಡವಗೆ ಲೇಸು | ಬಗ್ಗೆಯುಗಸಗೆ ಲೇಸು |
ತಗ್ಗಿದ ಗದ್ದೆ ಉಳಲೇಸು, ಜೇಡಂಗೆ |
ಮಗ್ಗ ಲೇಸೆಂದ ಸರ್ವಜ್ಞ ||

ಅಗ್ಗವಿದ್ದಂಥ (ವಸ್ತುಗಳು) ಬಡವನಿಗೆ, (ನೀರಿನ) ಬುಗ್ಗೆಯು ಅಗಸ
ನಿಗೆ ತಗ್ಗಿನಲ್ಲಿದ್ದ ಗದ್ದೆಯು ಬಿತ್ತನೆಯ ಕೆಲಸಕ್ಕೆ ಯೋಗ್ಯವಿರುವಂತೆ ನೇಕಾ
ರನಿಗೆ ಮಗ್ಗವೇ ಒಳ್ಳೆಯದು.

೨೦೩. ಬೇಡಗಡವಿಯ ಚಿಂತೆ | ಆಡಿಂಗೆ ಮಳೆ ಚಿಂತೆ |
ನೋಡುವ ಚಿಂತೆ ಕಂಗಳಿಗೆ, ಹೆಳವಗೆ |
ದ್ದಾಡುವ ಚಿಂತೆ ಸರ್ವಜ್ಞ ||

ಬೇಡರವನಿಗೆ ಅಡವಿಯ ಚಿಂತೆ, ಆಡಿಗೆ ಮಳೆಯ ಬಯಕೆ ಕಣ್ಣು
ಗಳಿಗೆ ( ಏನಾದರೂ ) ನೋಡುವ ಚಿಂತೆಯಿರುವಂತೆ ಹೆಳವನಿಗೆ ಎದ್ದು ತಿರು
ಗಾಡುವ ಚಿಂತೆ ಬಿಡದು.

೨೦೪. ಬೇಡನೊಳ್ಳಿದನೆಂದು | ಆಡದಿರು ಸಭೆಯೊಳಗೆ |
ಬೇಡ ಬೇಡಿದನು ಕೊಡದಿರೆ ಬಯ್ಗಿಂಗೆ |
ಗೋಡೆಯನು ಒಡೆವ ಸರ್ವಜ್ಞ ||

ಬೇಡರವನು ಒಳ್ಳೆಯವನೆಂದು ಸಭೆಯಲ್ಲಿ ಹೇಳಬೇಡ. (ಏಕೆಂದರೆ
ಅವನು ಬೇಡಿದ್ದನ್ನು ( ನೀನು ) ಕೊಡದೆ ಹೋದೆಯಾದರೆ ರಾತ್ರಿಯ ಸಮ
ಯದಲ್ಲಿ ಗೋಡೆಗೆ ಕನ್ನವಿಕ್ಕುವನು.

೨೦೫. ಬೇಡನಾ ಕೆಳೆಯಿಂದ ! ಕೇಡು ತಪ್ಪದೆ ಬಹುದು |
ನೋಡಿ ನಂಬಿದರೂ ಕೆಡಗವನು, ಕೇಡನು |
ಮಾಡದೆ ಬಿಡನು ಸರ್ವಜ್ಞ ||

ಬೇಡನ ಗೆಳೆತನದಿಂದ ಕೇಡು ತಪ್ಪಲಾರದು. (ಇದನ್ನರಿತೂ) ಅವ
ನನ್ನು ನಂಬಿದುದೇ ಆದರೆ ಕೊನೆಗೆ ಅವನು ಕೇಡನ್ನುಂಟುಮಾಡದೆ
ಇರಲಾರನು.

೨೦೬. ಗಾಡನಿಲ್ಲದ ಬಿಲ್ಲು | ಕೋಡಿಯಿಲ್ಲದ ಕೆರೆಯು |
ಬೇಡಂಗೆ ಮಾಡಿದುಪಕಾರ ಕಲೆಯಲ್ಲಿ |
ಕೇಡು ಕಾಣಯ್ಯ ಸರ್ವಜ್ಞ ||

ಭದ್ರವಾಗಿರದ ಬಿಲ್ಲು, ಕೋಡಿ ಇಲ್ಲದಂಥ ಕೆರೆಯು ಹಾಗೂ ಬೇಡನಿಗೆ ಮಾಡಿದಂಥ ಉಪಕಾರ ಈ ಮೂರು ಒಂದಿಲ್ಲೊಂದು ದಿನ ಕೇಡನ್ನುಂಟು ಮಾಡದೆ ಇರಲಾರವು.

೨೦೭. ಕತ್ತೆಗೆ ಕೋಡಿಲ್ಲ | ತೊತ್ತಿಂಗೆ ಗುಣವಿಲ್ಲ |
ಹತ್ತಿಯ ಹೊಲಕೆ ಗಿಳಿಯಿಲ್ಲ, ಡೊಂಬನಿಗೆ |
ವೃತ್ತಿಯೇ ಇಲ್ಲ ಸರ್ವಜ್ಞ ||

ಕತ್ತೆಗೆ ಕೋಡು, ತೊತ್ತಿಗೆ (ದಾಸಿಗೆ ಒಳ್ಳೆಯ) ಗುಣ ಇಲ್ಲದಿರುವಂತೆ ಹತ್ತಿಯ ಹೊಲದಲ್ಲಿ ಗಿಳಿಗಳೂ ಇರುವದಿಲ್ಲ. ಅದರಂತೆ ಡೊಂಬರವನಿಗೆ (ನಿಶ್ಚಿತವಾದ) ವೃತ್ತಿಯೇ ಇಲ್ಲ.

೨೦೮. ಬೆಂಕಿಯಲ್ಲಿ ದಯವಿಲ್ಲ | ಮಂಕನಲಿ ಮತಿಯಿಲ್ಲ |
ಶಂಖದ ಧ್ವನಿಗೆ ಪ್ರತಿಯಿಲ್ಲ, ಸ್ವರ್ಗದಲಿ |
ಸುಂಕವೇ ಇಲ್ಲ ಸರ್ವಜ್ಞ ||

ಬೆಂಕಿಗೆ ದಯೆಯೆಂಬುದೇ ಇಲ್ಲ; ಮೂರ್ಖನಲ್ಲಿ ಬುದ್ಧಿ ಇರುವದಿಲ್ಲ. ಶಂಖದ ಧ್ವನಿಗೆ ಪ್ರತಿಯಾದುದು ಇಲ್ಲ. ಅದರಂತೆ ಸ್ವರ್ಗದಲಿ ಸುಂಕವೇ ಇಲ್ಲ.

೨೦೯. ಸೀತೆಯಿಂ ಹೆಣ್ಣಿಲ್ಲ | ಸೂತನಿಂದಾಳಿಲ್ಲ |
ಮಾತಿನಲಿ ಸೋತಗಿದಿರಿಲ್ಲ, ಶೂದ್ರಂಗೆ |
ರೀತಿಯೇ ಇಲ್ಲ ಸರ್ವಜ್ಞ ||

ಸೀತೆಯಂಥ ಸ್ತ್ರೀಯರಿಲ್ಲ. ಸೂತನಿಗಿಂತ ಕೀಳಾದವರು ಇಲ್ಲ. ಮಾತು ಬಂದಾಗ ಸೋತು ಹೋದವನ ಸಮಾನರಿಲ್ಲ. ( ಅದರಂತೆ ) ಹೀನನಾದವನಿಗೆ ರೀತಿ ನಡಾವಳಿಗಳೇ ಇರುವದಿಲ್ಲ.

೨೧೦. ತೊತ್ತಿನಲಿ ಗುಣವಿಲ್ಲ | ಕತ್ತೆಗುಂ ಕೋಡಿಲ್ಲ |
ಬತ್ತಲಿದ್ದವಗೆ ಭಯವಿಲ್ಲ, ಕೊಂಡೆಯರೊ |
ಳುತ್ತಮರು ಇಲ್ಲ ಸರ್ವಜ್ಞ ||

ದಾಸೆಯಲ್ಲಿ ( ಒಳ್ಳೆಯ ) ಗುಣವಿರುವದಿಲ್ಲ, ( ಇದ್ದರೂ ಅಂಥವರು ಬಹು ಕಡಿಮೆ ). ಕತ್ತೆಗೆ ಕೋಡುಗಳಿರುವದಿಲ್ಲ. ಬತ್ತಲೆಯಾಗಿದ್ದವನಿಗೆ ( ಯಾವುದರ )ಭಯವೂ ಇರುವದಿಲ್ಲ. ಅದರಂತೆ ಚಾಡಿಖೋರರಲ್ಲಿ ಉತ್ತಮರೆನ್ನುವವರು ಯಾರು ಇರುವದೇಇಲ್ಲ

೨೧೧. ಹನುಮನಿಂ ಲಂಕೆ ಫ | ಲ್ಗುಣನಿಂದ ಖಾಂಡವವನ |
ತ್ರಿಣಯನಿಂ ತ್ರಿಪುರ ಕೆಟ್ಟಂತೆ, ಜಗವು ಕು |
ಟಣಿಯಿಂದ ಕೆಡಗು ಸರ್ವಜ್ಞ||

ಹನುಮಂತನಿಂದ ಲಂಕಾ ಪಟ್ಟಣವು, ಅರ್ಜುನನಿಂದ ಖಾಂಡವ ವನವು ಹಾಗು ಮಹಾದೇವನಿಂದ ತ್ರಿಪುರವು ನಾಶವಾದಂತೆ ಕುಂಟಲಗಿತ್ತಿಯರಿಂದ ಜಗತ್ತೇ ನಾಶವಾಗುವದು.

೨೧೨- ಜ್ಞಾನಿಯು ಜ್ಞಾನಿಯೆಂದು | ಹೀನ ಜರಿಡದೇನು |
ಶ್ವಾನ ತಾ ಬೊಗಳುತಿರಲಾನೆಯುದನೊಂದು |
ಗಾನವೆಂದಂತೆ ಸರ್ವಜ್ಞ ||

ಜ್ಞಾನಿಯನ್ನು ಅಜ್ಞಾನಿಯೆಂದು, ಅಯೋಗ್ಯನು ನಿಂದಿಸಿದರೇನು ಫಲ? ನಾಯಿಯು ಬೊಗಳುತ್ತಿರುವಾಗ ಆನೆಯು ಸುಮ್ಮನೆ ( ಅದೊಂದು ಗಾನವೆಂದು ಬಗೆದು ) ಹೊರಟಂತೆಯೇ ಸರಿ.

೨೧೩. ಸಪ್ಪನ್ನ ಉಣ ಹೊಲ್ಲ | ಮುಪ್ಪು ಬಡವಗೆ ಹೊಲ್ಲ |
ತಪ್ಪಿನಲಿ ಸಿಲುಕಿ ಇರೆ ಹೊಲ್ಲ, ಜಾರೆಯನು |
ಅಪ್ಪಿಪದೆ ಹೊಲ್ಲ ವರ್ಸಜ್ಞ ||

ಉಪ್ಪಿಲ್ಲದ ಊಟವು ಬೇಡ, ಬಡವನಿಗೆ ವೃದ್ಧಾಪ್ಯವು ಕಷ್ಟ. ( ಯಾವದೊಂದು ) ಸಂಕಟದಲ್ಲಿ ಸಿಲುಕಿ ತೊಳಲಾಡುವದು ಬೇಡ. (ಅದರಂತೆ) ಸೂಳೆಯ ಸಂಗ ಎಲ್ಲಕ್ಕೂ ಕೀಳವಾದದ್ದು.

೨೧೪. ಬಗೆಬಗೆಯ ಭೋಗವಿರೆ | ನಗುತಿಹರು ಸತಿ ಸುತರು |
ನಗೆ ಹೋಗಿ ಹೊಗೆಯು ಬರಲಿವರು, ಅಡವಿಯಲಿ |
ಒಗೆದು ಬರುತಿಹರು ಸರ್ವಜ್ಞ ||

ಸುಖಪಡಲೋಸುಗ ನಾನಾ ರೀತಿಯ ಸೌಕರ್ಯವಿದ್ದುದಾದರೆ ಸತಿ ಸುತರು ಸದಾ ಆನಂದದಲ್ಲಿರುವರು. ನಗೆಯು ಮಾಯವಾಯಿತೆಂದರೆ (ಸೌಕರ್ಯದಲ್ಲಿ ಕೊರತೆಯಾದರೆ) ಪುರುಷನನ್ನು ಅಡವಿಗೆ ಓಡಿಸಿಬಿಡುವರು.

೨೧೫. ಅತ್ತೆ ಮಾಡಿದ ತಪ್ಪು | ಗೊತ್ತಿಲ್ಲದಡಗಿಹುದು |
ತೊತ್ತದನು ಮಾಡಿದರಜಾಕ್ಷಣದಿ ಸುತ್ತರಿಗು |
ಗೊತ್ತಿಹುದು ನೋಡ ಸರ್ವಜ್ಞ ||

ಅತ್ತೆಯು ಮಾಡಿದಂಥ ಯಾವುದೇ ರೀತಿಯ ತಪ್ಪು ತಂತಾನೇ ಅಡಗಿ ಹೋಗುವದು. ಅದೇ ಒಂದು ಹೆಣ್ಣಾಳು (ಸೊಸೆ) ಮಾಡಿದರೆ ಡಂಗುರ ಸಾರಿದಂತೆ ಎಲ್ಲರಿಗೂ ಗೊತ್ತಾಗಿಬಿಡುವದು.

೨೧೬. ಅರಿಯೆನೆಂಬುವದೊಂದು | ಅರಸು ಕೆಲಸವು ನೋಡ |
ಅರಿದಿಹೆನೆಂದು ಮೆರೆಯುವಾ ಬಡವನು |
ದೊರೆಗಳಾಳೆಂದ ಸರ್ವಜ್ಞ ||

(ತನಗೆ) ಯಾವುದೂ ಗೊತ್ತಿಲ್ಲವೆಂದು ಹೇಳಿ (ತನ್ನಷ್ಟಕ್ಕೆ) ಸುಮ್ಮನಿದ್ದು ಬಿಡುವದು ಅತಿ ಉತ್ತಮ ಕೆಲಸವು. (ಆದರೆ) ಗೊತ್ತಿದೆ ಎಂದು ಮುಂದೆ ಬಂದಂಥ ಬಡವನು ಅಧಿಕಾರಿಗಳ ಆಳಾಗಿ ಬಿಡುತ್ತಾನೆ.

೨೧೭. ವ್ಯಸನದಲಿ ದೇಹವು | ಮಸಣವನು ಕಾಣುವದು |
ವ್ಯಸನವನ್ನು ಬಿಟ್ಟು ಹಸನಾಗಿ ದುಡಿದರೆ |
ಅಶನ ವಸನಗಳು ಸರ್ವಜ್ಞ ||

ವ್ಯಸನದಿಂದ ದೇಹವು ಕ್ಷೀಣವಾಗಿ ಹೋಗುವದು. (ಅಂದರೆ) ಶೀಘ್ರದಲ್ಲಿ ಸ್ಮಶಾನವನ್ನು ಸೇರುವರು. (ಆದರೆ) ಆ ವ್ಯಸನವನ್ನು ತ್ಯಜಿಸಿ ದುಡಿದುಕೊಂಡು ಹಾಯಾಗಿ ಇದ್ದರೆ ಅನ್ನ ಬಟ್ಟೆಗಳ ಕೊರತೆಯಿಲ್ಲದೆ ನಿಶ್ಚಿಂತನಾಗಿರುವನು.

೨೧೮. ಆಡದಲೆ ಮಾಡುವನು । ರೂಢಿಯೊಳಗುತ್ತಮನು ।
ಆಡಿ ಮಾಡುವವನು ಮಧ್ಯಮನು, ಅಧಮ ತಾ ।
ನಾಡಿ ಮಾಡದವ ಸರ್ವಜ್ಞ ॥

(ಯಾವುದೊಂದು ಕೆಲಸವನ್ನು) ಆಡದೇ ಮಾಡುವಂಥವನು ಉತ್ತಮನು. (ಮಾಡುತ್ತೇನೆಂದು) ಹೇಳಿ ಮಾಡುವವನು ಮಧ್ಯಮನು. ಆದರೆ ಆಡಿಯೂ ಮಾಡದಂಥವನು ಅಧಮನು.

೨೧೯. ನಾರಿಯಿಲ್ಲದ ಮನೆಯು । ವಾರಿಯಿಲ್ಲದ ದುರ್ಗ ।
ಮೋರೆ ತಪ್ಪಿದನ ಮನ್ನಣೆಯು ಅವು ಮೂರು ।
ಮಾರಿ ಕಾಣಯ್ಯ ಸರ್ವಜ್ಞ ॥

ಹೆಂಗಸರಿಲ್ಲದಂಥ ಮನೆಯು, ಕಾವಲಿಲ್ಲದಂಥ ಕೋಟೆ, ದಾರಿತಪ್ಪಿ ನಡೆಯುವಂಥವನಿಗೆ ಮಾಡುವ ಮರ್ಯಾದೆ ಇವು ಮೂರು ಮಾದರಿಯಂತೆಯೇ ಸರಿ.

೨೨೦. ನಟ್ಟಡವಿಯಾ ಮಳೆಯು । ದುಷ್ಟರ ಗೆಳೆತನವು ।
ಕಷ್ಟವಾದವಳ ತಲೆ ಬೇನೆ, ಇವು ಮೂರು ।
ಕೆಟ್ಟರೆ ಲೇಸು ಸರ್ವಜ್ಞ ॥

ಅರಣ್ಯ ಮಧ್ಯದಲ್ಲಿ ಸುರಿದಂಥ ಮಳೆಯು, ದುಷ್ಟರೊಂದಿಗೆ ಗೆಳೆತನವು ಹಾಗೂ ಕಷ್ಟದಲ್ಲಿರುವವಳ ತಲೆಶೂಲೆ ಇವು ಮೂರು ನಾಶವಾದರೆ ಒಳ್ಳೆಯದು.

೨೨೧. ಪುಷ್ಪವಿಲ್ಲದ ಪೂಜೆ । ಅಶ್ವವಿಲ್ಲದ ಅರಸು ।
ಒಪ್ಪಲೊಲ್ಲದಳ ನಗೆ ನುಡಿಯು, ಇವು ಮೂರು ।
ಸಪ್ಪೆ ಕಾಣಯ್ಯ ಸರ್ವಜ್ಞ ॥

ಹೂವುಗಳಿಲ್ಲದೆ ಮಾಡುವಂಥ ಪೂಜೆಯು, ಕುದುರೆಗಳಿಲ್ಲದಂಥ ಅರಸು ಹಾಗು ಮನ ಒಪ್ಪದಂಥವಳ ನಗೆಮಾತುಗಳು ಇವು ಮೂರು ನೀರಸವನ್ನುಂಟು ಮಾಡುತ್ತವೆ.

೨೨೨. ಹೋಳಿಗಿಲ್ಲದ ಹಬ್ಬ । ಮೇಳವಿಲ್ಲದ ಕೂಟ ।
ಆಳಿಲ್ಲದವನ ದೊರೆತನವು ಇವು ಮೂರು ।
ಕೋಳು ಹೋದಂತೆ ಸರ್ವಜ್ಞ ॥

ಹೋಳಿಗೆಯ ಅಡಿಗೆ ಇಲ್ಲದಂಥ ಹಬ್ಬ, ಸಹಕಾರವಿಲ್ಲದಂಥ ಸಂಘ ಹಾಗು ಆಳುಗಳಿಲ್ಲದವನ ಒಡೆತನ ಇವು ಮೂರು ಬಂಧನವನ್ನು ಆಮಂತ್ರಿಸಿದಂತೆ.

೨೨೩. ಒತ್ತಿ ಮಾಡಿದ ಹಣ್ಣು । ಹೊತ್ತು ಮೀರಿದ ಲಾಭ ।
ಸತ್ತವರಿಗಿತ್ತ ಕಣ್ಬೇನೆ ಇವು ಮೂರು ।
ವ್ಯರ್ಥ ಕಾಣಯ್ಯ ಸರ್ವಜ್ಞ ॥

( ಯಾವುದೊಂದು ಕೆಲಸಕ್ಕಾಗಿ ಒಬ್ಬನನ್ನು ) ಜುಲುಮೆಯಿಂದ ಒಪ್ಪಿಸುವದು ( ಅಂದರೆ ಒತ್ತಿ ಹಣ್ಣು ಮಾಡುವದು ) ತಲೆಯ ಮೇಲೆ ಹೊತ್ತು ಮಾರಾಟ ಮಾಡುವದರಿಂದಾಗುವ ಲಾಭ ಹಾಗೂ ಸತ್ತವರಿಗಾಗಿ ಅತ್ತುದರಿಂದುಂಟಾದ ಕಣ್ಣಿನ ಬೇನೆ ಇವು ಮೂರು ವ್ಯರ್ಥ.

೨೨೪. ಒಕ್ಕಲಿಲ್ಲದವನ ಊರು । ಮಕ್ಕಳಿಲ್ಲದ ಮನೆಯು ।
ಲೆಕ್ಕವಿಲ್ಲದವನ ಬೇಹಾರ ಇವು ಮೂರು ।
ದುಃಖ ಕಾಣಯ್ಯ ಸರ್ವಜ್ಞ ॥

ಋಣಾನುಬಂಧನವಿಲ್ಲದಂಥ ಊರು, ಮಕ್ಕಳು ಮರಿಗಳಿಲ್ಲದಂಥ ಮನೆಯು ಹಾಗೂ ಸರಿಯಾಗಿ ಲೆಕ್ಕವನ್ನಿಡದಂಥವನ ವ್ಯಾಪಾರ ಇವು ಮೂರು ಕೊನೆಗೆ ದುಃಖವನ್ನುಂಟುಮಾಡುವವು.

೨೨೫. ಕತ್ತೆಯೇರಲು ಹೊಲ್ಲ । ತೊತ್ತು ಸಂಗವು ಹೊಲ್ಲ ।
ಬತ್ತಲಲಿ ಜಲವ ಹೊಗಹೊಲ್ಲ, ಇವುಗಳ ।
ಅತ್ಯಂತ ಹೊಲ್ಲ ಸರ್ವಜ್ಞ ॥

ಕತ್ತೆಯನ್ನು ಹತ್ತುವದು, ಒಕ್ಕಲಗಿತ್ತಿ ( ದಾಸಿ ) ನೊಂದಿಗೆ ಸಂಪರ್ಕ ಬೆಳೆಯಿಸುವದು ಹಾಗೂ ಬತ್ತಲೆಯಾಗಿ ಜಲಾಶಯದೊಳಗೆ ಪ್ರವೇಶಿಸುವದು ಅತ್ಯಂತ ಹೀನವಾದ ಕಾರ್ಯಗಳಾಗಿವೆ.

೨೨೬. ಉಪ್ಪಿಲ್ಲದೂಟ ಕ | ಣ್ಣೊಪ್ಪವಿಲ್ಲದ ನಾರಿ |
ತೊಪ್ಪಲ ನೀರು ಕೊನೆಗಬ್ಬು ಇವು ನಾಲ್ಕು
ಚಪ್ಪೆ ಕಾಣಯ್ಯ ಸರ್ವಜ್ಞ ||

ಉಪ್ಪು ಇಲ್ಲದಂಥ ಊಟವು, ಕಣ್ಣಿಗೆ ಚಂದಕಾಣದಂಥ ಹೆಂಗಸು, ತೊಪ್ಪದಲ್ಲಿಯ ನೀರು ಹಾಗು ತುದಿಯಲ್ಲಿಯ ಕಬ್ಬು ಇವು ನಾಲ್ಕು ತೀರಾ ಸಪ್ಪೆಯಾದಂಥವುಗಳು.

೨೨೭. ಮಾತಿನ ಮಾಲೆಯೂ | ತೂತಾದ ಮಡಿಕೆಯೂ |
ಹಾತೆಯು, ಹುಲ್ಲಸರವೆಯು, ಇವು ನಾಲ್ಕು |
ಏತಕ್ಕೂ ಬೇಡ ಸರ್ವಜ್ಞ ||

ಮಾತಿನ ಮಾಲೆಯು. ತೂತು ಬಿದ್ದಂಥ ಮಡಕೆಯು, ಜೊಂಡಿಗದ ಹುಳವು ಹಾಗು ಹುಲ್ಲಿನಿಂದ ತಯಾರಿಸಿದಂಥ ಹಗ್ಗ ಇವು ನಾಲ್ಕು ಏತಕ್ಕೂ ಬರುವದಿಲ್ಲ.

೨೨೮. ಹೊಲೆಯುಗಿತ್ತಾ ಸಾಲ | ಒಲೆಯ ಮೇಲಿನ ಹಾಲು |
ಲಲನೆಯುರ ಒಲುಮೆ | ಹಲುಗಿಚ್ಚು ಇವು ನಾಲ್ಕು |
ನಿಲಲಿಲ್ಲವಯ್ಯ ಸರ್ವಜ್ಞ ||

ಹೊಲೆಯನಿಗೆ ಕೊಟ್ಟಂಥ ಸಾಲವು, ಒಲೆಯಮೇಲಿರಿಸಿದಂಥ ಹಾಲು, ಲಲನೆಯರ ಪ್ರೀತಿ ಹಾಗು ಹುಲ್ಲಿನ ಬೆಂಕಿ ಇವು ನಾಲ್ಕು ಶಾಶ್ವತವಾಗಿ ನಿಲ್ಲಲಾರವು.

೨೨೯, ಕಕ್ಕೆ ಬಿಕ್ಕೆಯ ಕಾಯಿ | ಮಕ್ಕಳಾಗದ ಪ್ರೌಢೆ |
ಒಕ್ಕಲಿಗನೋದು ಕುರಿಬೆಣ್ಣೆ, ಇವು ಅಯ್ದು |
ಲೆಕ್ಕದೊಳಗಲ್ಲ ಸರ್ವಜ್ಞ ||

ಕಕ್ಕೆ ಮತ್ತು ಬಿಕ್ಕೆಯ ಕಾಯಿಗಳು, ಮಕ್ಕಳಾಗದಂಥ ( ಬಂಜೆ ) ಪ್ರೌಢ ಸ್ತ್ರೀಯರ, ಒಕ್ಕಲಿಗನ ಓದು ಕುರಿಯ ಬೆಣ್ಣೆ ಇವು ಐದೂ ಲೆಕ್ಕ ದೊಳಗಿರಲಾರದಂಥ ವಸ್ತುಗಳಾಗಿವೆ.

೨೩೦. ಸುಂಕಿಗನು ಹುರಿಹಲ್ಲು | ಬಿಂಕದ ಬೆಲೆವೆಣ್ಣು |
ಕಂಕಿಯು ಸುಂಕ ನಸುಗುನ್ನಿ ನಿವು ಆರು |
ಸೋಂಕಿದರೆ ಬಿಡವು ಸರ್ವಜ್ಞ ||

ಸುಂಕದವನು, ಚೂಪಾದ ಹಲ್ಲುಗಳುಳ್ಳವನು, ಬಿಂಕ ಮಾಡುವಂಥ ಬಾಜಾರಿ ಹೆಣ್ಣು, ಕಾಳುಗಳನ್ನು ಉದುರಿಸಿಕೊಂಡಂಥ ಒಣ ತೆನೆ, ನಸುಗುನ್ನಿ ಇವು ಆರೂ ವಸ್ತುಗಳು ಒಮ್ಮೆ ಸೋಂಕಿದರೆ ಬಿಡುವದೇ ಇಲ್ಲ.

೨೩೧. ಜಾಣಂಗೆ ಮುಸಿಯಿಲ್ಲ | ಕೋಣಂಗೆ ಮತಿಯಿಲ್ಲ |
ಕಾಣದಂಥಕಗೆ ಹಗಲಿಲ್ಲ ಸಿಂಹಕೆ |
ಕೆಣವೇ ಇಲ್ಲ ಸರ್ವಜ್ಞ ||

ಬುದ್ಧಿವಂತನಿಗೆ ಕೋಪವಿಲ್ಲ, ಕೋಣನಿಗೆ ಬುದ್ಧಿಯಿಲ್ಲ, ಕಣ್ಣು ಕಾಣದಂಥ ಕುರುಡನಿಗೆ ಹಗಲೆಂಬುದಿಲ್ಲ. ಹಾಗು ಸಿಂಹಕ್ಕೆ ಮತ್ಸರವಾಗಲಿ, ಮನೋನಿಗ್ರಹವಾಗಲಿ ಇರುವದಿಲ್ಲ.

೨೩೨. ಹಾಸು ಇಲ್ಲದ ನಿದ್ರೆ | ಪೂಸು ಇಲ್ಲದ ಮೀಹ |
ಭಾಷೆಯರಿಯದಳ ಗೆಳೆತನವು ಮೋಟ ಕೈ |
ಬೀಸಿ ಕರೆದಂತೆ ಸರ್ವಜ್ಞ ||

ಹಾಸುಗೆಯಿಲ್ಲದೆ ಮಾಡಿದ ನಿದ್ರೆಯು, ಎಣ್ಣೆ ಪೂಸಿಕೊಳ್ಳದೆ ಮಾಡಿದಂಥ ಸ್ನಾನವು ಹಾಗು ( ತನ್ನ ) ಭಾಷೆಯನ್ನು ಅರಿಯದಂಥವಳೊಡನೆ ಮಾಡಿದ ಗೆಳೆತನ ಇವು ಮೂರು ಮೊಂಡ ಕೈಯನ್ನು ಬೀಸಿ ಕರೆದಂತೆ.

೨೩೩. ಮುದಿಯತ್ತಿನಾರೆಂಬ | ಮುದಿಸೂಳೆಯೊಡನಾಟ |
ಬೆದರುವ ಪಯಣ ತಲೆಹೊರೆಯು ತನ್ನ ತಾ |
ನೊದೆದುಕೊಂಡಂತೆ ಸರ್ವಜ್ಞ ||

ಮುದಿ ಎತ್ತನ್ನು ಇರಿಸಿಕೊಂಡು ಮಾಡಿದಂಥ ಒಕ್ಕಲತನವು, ಮುದಿ ಸೂಳೆಯೊಂದಿಗೆ ಸರಸಸಲ್ಲಾಪಗಳು, ಹೆದರಿಕೆಯುಳ್ಳ ಪ್ರವಾಸ, ತಲೆಯ ಮೇಲಿನ ಹೊರೆ, ಇವೆಲ್ಲ ತನ್ನನ್ನು ತಾನೇ ಒದೆದುಕೊಂಡಂತೆ.

೨೩೪. ಆನೆ ಗಂದಳವೇಕೆ | ಸೋನಂಗೆ ಸೊಬಗೇಕೆ |
ಗಾಣವಾಡುವಗೆ ಮಡಿಯೇಕೆ ಮರುಳಂಗೆ |
ಆನಂದವೇಕೆ ಸರ್ವಜ್ಞ ||

ಆನೆಗೆ ಅಂದಳವು, ನಾಯಿಗೆ ಸೊಬಗು ( ಸಿಂಗಾರವು, ) ಗಾಣವನ್ನು ತಿರುಗಿಸುವಂಥವನಿಗೆ ಮಡಿಯು ಹಾಗು ಮರುಳನಿಗೆ (ಬುದ್ಧಿಯಿಲ್ಲದವನಿಗೆ) ಆನಂದವೇಕೆ ?

೨೩೫. ಅಪ್ಪ ಹಾಕಿದ ಗಿಡವು | ಒಪ್ಪುತ್ತಲಿರುತಿರಲು |
ತಪ್ಪಿಲ್ಲವೆಂದು ಅದನೇರಿ ಮಗನುರ್ಲ್ಲಿ |
ಗೊಪ್ಪಿಗೊಳ್ಳುವನೆ ಸರ್ವಜ್ಞ ||

ತಂದೆಯು ನೆಟ್ಟಂಥ ಗಿಡವು ಚಂದಾಗಿ ಬೆಳೆದು ನಿಂತಿರಲು, ಮಗನು ಆದನ್ನೇರಿ ಉರುಲು ಹಾಕಿ ( ತಂದೆ ನೆಟ್ಟ ಗಿಡಕ್ಕೆ ಉರುಲು ಹಾಕಿಕೊಂಡರೆ ತಪ್ಪಿಲ್ಲವೆಂದು ತಿಳಿದುಕೊಂಡು ) ಕೊಳ್ಳುವನೇ ?

೨೩೬. ಬಂಧನದಲ್ಲಿರುವವನು | ಹಂದಿಯಂತಿರುತಿಹನು |
ಬಂಧುವಿಲ್ಲದವನು ಬಡವನು, ದೇಶಿಗನು |
ಎಂದಳಿದರೇನು ಸರ್ವಜ್ಞ ||

ಬಂಧನದಲ್ಲಿ ಇರುವಂಥವನು ಹಂದಿಯಂತೆಯೇ ಇರುತ್ತಾನೆ. ಸೋದರಿಲ್ಲದಂಥವನು ನಿಜಕ್ಕೂ ಬಡವನು. ಪರದೇಶಿಯಾದಂಥವನು ಯಾವಾಗ ಸತ್ತರೇನು ?

೨೩೭. ಕರೆಯದಲೆ ಬರುವವನ | ಬರೆಯದಲೆ ಓದುವವನ |
ಬರಿಗಾಲಿನಿಂದ ನಡೆವವನ ಕರೆತಂದು |
ಕೆರದಿ ಹೊಡೆಯೆಂದ ಸರ್ವಜ್ಞ

( ಎಲ್ಲಿಗಾದರೂ ) ಕರೆಯದಲೆ ಬರುವಂಥವನನ್ನು ( ಏನನ್ನೂ ) ಬರೆಯದೆ (ಕೇವಲ) ಓದುವಂಥವನನ್ನೂ ಹಾಗು ಬರಿಗಾಲಿನಿಂದ ನಡೆಯುವಂಥ ವನನ್ನೂ ಕರೆತಂದು ಕೆರದಿಂದ ಹೊಡೆಯಬೇಕು.

೨೩೮. ವಿದ್ಯೆ ಕಲಿಸಿದ ತಂದೆ । ಬುದ್ಧಿ ಹೇಳದ ಗುರುವು ।
ಬಿದ್ದಿರಲು ಬಂದು ನೋಡದ ತಾಯಿಯು ।
ಶುದ್ಧ ವೈರಿಗಳು ಸರ್ವಜ್ಞ ॥

ವಿದ್ಯೆಯನ್ನು ಕಲಿಸದಂಥ ತಂದೆಯು, ಬುದ್ಧಿಯ ಮಾತನ್ನು ಹೇಳಿ ಕೊಡಲಾರದಂಥ ಗುರುವು, ( ಅಸ್ವಸ್ಥನಾಗಿ ) ಬಿದ್ದುಕೊಂಡಿರುವಾಗ ಬಂದು ನೋಡದಂಥ ತಾಯಿ ಇವರು ಮೂವರೂ ವೈರಿಗಳೆಂದು ತಿಳಿಯತಕ್ಕದ್ದು.

೩೩೯. ಅಳಿಯೂರ ತಳವಾರ । ಕಳೆಯುಳ್ಳ ಸೂಳೆಯೂ ।
ಹೊಳಲ ಸುಂಕಿಗನು, ಹಳೆನಾಯಿ, ಯಾಚಕನು ।
ತೊಲಗುವವರಲ್ಲ ಸರ್ವಜ್ಞ ॥

ಅಳಿಯೂರಿನ ತಳವಾರನು, (ಮುಖದ ಮೇಲೆ) ಕಳೆಯುಳ್ಳ (ಕಾಂತಿ ಯುಳ್ಳ) ಸೂಳೆಯು, ಸುಂಕದವನು, ಹಳೆಯ ನಾಯಿ (ಪರಿಚಯವುಳ್ಳದ್ದು) ಭಿಕ್ಷುಕನು ಇವು ಒಮ್ಮೆ ಬೆಂಬತ್ತಿದರೆ ಬಿಡುವದಿಲ್ಲ.

೨೪೦. ಕರಿಗೆ ಕೇಸರಿ ವೈರಿ । ದುರಿತನಕ್ಕೆ ಹರ ವೈರಿ ।
ಉರವಣಿಸಿ ಬರುವ ಸಂಸಾರ ದುಃಖಕ್ಕೆ ।
ಪರಿಣಾಮ ವೈರಿ ಸರ್ವಜ್ಞ ॥

ಆನೆಗೆ ಸಿಂಹವು ಶತ್ರು, ಪಾಪಕ್ಕೆ (ಪಾಪಕಾರ್ಯಕ್ಕೆ) ಶಿವನು ವೈರಿ, ಉದ್ವೇಗದಿಂದ ಬರುವಂಥ ಸಂಸಾರದೊಳಗಿನ ತಾಪತ್ರಯಗಳಿಗೆ ( ಅದರ ) ಪರಿಣಾಮವೇ ವೈರಿಯು.

೨೪೧. ಆಳು, ಸೂಳೆಯು, ನಾಯಿ । ಕೋಳಿ, ಜೋಯಿಸ, ವೈದ್ಯ ।
ಗೂಳಿಯು, ಟಗರು ಪ್ರತಿರೂಪ ಕಂಡರೆ ।
ಕಾಳಗವೆಂದ ಸರ್ವಜ್ಞ ॥

ಆಳು ( ಸೇವಕ ) ಸೂಳೆಯು, ನಾಯಿ, ಕೋಳಿಗಳು, ಜೋಯಿಸರು, ವೈದ್ಯರು, ಗೂಳಿಯು, ಹಾಗು ಟಗರು ಇವು ತಮ್ಮ ಎದುರಾಳಿಗಳನ್ನು ಕಂಡರೆ ಕಾಳಗ (ಜಗಳ)ವು ಕಟ್ಟಿಟ್ಟದ್ದು.

೨೪೨. ಮುತ್ತರಗು, ಇಂಗು, ಮಧು, । ಕಸ್ತುರಿಯು ಇವು ಜನ್ಮ
ವೆತ್ತಿದ ತಾವು ಅತಿ ಕಷ್ಟ, ಜಗದೊಳಿದು ।
ಉತ್ತಮರ ನೆಲೆಯು ಸರ್ವಜ್ಞ ॥

ಮುತ್ತು, ಅರಗು, ಇಂಗು, ಜೇನುತುಪ್ಪ ಹಾಗು ಕಸ್ತೂರಿ ಇವುಗಳ ಜನ್ಮಸ್ಥಾನವು ಅತಿ ಕಷ್ಟದಾಯಕವಾದುದು. ಆದರೂ ಅವು ಉತ್ತಮರ ಸ್ಥಾನದಲ್ಲಿರುವವು.

೨೪೩. ಲಿಂಗದಿಂ ಘನವಿಲ್ಲ । ಗಂಗೆಗಿಂ ಶುಚಿಯಿಲ್ಲ ।
ಕಂಗಳಿಂದಧಿಕ ಹಿತರಿಲ್ಲ, ಭಕ್ತ ತಾ ।
ಜಂಗಮನಿಂದಿಲ್ಲ ಸರ್ವಜ್ಞ ॥

ಲಿಂಗುವಿಗಿಂತ ಹೆಚ್ಚಿನದು; ಜಲಕ್ಕಿಂತ (ಗಂಗೆಗಿಂತ) ಮಡಿಯುಳ್ಳದ್ದು ಕಣ್ಣಿಗಿಂತ ಹೆಚ್ಚಿನ ಬಂಧುಗಳೂ ಹಾಗು ಜಂಗಮನಿಗಿಂತ ಹೆಚ್ಚಿನ ಭಕ್ತರು ಯಾರೂ ಇಲ್ಲ.

೨೪೪. ಸತ್ಯಕ್ಕೆ ಸರಿಯಿಲ್ಲ । ಮಿಥ್ಯಕ್ಕೆ ನೆಲೆಯಿಲ್ಲ ।
ಹೆತ್ತಮ್ಮನಿಂದ ಹಿತರಿಲ್ಲ, ನರರೊಳಗೆ ।
ನಿತ್ಯರೆ ಇಲ್ಲ ಸರ್ವಜ್ಞ ॥

ಸತ್ಯಕ್ಕೆ ಸರಿಸಮಾನವಾದುದಿಲ್ಲ, ಅದರಂತೆ ಸುಳ್ಳಿಗೆ ಸ್ಥಾನವಿಲ್ಲ, ಹಡೆದ ತಾಯಿಗಿಂತ ಹೆಚ್ಚಿನ ಹಿತಚಿಂತಕರಿಲ್ಲ, ಹಾಗು ಮಾನವರೊಳಗೆ ಚಿರ ಜೀವಿ ಇಲ್ಲ.

೨೪೫. ರಾತ್ರಿಯೊಳು ಶಿವರಾತ್ರಿ । ಜಾತ್ರೆಯೊಳು ಶ್ರೀಶೈಲ ।
ಕ್ಷೇತ್ರದೊಳಗಧಿಕ ಶ್ರೀ ಕಾಶಿ, ಶಿವತತ್ವ ।
ಸ್ತೋತ್ರದೊಳಧಿಕ ಸರ್ವಜ್ಞ ॥

ರಾತ್ರಿಗಳಲ್ಲಿ ಶ್ರೇಷ್ಠವಾದದ್ದು ಶಿವರಾತ್ರಿಯು, ಜಾತ್ರೆಗಳಲ್ಲಿ ಶ್ರೀಶೈಲ ಜಾತ್ರೆಯು ಶ್ರೇಷ್ಠ. ಕ್ಷೇತ್ರಗಳಲ್ಲಿ ಕಾಶಿಯು ಅತ್ಯಂತ ಶ್ರೇಷ್ಠವಾದದು. ಅದರಂತೆ ಸ್ತೋತ್ರಗಳಲ್ಲಿ ಶಿವತತ್ವವು ಅತಿ ಶ್ರೇಷ್ಠವಾದದ್ದು.

೨೪೬. ಏರುವಾ ಕುದುರೆಯನು । ಹೇರುವಾ ಎತ್ತನ್ನು ।
ಬೇರೂರಲಿದ್ದ ಸತಿಯನ್ನು ಬೇರೊಬ್ಬ ।
ರೇರದೆ ಬಿಡರು ಸರ್ವಜ್ಞ ॥

ಏರುವಂಥ ಕುದುರೆಯನ್ನು. ಹೇರುವಂಥ (ಭಾರವನ್ನು) ಎತ್ತನ್ನು ಹಾಗೂ ಪರಊರಲ್ಲಿರುವಂಥ ಪತ್ನಿಯನ್ನು ಇನ್ನೊಬ್ಬರು ಉಪಯೋಗಿಸಿ ಕೊಳ್ಳದೆ ಬಿಡಲಾರರು.

೨೪೭. ಸೇರಿದಾ ಹೊಲವನ್ನು । ಹೋರುವಾ ಮಗನನ್ನು ।
ಚಾರು ಮೈನೆರೆದ ಮಗಳನ್ನು ಪರರಲ್ಲಿ ।
ಬೀರುವವನೆಗ್ಗ ಸರ್ವಜ್ಞ ॥

ಸ್ವಂತ ಹೊಲವನ್ನು, ಜಗಳಾಡುವಂಥ ಮಗವನ್ನು. ಸುಂದರಳಾದ ಮೈನೆರೆದ ಮಗಳನ್ನು ಎರಡನೇಯವರಲ್ಲಿ ಬಿಡುವಂಥವನು ಮೂರ್ಖನು.

೨೪೮. ದಿನಪತಿಗೆ ಎಣ್ಣೆಯಿಲ್ಲ । ಧನಪತಿಗೆ ಸ್ಥಿರವಿಲ್ಲ ।
ಅನುಭವಿಗೆ ಬೇರೆ ಮತವಿಲ್ಲ ಅರಿದಂಗೆ ।
ಮುನಿವರೆ ಇಲ್ಲ ಸರ್ವಜ್ಞ ॥

ಸೂರ್ಯನಿಗೆ ಸರಿಸಮಾನರಾದವರು ಯಾರೂ ಇಲ್ಲ. ಶ್ರೀಮಂತನ ಸಿರಿವಂತಿಕೆಯು ಸ್ಥಿರ (ಶಾಶ್ವತ) ವಲ್ಲ. ಅನುಭವಿಗೆ ಮತಭೇದವಲ್ಲ. ಅದರಂತೆ ಜ್ಞಾನಿಗೆ ಕ್ರುದ್ಧರಾರೂ ಇಲ್ಲ.

೨೪೯. ಕಾಯಕವು ಉಳ್ಳನಕ । ನಾಯಕನು ಎನಿಸಿಪ್ಪ ।
ಕಾಯಕವು ತೀರ್ದ ಮರುದಿನವೆ ಸುಡುಗಾಡ ।
ನಾಯಕನು ಎನಿಪ ಸರ್ವಜ್ಞ ॥

ಸದಾ ಕಾರ್ಯತತ್ಪರನು ಎಲ್ಲ ಕಡೆಗೂ ಹಿರಿಯನೆನಿಸಿಕೊಳ್ಳುವನು. ನಿರುದ್ಯೋಗಿಯಾದ ಮರುದಿನವೇ ಅವನು ಸುಡುಗಾಡಿನ ನಾಯಕನಂತೆನಿಸಿ ಕೊಳ್ಳುವನು.

೨೫೦. ಸತ್ತವರಿತ್ತು ಬೇ | ಸತ್ತವರು ಉಳಿವರೇ ? |
ಹತ್ತೆಂಟು ಕಾಲ ತಡನಕ್ಕು ಬಳಿಕೆಲ್ಲ |
ರತ್ತಲೇ ಅಕ್ಕು ಸರ್ವಜ್ಞ ||

ಸತ್ತವರಿಗಾಗಿ ಅತ್ತು ಬೇಸತ್ತರೆ ಅವರೇನಾದರೂ ಉಳಿಯುವರೇ? ಹತ್ತೆಂಟು ವರ್ಷಗಳು ತಡವಾಗಬಹುದು. ಆದರೆ ಕೊನೆಗೊಮ್ಮೆ ಎಲ್ಲರೂ ಅತ್ತ ಹೋಗಲೇಬೇಕು. (ಸಾಯಲೇಬೇಕು.)

೨೫೧. ತುತ್ತಿನಾಸೆಗೆ ಮತವ | ವಿತ್ತದಾಸೆಗೆ ಸತಿಯ |
ನಿತ್ತು ಜೀವಿಸುವ ಮನುಜನ ಸಂಗವು |
ಸತ್ತರೂ ಬೇಡ ಸರ್ವಜ್ಞ ||

ಅನ್ನದಾಸೆಗಾಗಿ ಜಾತಿ, ಧರ್ಮವನ್ನು ಬಿಟ್ಟು, ಹಣದಾಸೆಗಾಗಿ ಪತ್ನಿಯನ್ನು (ಹೆರವರಿಗೆ) ಕೊಟ್ಟು ಉಪಜೀವನ ನಡೆಯಿಸುವಂಥವನ ಸಂಗವು ಸತ್ತರೂ ಬೇಡ.

೨೫೨. ಕಂಡವರ ತೆಗಳುವನ | ಕಂಡಿಹಳ ಬಿಡದವನ |
ಭಂಡ ನೆರೆಯೂಡಿ ಕಾಲು ಕೆದರುವನ |
ಕಂಡಿಹರೆ ತೊಲಗು ಸರ್ವಜ್ಞ ||

ಕಂಡವರನ್ನು ತೆಗಳುವಂಥವನ, ಸಿಕ್ಕಂಥವಳ ಸಂಗವನ್ನು ಮಾಡುವವನ ಹಾಗು ಮಾನಗೇಡಿಗಳ ಜೊತೆಗೂಡಿ ( ಎಲ್ಲರನ್ನು ) ಆಡಿಕೊಳ್ಳುತ್ತ ಕಾಲ ಕಳೆಯುವಂಥವನ ನೆರಳಿನಿಂದ ದೂರವಿರಬೇಕು.

೨೫೩. ಹಂಗಿನರಮನೆಗಿಂತ | ವಿಂಗಡದ ಗುಡಿಲೇಸು |
ಭಂಗಬಟ್ಟುಂಬ ಬಿಸಿ ಅನ್ನಕ್ಕಿಂತಲು |
ತಂಗುಳವೆ ಲೇಸು ಸರ್ವಜ್ಞ ||

( ಎರಡನೆಯವರ ) ಹಂಗಿನ ಅರಮನೆಯಲ್ಲಿರುವದಕ್ಕಿಂತ ಯಾರ ತೊಂದರೆಯೂ ಇಲ್ಲದಂಥ ಹಾಳು ಗುಡಿಯು ಬಹಳ ಒಳ್ಳೆಯದು. ಅದರಂತೆ ಅಪಮಾನವನ್ನುಂಟು ಮಾಡುವಂಥ ಬಿಸಿ ಅನ್ನಕ್ಕಿಂತಲೂ ಆದರದ ತಂಗುಳನ್ನವು ಒಳ್ಳೆಯದು.

೨೫೪. ಆಚೆಯ ಮಾವಿನ ಹಣ್ಣು | ಕಡಿದ ಕಬ್ಬಿನ ಗಣಿಕೆ |
ಪಡೆದ ಒಡವೆಯನು, ಮಡದಿಯನ ಪರರಲಿ |
ಬಿಡುವವನು ಹೆಡ್ಡ ಸರ್ವಜ್ಞ ||

ಪೂರ್ಣ ವಾಗಿದ ಮಾವಿನ ಹಣ್ಣು, ತುಂಡು ಮಾಡಿದಂಥ ಕಬ್ಬಿನ ಗಣಿಕೆ, ಗಳಿಸಿದಂಥ ವಸ್ತುಗಳು ಹಾಗು ಪತ್ನಿಯನ್ನು ಎರನೇಯವರಲ್ಲಿ ಇರಿಸುವಂಥವನು ಮಹಾ ಮೂರ್ಖನು.

೨೫೫. ಹಾಲು ಇಲ್ಲದ ಊಟ | ಬಾಲೆಯರ ಬರಿನೋಟ |
ಕಾಲಿಲ್ಲದವನ ಹರಿದಾಟ, ಕಣ್ಣಿಲ್ಲದ |
ಕೋಲು ಕಳೆದಂತೆ || ಸರ್ವಜ್ಞ ||

ಹಾಲು ಇಲ್ಲದೆ ಮಾಡುವಂಥ ಊಟ, ಬಾಲೆಯರ ಬರಿಯ ನೋಟ ಹಾಗು ಕಾಲಿಲ್ಲದಂಥವನ ತಿರುಗಾಟ ಇವು ಕಣ್ಣಿಲ್ಲದವನ (ಕುರುಡನ) ಬಡಿಗೆಯು ಕಳೆದಂತೆ.

೨೫೬. ಆಳಾಗಬಲ್ಲವನು | ಆಳುವನು ಅರಸಾಗಿ |
ಆಳಾಗಿ ಬಾಳಲರಿಯದವನು, ಕಡೆಯಲಿ |
ಹಾಳಾಗಿ ಹೋಹ ಸರ್ವಜ್ಞ ||

(ಪ್ರಸಂಗ ಬಂದಾಗ) ಆಳಾಗಬಲ್ಲವನೇ ಅರಸನಾಗಿ ( ಇತರರನ್ನು ) ಆಳಬಲ್ಲನು. (ಆದರೆ) ಆ ರೀತಿ ಆಳಾಗಿ ಬಾಳಲು ಅರಿಯದಂಥವನು ಮಾತ್ರ ಕೊನೆಗೊಂದು ದಿನ ಹಾಳಾಗಿ ಹೋಗುವನು.

೨೫೭. ಇಬ್ಬರೊಳಗಿನ ಕಿಚ್ಚು | ಒಬ್ಬರರಿಯದೆ ಹಬ್ಬಿ |
ಹಬ್ಬುತ್ತಲಿಬ್ಬರೊಳಗೊಬ್ಬ ಬೆಂದರಿ |
ನ್ನೊಬ್ಬಗದು ಹಬ್ಬ ಸರ್ವಜ್ಞ||

ಈರ್ವರಲ್ಲಿ (ಹುಟ್ಟಿದಂಥ ) ಬೇಗೆಯು ಒಬ್ಬರಿಗೂ ಗೊತ್ತಾಗದಂತೆ ಹಬ್ಬುವದೆ.ನೋ ನಿಜ. ಆದರೆ ಹಬ್ಬಿದಂಥ ಆ ಬೇಗೆಯಲ್ಲಿ ಇಬ್ಬರೊಳ ಗೊಬ್ಬನು ಬೆಂದ ಹೋದರೆ ಅದು ಇನ್ನೊಬ್ಬನಿಗೆ ಹಬ್ಬಿದಷ್ಟ ಸಂತೋಷ ವನ್ನುಂಟಮಾಡುವದು.

೨೫೮. ಗಿಳಿಗ್ಗೆಮ್ಮರನುರಳಿ | ಕೀಳು ಗಿಡನುಳಿವಂತೆ |
ಮೇಳಗಳ ಬಲದಿ ಮೆರೆಯುವ ಖಳನಳಿದು |
ಕೀಳು ಬಾಳುವನು ಸರ್ವಜ್ಞ ||

ಬಿರುಗಾಳಿಗೆ ದೊಡ್ಡ ಮರವು ಉರುಳಿ ಚಿಕ್ಕ ಗಿಡವು ಉಳಿದುಕೊಳ್ಳುವಂತೆ ಟೋಳಿಯನ್ನು ಕಟ್ಟಿಕೊಂಡು ಮೆರೆದಾಡುವಂಥ ಪುಂಡನು ನಾಶವಾಗಿ ಸಾಮಾನ್ಯನಾದವನು ಉಳಿದುಕೊಳ್ಳುವನು.

೨೫೯. ಬೇಗೆಯೊಳು ಹೋಗನೆರು|ಮೂಗರೋಳು ದುಡಿಯದಿರು
ಆಗದರ ನಂಬಿ ಕೆಡದಿರು, ನುಡುವಿರಳು |
ಹೋಗದಿರ ಪಯಣ ಸರ್ವಜ್ಞ ||

ಬೆಂಕಿಯಲ್ಲಿ ಹೋಗದಿರು, ಮೂಕನೊಂದಿಗೆ ಮಾತಾಡದಿರು, (ನಿನಗೆ) ಆಗದಿರುವವರನ್ನು ನಂಬಿ ಕೆಡದಿರು ಹಾಗು ಸರಿರಾತ್ರಿಯಲ್ಲಿ ಪ್ರಯಾಣಕ್ಕೆ ಹೊರಡದಿರು.

೨೬೦. ಮೆಚ್ಚದಿರು ಪರಸತಿಯು | ಕಚೆಯೊಳು ಬೆರೆಯದಿರು |
ನಿಚ್ಚ ನೆರೆಯೊಳಿನೆ ಕಾದದಿರು, ಒಬ್ಬರ |
ಇಚ್ಛೆಯಲಿರದಿರು, ಸರ್ವಜ್ಞ ||

ಪರಸ್ತ್ರೀಯರ ಮೇಲೆ ಕೆಟ್ಟ ದೃಷ್ಟಿಯನ್ನಿಡಬೇಡ, ಹೀನ ಮಾತುಗಳನ್ನಾಡಬೇಡ, ಅನುದಿನವೂ ನೆರೆಯವರೊಂದಿಗೆ ಕಾದಾಡಬೇಡ, ಹಾಗು ಬೇರೊಬ್ಬರ ಆಧೀನದೊಳಗಿರಬೇಡ.

೨೬೧. ಆನೆ ಬೀದಿಯಲಿ ಬರಲು | ಶ್ವಾನ ತಾ ಬೊಗಳುವದು |
ಶ್ವಾನನಂತಾನೆ ಬೊಗಳಿದರೆ ಆನೆಯ |
ಮಾನವೇ ಹಾನಿ ಸರ್ವಜ್ಞ||

ಆನೆಯು ಬೀದಿಯಲ್ಲಿ ಹೋಗುವಾಗ ನಾಯಿಯು ಬೊಗಳುವದಂತೂ ಸರಿಯೇ, ಆದರೆ ( ನಾಯಿಯು ಬೊಗಳುತ್ತದೆಂದು ) ಆನೆಯು ಬೊಗಳತೊಡಗಿದರೆ ಆನೆಯ ಮಾನಕ್ಕೇ ಕುಂದು ಉಂಟಾಗುತ್ತದೆ.

೨೬೨, ಮನಭಂಗವಾದಂದು । ಘನನಿದ್ರೆ ಹೋದಂದು ।
ವನಿತೆಯರು ಸುತರು ಜರಿದಂದು ಮರಣವದು ।
ತನಗೆ ಬಂದಂತೆ ಸರ್ವಜ್ಞ ॥

ಮನಸ್ಸು ಮುರಿದು ಹೋದ ದಿನ, ಗಾಢವಾದ ನಿದ್ರೆ ಹೋದ ದಿನ, ಹೆಂಡತಿ ಹಾಗು ಮಕ್ಕಳು ಜರಿದು ಮಾತನಾಡಿದ ದಿನ ಅವನಿಗೆ ಸಾವು ಬಂದಂತೆಯೇ ಸರಿ.

೨೬೩. ಕೆಟ್ಟ ಮೈ ಹೆಂಗಸನು । ಬಟ್ಟೆಯಲಿ ತುರುಚೆಯನು ।
ಅಟ್ಟಟ್ಟಿ ಕಡಿವ ಕಡಜನ ಹುಟ್ಟನ್ನು ।
ಮುಟ್ಟಬೇಡೆಂದ ಸರ್ವಜ್ಞ ॥

ಮೈ ಕೆಡಿಸಿಕೊಂಡ (ರೋಗಿಷ್ಠೆಯಾದ) ಹೆಂಗಸನ್ನು, ಮಾರ್ಗದಲ್ಲಿಯ ಚುರ್ಚಿಯ ಗಿಡವನ್ನು ಹಾಗು ಬೆನ್ನು ಹತ್ತಿ ಕಡಿಯಲು ಬರುವಂಥ ಕಡಜೇರಿಗೆ ಹುಳದ ಮನೆಯನ್ನು ಮುಟ್ಟುವ ಗೋಜಿಗೆ ಹೋಗಬೇಡ.

೨೬೪. ತಾಗುವಾ ಮುನ್ನವೇ । ಬಾಗುವಾ ತಲೆ ಲೇಸು ।
ತಾಗಿ ತಲೆಯೊಡೆದು ಕೆಲನಾದ ಬಳಿಕದರ ।
ಭೋಗವೇನೆಂದ ಸರ್ವಜ್ಞ ॥

ತಾಗುವದಕ್ಕೆ ಮುಂಚೆಯೇ ಬಾಗಿ ಹೋಗುವಂಥ ತಲೆಯು ಒಳ್ಳೆಯದು, (ಇಲ್ಲದಿದ್ದರೆ) ತಾಗಿದ ನಂತರ ತಲೆಯೊಡೆದು ಹೋಳಾದ ನಂತರ ಅದರ ಪ್ರಯೋಜನವೇನು ?

೨೬೫. ಸಿರಿಯು ಸಂಸಾರವನು । ಸ್ಥಿರವೆಂದು ನಂಬದಿರು ।
ಹಿರಿದೊಂದು ಸಂತೆ ನೆರೆದೊಂದು ಜಾವಕ್ಕೆ ।
ಹರಿದು ಹೋದಂತೆ ಸರ್ವಜ್ಞ ॥

ಐಶ್ವರ್ಯದ ಸಂಸಾರವು ಶಾಶ್ವತವೆಂದು ಭಾವಿಸಬೇಡ. ದೊಡ್ಡ ಸಂತೆಯಲ್ಲಿ ಕೂಡಿದಂಥ ಜನಸಂದಣಿಯು ಅಲ್ಪಾವಧಿಯಲ್ಲಿಯೇ ಇಲ್ಲದಂತಾಗುವದು.

೨೬೬. ಬರೆದ ಕರಣಿಕನೊಡನೆ | ಹಿರಿದು ಹೊರಲು ಬೇಡ
ಗರಗಸದೊಡನೆ ಮರ ಹೋರಿ ತನ್ನತಾ |
ನಿರಿದುಕೊಂಡಂತೆ ಸರ್ವಜ್ಞ ||

(ಲೆಖ್ಖಪತ್ರಗಳನ್ನು ಬರೆಯುವಂಥ ಗುಮಾಸ್ತನೊಡನೆ ಕಾದಾಡಲು ಪ್ರಯತ್ನಿಸಬೇಡ. (ಅವನೊಂದಿಗೆ ಜಗಳವಾಡುವದೆಂದರೆ) ಕಟ್ಟಿಗೆಯು ಕರಗಸ ದೊಂದಿಂಗೆ ಹೋರಾಡಿ ತನ್ನನ್ನು ತಾನೇ ನಾಶಮಾಡಿಕೊಂಡಂತೆ.

೨೬೭. ಗಂಧವನು ಇಟ್ಟ ಮೇ | ಲಂದದಲಿ ಇರಬೇಕು |
ನಿಂದೆಕುಂದುಗಳ ತೊರೆದವನು ಧರಣಿಯಲಿ |
ಇಂದುಧರನೆಂದ ಸರ್ವಜ್ಞ ||

ಗಂಧವನ್ನು ಧರಿಸಿದ ನಂತರ ಚಂದಾಗಿ ಇರಬೇಕು. (ಪರರ) ನಿಂದೆಯನ್ನು, ತನ್ನಲ್ಲಿಯ ಕುಂದುಗಳನ್ನು ತೊರೆದಂಥವನು ಇಂದುಧರನಿಗೆ ಸಮಾನನು.

೨೬೮. ಉಂಡುಂಡು ಕೆಡಕೆಡೆದು | ಖಂಡೆಯನು ಮಸೆಮಸೆದು |
ಕಂಡವರ ಕಾಲು ಕೆದರುವ ದುರುಳನು |
ಗುಂಡಿಗಿಕ್ಕೆಂದ ಸರ್ವಜ್ಞ ||

ಉಂಡುಂಡು (ಇತರರನ್ನು) ಬಾಯಿಗೆ ಬಂದಂತೆ ಬಯ್ಯುವವನ, ಖಡ್ಗವನ್ನು ಹಿರಿಯುವವನ ಹಾಗು ಕಂಡವರೊಂದಿಗೆ ಜಗಳ ತೆಗೆಯುತ್ತಿರುಗುವ ದುರುಳರನ್ನು ಗುಂಡಿಕ್ಕಿ ಕೊಲ್ಲಬೇಕು.

೨೬೯. ಬಟ್ಟೆ ಬಟ್ಟೆಯೊಳಿಲ್ಲ| ಹೊಟ್ಟೆ ಜಾಲಿಯ ಮುಳ್ಳು |
ಹುಟ್ಟಿದವರೆಲ್ಲ ಗಿಜವಾಯಿ, ಮೂಡಲ |
ಬಟ್ಟೆ ಬೇಡೆಂಬ ಸರ್ವಜ್ಞ||

(ಎಲ್ಲಿ ನೋಡಿದಲ್ಲಿ) ದಾರಿಯ ತುಂಬೆಲ್ಲ ಹೊಟ್ಟೆ ಜಾಲೆಯ (ಒಂದು ತರಹದ ಜಾಲಿಯ ಗಿಡ) ಮುಳ್ಳುಗಳು, (ಅಲ್ಲಿ) ಹುಟ್ಟಿದವರೆಲ್ಲಾ ಮುಖಹೀನರು. (ಗಿಜವಾಯಿ-ಕಿಸಬಾಯಿ ಇಪ್ಪವರು) ಆದಕ್ಕಾಗಿ ಪೂರ್ವದಿಕ್ಕಿನ ದಾರಿಯೇ ಬೇಡ.

೨೭೦. ಊರು ಸನಿಹವಲಿಲ್ಲ। ನೀರೊಂದು ಗಾವುದವು।
ಸೇರಿ ನಿಲ್ಲುವರೆ ನೆರಳಿಲ್ಲ, ಬಡಗಲ।
ದಾರಿ ಬೇಡೆಂದ ಸರ್ವಜ್ಞ ॥

ಸಮೀಪದಲ್ಲಿಲ್ಲದ (ದೂರ–ದೂರವಿದ್ದಂಥ) ಊರುಗಳು, ಗಾವುದ ದೂರದಲ್ಲಿ ನೀರಿನ ತಾಣ, ನಿಂತುಕೊಳ್ಳಬೇಕಂದರೆ ನೆರಳು ಸಿಗದಂತ ಉತ್ತರದಿಕ್ಕಿನ ದಾರಿಯೇ ಬೇಡ.

೨೭೧. ಜೋಳದ ಬೋನಕ್ಕೆ। ಬೇಳೆಯ ತೊಗೆಯಾಗೆ।
ಕಾಳೆಮ್ಮೆ ಕರೆದ ಹಯನಾಗೆ, ಬೆಳವಲದ।
ಮೇಳ ನೋಡೆಂದ ಸರ್ವಜ್ಞ ॥

ಜೋಳದ ಅನ್ನ (ಬೋನ)ದಲ್ಲಿ ಬೇಳೆಯ ತೊವ್ವೆಯು, ಮತ್ತು ಕರೀ ಎಮ್ಮೆಯ ಹಾಲು ಇದ್ದ ಬೆಳವಲದ ಊಟದ ರು ಚಿ ಯ ನ್ನು ನೋಡಬೇಕು.

೨೭೨. ನವಣೆಯ ಬೋನಕ್ಕೆ ಹವಣಾದ ತೊಗೆಯಾಗಿ।
ಕವಣೆಗಲ್ಲಷ್ಟು ಬೆಣೆಯಿಡಲೂಟದ।
ಹವಣ ನೋಡೆಂದ ಸರ್ವಜ್ಞ ॥

ನವಣೆಯ ಅನ್ನದಲ್ಲಿ ರುಚಿಕಟ್ಟಾದ ತೊವ್ವೆ ಹಾಗು ಕವಣೆಗಲ್ಲಿನಷ್ಟು ಬೆಣ್ಣೆಯ ಮುದ್ದೆಯು ಇದ್ದ ಊಟದ ರುಚಿಯನ್ನು ಸವಿದೇ ಅನುಭವಿಸ ಬೇಕು.

೨೭೩. ಹೆಣ್ಣಿನಿಂದಲಿ ಇಹವು। ಹೆಣ್ಣಿನಿಂದಲಿ ಪರವು।
ಹೆಣ್ಣಿನಿಂದ ಸಕಲ ಸಂಪದವು ಹೆಣ್ಣೊಲ್ಲ।
ದಣ್ಣಗಳು ಯಾರು ಸರ್ವಜ್ಞ ॥

ಹೆಣ್ಣಿನಿಂದ ಲೌಕಿಕ ಸುಖ ಸಿಗುವದು. ಹೆಣ್ಣಿನಿಂದಲೆ ಪರಮಾರ್ಥಿಕ ಸಾಧನವಾಗುವದು, ಹೆಣ್ಣಿನಿಂದ ಸಕಲಸಂಪತ್ತು ಸಿಗುವದು. ಅಂಥ ಹೆಣ್ಣನ್ನು ಒಲ್ಲೆನೆಂದೆನ್ನುವ ಅಣ್ಣಗಳಾರು ?

೨೭೪. ಪಲ್ಲಕ್ಕಿ ಏರಿದವ | ರೆಲ್ಲಿಂದ ಬಂದಿಹರು |
ನೆಲ್ಲಕ್ಕಿಯಂಥ ಸಲಿವಲ್ಲ ಹಿರಿಯರು |
ನಲ್ಲಳಿಂದಲ್ಲೆ ? ಸರ್ವಜ್ಞ ||

ಪಲ್ಲಕ್ಕಿಯನ್ನು ಹತ್ತಿ ಮೆರೆಯುವಂಥವರು ಬಂದುದೆಲ್ಲಿಂದ ಹಾಗೂ ನೆಲ್ಲಕ್ಕಿಯಂಥ ಹಲ್ಲುಳ್ಳುವ ಹಿರಿಯರು ಕೂಡ ( ಬಂದುದು ) ಹೆಣ್ಣಿನಿಂದಲ್ಲವೆ ?

೨೭೫. ಹೆಣ್ಣಿನ ಹೃದಯದ | ತಣ್ಣಗಿಹ ನೀರಿನ |
ಬಣ್ಣಿಸುತ ಕುಣಿವ ಕುದುರೆಯ ನೆಲೆಯ ಬ |
ಲ್ಲಣ್ಣಗಳು ಯಾರು ಸರ್ವಜ್ಞ ||

ಹೆಣ್ಣಿನ ಹೃದಯ, ತಣ್ಣೀರಿನ ಮತ್ತು ( ಇತರರು ) ಹೊಗಳುವಂತೆ ಕುಣಿದಾಡುವ ಕುದುರೆಯ ನೆಲೆಯನ್ನು ಬಲ್ಲಂಥ ಅಣ್ಣಗಳಾದರೂ ಯಾರಿದ್ದಾರೆ ?

೨೭೬. ಅಂಬುಧಿಯ ಗಾನವನು | ಅಂಬರದ ಕಲಹವನು |
ಶಂಭುವಿನ ಮಹಿಮೆ | ಸತಿಯ ಹೃದಯವ |
ನಿಂಬರಿದರಾರು ಸರ್ವಜ್ಞ ||

ಅಂಬುಧಿಯ ( ಸಾಗರದ ) ಗಾಯನವನ್ನು, ಅಂಬರದ (ಆಕಾಶ)ದಲ್ಲಿಯ ಕಲಹವನ್ನು, ಶಂಕರನ ಮಹಿಮೆಯನ್ನು ಹಾಗು ಸತಿಯರ ಹೃದಯವನ್ನು ಕಂಡವರು ಯಾರು.

೨೭೭. ರತಿಕಲೆಯೊಳತಿ ಚದುರೆ | ಅತಿಮಿತಿಯ ಮಾತಿನೊಳು |
ಖತಿಗಳೆದ ಮೊಗವು ಸೊಬಗಿನ ಸುದತಿ ಕಂ |
ಡತಿ ಬಯಸದಿಹರೆ ಸರ್ವಜ್ಞ ||

ರತಿಕಲೆಯಲ್ಲಿ ಅತಿ ಚತುರೆಯಾದಂಥ, ಮಿತಭಾಷೆಯಾದಂಥ ಕೋಪವಿಲ್ಲದಂಥ ( ನಗೆ ) ಮುಖವುಳ್ಳ ಹಾಗು ಸೊಬಗಿನ ರಮಣಿಯನ್ನು ಕಂಡು ಬಯಸದಂಥವರು ಯಾರಿದ್ದಾರೆ ?

೨೭೮. ಮೊಲೆಗಳುಗಿಪವಳಾ | ಚಲುವೆ ಒಡಿಪವಳಾಗಿ |
ಹಲತೆರದಿ ಕರೆವ ಕಾಮಿನಿಯನು ಬಿಟ್ಟು |
ತೊಲಗುವರಾರು ಸರ್ವಜ್ಞ ||

ಹೊರಚಿಮ್ಮುತ್ತಿರುವ ಮೊಲೆಯುಳ್ಳವರು, ಒಲಿದು ಬಂದ ಸುಂದರಿಯ ಹಾಗು ನಾನಾಪರಿಯಾಗಿ ಪ್ರಾರ್ಥಿಸುವ ( ಕರೆಯುವ ) ಕಾಮಿನಿಯನ್ನು ಅಗಲಿ ಹೋಗುವಂಥವರಾದರೂ ಇರುವರೆ ?

೨೭೯. ಘನತಪಿಸಿ ಸನ್ಯಾಸಿ | ಪರಮ ಯೋಗಿಯು ಮುನಿಯು |
ಸೆರೆಸಿಕ್ಕು ಮಾಯೆಯೊಳಗಾಗಿ ಇರುತಿರಲು |
ನರರ ಪಾಡೇನೆಂದ ಸರ್ವಜ್ಞ ||

ಶ್ರೇಷ್ಠ ತಪಸ್ವಿಗಳು, ಸನ್ಯಾಸಿಗಳು, ಯೋಗಿಗಳು ಹಾಗು ಮುನಿಗಳು ಕೂಡ ಹೆಣ್ಣಿನ ಮಾಯೆಯೊಳಗೆ ಸಿಕ್ಕು ಗೋಳಾಡುತ್ತಿರಲು ಸಾಮಾನ್ಯ ಮಾನವನ ಪಾಡೇನು ?

೨೮೦. ರುದ್ರಕರ್ತನು ತಾನು ಅರ್ಧನಾರಿಯು ಆದ |
ಇದ್ದವರೊಳಾರು ಸತಿಯರ ಹೃದಯವನು |
ಗೆದ್ದವರು ಯಾರು ಸರ್ವಜ್ಞ ||

ರುದ್ರನು ತಾನೇ ಕರ್ತನಾಗಿದ್ದರೂ ಕೂಡ ಅರ್ಧನಾರೀಶ್ವರನಾದ. (ಅಂದಮೇಲೆ) ಇನ್ನುಳಿದವರಲ್ಲಿ ಸತಿಯರ ಹೃದಯವನ್ನು ಗೆದ್ದವರಾದರೂ ಯಾರು ?

೨೮೧. ಹರಿಯ ಉರವನು ಮೆಟ್ಟಿ | ಹರನ ಶಿರವನು ಏರಿ |
ಸರಸಿಜೋದ್ಭವನ ಮೊಗಗೆಡಿಸಿ ಮೀರಿದಳು |
ಹಿರಿಯರಿನ್ನಾರು ಸರ್ವಜ್ಞ ||

ವಿಷ್ಣುವಿನ ಎದೆಯನ್ನು ಮೆಟ್ಟಿ, ಶಿವನ ತಲೆಯನ್ನೇರಿ ಹಾಗು ಬ್ರಹ್ಮನನ್ನು ಮುಖಹೀನನನ್ನಾಗಿ ಮಾಡಿ ( ಹೆಣ್ಣು ) ಮೀರಿ ನಿಂತಿರುವಾಗ ಅವಳಿಗಿಂತಲೂ ದೊಡ್ಡವರು ಇನ್ನಾರಿದ್ದಾರೆ ?

೨೮೨. ಉಚ್ಚೆಯಾ ಬಚ್ಚಲವು | ತುಚ್ಛವೆಂದೆನಬೇಡ
ಅಚ್ಯುತನಜಬಿದ್ದ ದೇವೇಂದ್ರ |
ನೆಚ್ಚುತ್ತ ಬಿದ್ದ ಸರ್ವಜ್ಞ ||

ಮೂತ್ರದ ಬಚ್ಚಲವು ತುಚ್ಚವೆಂದು ಭಾವಿಸಬೇಡ- (ಅದರಲ್ಲಿ) ವಿಷ್ಣು ಬ್ರಹ್ಮನಂಥವರು ಬಿದ್ದಿರುವರಲ್ಲದೆ (ಬೇಕಂತಲೇ) ದೇವೇಂದ್ರನಂಥವನೂ ಬಿದ್ದಿದಾನೆ.

೨೮೩. ಮಾಯೆ ಗೆದ್ದಿಹ ಸೊಲ್ಲು | ಬಾಯಿ ಮಾತಲ್ಲವೇ? |
ಮಾಯೆಯಿಂ ಕಾಯವಾಗಿರಲು ಇವರುಗಳು |
ಮಾಯೆ ಗೆಲಲುಂಟೆ ಸರ್ವಜ್ಞ ||

ಮಾಯೆ (ಹೆಣ್ಣು) ಯನ್ನು ಗೆದ್ದಿರುವೆನೆಂಬುದು ಕೇವಲ ಬಾಯಿ ಮಾತು; ಕಾಯ (ಶರೀರವು ಮಾಯೆಯಿಂದ (ಹೆಣ್ಣಿನಿಂದ)ಲೇ ಆಗಿರುವಾಗ ಅದನ್ನು ಗೆಲ್ಲುವದೆಲ್ಲಿಂದ ಬಂದಿತು ?

೨೮೪. ತೋಟದಾ ಬೆಳೆಯನು | ದಾಟಿ ನೋಡದರಾರು |
ಮೀಟು ಜವ್ವನದ ಸೊಬಗಿಯರ ನೆರೆಕಂಡು |
ನಾಟದವರಾರು ಸರ್ವಜ್ಞ ||

ತೋಟದೊಳಗಿನ ಬೆಳೆಯನ್ನು ಕಂಡು (ನೋಡದೆ) ದಾಟುವವರಾರು? ತುಂಬ ಯೌವ್ವನದ ತರುಣಿಯನ್ನು ಕಂಡು ನೋಡದೆ ಮುಂದಕ್ಕೆ ಹೋಗುವವರಾದರೂ ಯಾರು ?

೨೮೫. ಬಿಲ್ಲು ಬಲ್ಲಿತು ನಾರಿ | ಬಿಲ್ಲಿಂದ ಕಡು ಸಣ್ಣ |
ಬಿಲ್ಲನೆ ಮರಳಿ ಎರಗಿಸಿತು ನಾರಿಯಿಂ |
ಬಲ್ಲಿದರು ಯಾರು ಸರ್ವಜ್ಞ ||

ಬಿಲ್ಲು ಬಲಿಷ್ಟವಾದದು ನಾರಿಯು ಬಿಲ್ಲಿಗಿಂತ ಕಡಿಮೆಯವಳಾಗಿದ್ದರೂ ಮರಳಿ ಬಿಲ್ಲನ್ನೇ ಹೂಡಿ ಹೊಡೆಯುವಂಥ ನಾರಿಗಿಂತ ಬಲಿಷ್ಠರು ಯಾರಿದ್ದಾರೆ ?

೨೮೬. ಹಣವು ದೊರೆತರೆ ಲೇಸು | ಋಣವು ಹರಿದರೆ ಲೇಸು |
ಗಣಿಕೆಯನು ತೊರೆಯೆ ನೆರೆಲೇಸು, ಸತಿಯರಲಿ |
ಗುಣವತಿಯೇ ಲೇಸು ಸರ್ವಜ್ಞ ||

ದ್ರವ್ಯವು ದೊರೆತರೆ, ಸಾಲವು ಪರಿಹಾರವಾದರೆ ಒಳ್ಳೆಯದು. ವೇಶ್ಯಾ ಸ್ತ್ರೀಯ ಸಂಗವನ್ನು ತೊರೆದರೆ ಬಹಳ ಒಳ್ಳೆಯದು. ಅದರಂತೆ ಸದ್ಗುಣ ಯಾದ ಪತ್ನಿಯರಿರುವದೂ ಒಳ್ಳೆಯದು.

೨೮೭. ಅಂಗನೆಯು ಒಲೆಯುವದು | ಬಂಗಾರ ದೊರೆಯುವದು |
ಸಂಗ್ರಾಮದೊಳಗೆ ಗೆಲುವುದು ಇವು ಮೂರು |
ಸಂಗಯ್ಯನೊಲುಮೆ ಸರ್ವಜ್ಞ ||

ಸ್ತ್ರೀಯು ಒಲಿಯುವದು, ಐಶ್ವರ್ಯವು ಕೈವಶವಾಗುವದು ಹಾಗು ಸಂಗ್ರಾಮ (ಯುದ್ಧ)ದಲ್ಲಿ ಜಯ ದೊರೆಯುವದು ಇವು ಮೂರು ದೇವರ ದಯೆಯಿಂದ ಲಭಿಸುವವು.

೨೮೮. ಉಳಿಯದೆ ಕೆಲಿಯದೆ | ತಲೆಯೆತ್ತಿ ನೋಡದೆ |
ಬಲು ಬಲ್ಲತದಲೆ ಇರುವವಳು ದೊರೆಯುವದು |
ರಲೆ ಗುರು ಕರುಣ ಸರ್ವಜ್ಞ ||

ತುಟಿ ಬಿಚ್ಚದೆ, ಗಟ್ಟಿಯಾಗಿ ಮಾತನಾಡದೆ, ತಲೆ ಎತ್ತಿ (ಪರಪುರುಷ ನನ್ನು) ನೋಡದೆ ಹಾಗು ಬಹಳ ಒಳ್ಳೆಯತನದಿಂದ ಇರುವಂಥ ನಾರೀ ಮಣಿಯು ದೊರೆಯಬೇಕಾದರೆ ಗುರುವಿನ ದಯವು ಇರಬೇಕು.

೨೮೯. ಸುಣ್ಣವಿಲ್ಲದ ವೀಳ್ಯೆ | ಬಣ್ಣವಿಲ್ಲದ ಮದುವೆ |
ಹೆಣ್ಣಿಲ್ಲದವನ ಸಂಸಾರ ಮಳಲೊಳಗೆ |
ಎಣ್ಣೆ ಹೊಯಿದಂತೆ ಸರ್ವಜ್ಞ ||

ಸುಣ್ಣವಿಲ್ಲದಂಥ ವೀಳ್ಯವೂ, ವಸ್ತ್ರಾಭರಣಗಳಿಲ್ಲದೆ ಮಾಡುವಂಥ ಮದುವೆಯೂ ಹಾಗು (ಮನೆಯಲ್ಲಿ) ಹೆಣ್ಣಿಲ್ಲದಂಥವನ ಬಾಳುವೆಯೂ ಉಸುಕಿನೊಳಗೆ ಎಣ್ಣೆಯನ್ನು ಸುರಿದಂತೆ. (ವ್ಯರ್ಥ)

೨೯೦. ಗಂಡನಿಲ್ಲದ ನಾರಿ । ಮಿಂಡನಿಲ್ಲದ ಸೂಳೆ ।
ಬಂಡವಲಿಲ್ಲದನ ಬೇಹಾರ ಮುದಿನಾಯಿ ।
ಕುಂಡೆಯಂತಿಕ್ಕು ಸರ್ವಜ್ಞ ॥

ಗಂಡನಿಲ್ಲದಂಥ ನಾರಿ, ಮಿಂಡನಿಲ್ಲದಂಥ ಸೂಳೆ, ಹಾಗೂ ಭಂಡವಾಳ ವಿಲ್ಲದಂಥವನ ವ್ಯಾಪಾರ ಈ ಮೂರರಗಲಿ ಮುದಿನಾಯಿಯ ತಿಗದಂತಿರುವವು.

೨೯೧. ಅರಸು ಇಲ್ಲದ ಊರು । ಹೊರಸು ಇಲ್ಲದ ನಿದ್ರೆ ।
ಪುರುಷನಿಲ್ಲದ ಬಾಳುವೆಯು ನೀರೊಳಗ ।
ಕ್ಷರವ ಬರೆದಂತೆ ಸರ್ವಜ್ಞ ॥

ಅರಸನಿಲ್ಲದಂಥ ನಗರವು, ಹೊರಸು ಇಲ್ಲದೆ ಮಾಡುವ ನಿದ್ರೆಯು ಹಾಗು ಪುರುಷನಿಲ್ಲದೆ ಇರುವವಳ ಬಾಳುವೆಯು ನೀರೊಳಗೆ ಅಕ್ಷರಗಳನು ಬರೆದಂತೆ ವ್ಯರ್ಥ.

೨೯೨. ಮೊಸರು ಇಲ್ಲದ ಊಟ । ಕೆಸರು ಇಲ್ಲದ ಗದ್ದೆ ।
ಬಸುರಾಗದವಳ ಬಾಳುವೆಯು ಬೇಸಿಗೆಯ ।
ಬಿಸಿಲು ಕಾದಂತೆ ಸರ್ವಜ್ಞ ॥

ಮೊಸರಿಲ್ಲದೆ ಮಾಡುವಂಥ ಊಟವು, ಕೆಸರು ಇಲ್ಲದಂಥ ಬತ್ತದ ಗದ್ದೆಯು ಹಾಗು ಬಸುರಾಗದೆ ಇದ್ದಂಥ ಸ್ತ್ರೀಯ ಬಾಳುವೆಯು ಇವು ಮೂರು ಬೇಸಿಗೆಯ ಬಿಸಿಲು ಕಾಯ್ದಂತೆ ವ್ಯರ್ಥವು.

೨೯೩. ಮಕ್ಕಳಿಲ್ಲದ ಮನೆಯು ಪಕ್ಷಿಯಿಲ್ಲದ ವನವು ।
ದಿಕ್ಕಿಲ್ಲದವನ ಸಂಸಾರ ಕಳ್ಳನು ಮನೆ ।
ಹೊಕ್ಕು ಹೋದಂತೆ ಸರ್ವಜ್ಞ ॥

ಮಕ್ಕಳಿಲ್ಲದಂಥ ಮನೆಯು, ಪಕ್ಷಿಗಳಿಲ್ಲದಂಥ ವನವು ಹಾಗು ದಿಕ್ಕಿಲ್ಲ (ಉತ್ತರಾಧಿಕಾರಿಗಳಿಲ್ಲ)ದಂಥವನ ಸಂಸಾರವು ಇವು ಮೂರು ಕಳ್ಳನು ಹೊಕ್ಕ ಮನೆಯಂತೆ.



೨೯೪. ರೊಕ್ಕವಿಲ್ಲದವನ ಬಾಳ್ವೆ | ಮಕ್ಕಳಿಲ್ಲದ ಮನೆಯು |
ಅಕ್ಕರವಿಲ್ಲದ ತವರುರೂ, ಇವು ಮೂರು |
ದುಕ್ಕ ಕಾಣಯ್ಯ ಸರ್ವಜ್ಞ ||

ಹಣವಿಲ್ಲದವನ ಬಾಳುವೆ, ಮಕ್ಕಳಿಲ್ಲದಂಥ ಮನೆ ಹಾಗು ಪ್ರೀತಿಯಿರದಂಥ ತವರುಮನೆ ಇವು ಮೂರು ದುಃಖದಾಯಕವಾದಂಥವುಗಳು.

೨೯೫. ಲೇಸಪ್ಪ ಸತಿಯೊಡನೆ | ದೋಷವಿರಿಸುವ ನೆಗ್ಗ|
ಕಾಸಿದ ಹಾಲು ನೊಣಮುಟ್ಟಲದನಾರು |
ಸೋಸಿ ತೆಗೆದಿಹರು ಸರ್ವಜ್ಞ ||

ಒಳ್ಳೆಯವಳಾದಪತ್ನಿಯಲ್ಲಿ ದೋಷವನ್ನೆಣಿಸುವಂಥವನು ಮೂರ್ಖನು. ಏಕೆಂದರೆ ಕಾಸಿದಂಥ ಹಾಲನ್ನು (ಒಂದು ವೇಳೆ) ನೊಣವು ಮುಟ್ಟಿದರೆ ಆ ಹಾಲನ್ನು ಯಾರಾದರೂ ಸೋಸುವದುಂಟೇ ?

೨೯೬. ಮನಬಂದ ಹೆಣ್ಣನ್ನು | ವಿನಯದಲಿ ಕರೆದಿತ್ತು |
ಮನಮುಟ್ಟಿ ಬಾಳ್ವೆ ಮಾಡಿದರೆ ಅಮೃತದ |
ಕೆನೆಯ ಸವಿದಂತೆ ಸರ್ವಜ್ಞ ||

ಮನಮೆಚ್ಚಿದ ಹೆಣ್ಣನ್ನು ವಿನಯದಿಂದ ಕರೆತಂದು ಅಂತಃಕರಣೆಯಿಂದ ಬಾಳ್ವೆ ಮಾಡಿದರೆ ( ಅವನ ಬಾಳುವೆಯು ) ಅಮೃತದ ಕೆನೆಯನ್ನು ಸವಿದಂತಾಗುವದು.

೨೯೭. ಬಾರದಾ ಹೆಣ್ಣಿಂಗೆ | ಹೋರುವನು ಕಡು ಹೆಡ್ಡ |
ದೂರದ ಹೆಣಕೆ ನರಿ ನೆಗೆದು ಕೂಗಿ ಬಾ |
ಯಾರಿ ಸತ್ತಂತೆ ಸರ್ವಜ್ಞ ||

( ತನ್ನ ವಶಕ್ಕೆ ) ಬಾರದಂಥ ಹೆಣ್ಣಿಗಾಗಿ ಹೋರಾಡುವವನು ಕಡು ಮೂರ್ಖನು (ಒಂದು ವೇಳೆ ಅವನು ಆ ರೀತಿ ಮಾಡಿದುದೇ ಆದರೆ) ದೂರದಲ್ಲಿರುವ ಹೆಣಕ್ಕಾಗಿ ನರಿಯು ಜಿಗಿದಾಡಿ ಕೂಗಿ ನೀರಡಿಸಿ ಸತ್ತಂತಾಗುತ್ತದೆ.

೨೯೮. ಸತ್ತ ಹೆಣಸಿಗೆ ನೀರು ಹೊತ್ತು ತಂದೆರೆದಂತೆ |
ಚಿತ್ತವಿಲ್ಲದಳ ಒಡನಾಟ ಕತ್ತೆ ಮುಂ |
ದತ್ತು ಕರೆದಂತೆ ಸರ್ವಜ್ಞ ||

ಸತ್ತ ಹೆಣಕ್ಕೆ ನೀರನ್ನು ಹೊತ್ತು ತಂದು ಸ್ನಾನ ಮಾಡಿಸಿದಂತೆಯೂ ಮನವಿಲ್ಲದವಳೊಡನೆ ಮಾಡಿದ ಬಾಳುವೆಯು ಕತ್ತೆಯ ಮುಂದೆ ಕುಳಿತು ಕೊಂಡು ಅತ್ತಂತೆ ವ್ಯರ್ಥವಾಗುವದು.

೨೯೯. ಬೆಚ್ಚನ ಮನೆಯಾಗಿ | ವೆಚ್ಚಕ್ಕೆ ಹೊನ್ನಾಗಿ |
ಇಚ್ಛೆಯನು ಅರಿವ ಸತಿಯಾಗಿ ಸ್ವರ್ಗಕೆ |
ಕಿಚ್ಚು ಹಚ್ಚೆಂಬ ಸರ್ವಜ್ಞ ||

(ಇರಲಿಕ್ಕೆ) ಬೆಚ್ಚಗಿನ ಮನೆಯಾಗಿ, ವಚ್ಚಮಾಡಲು (ಕೈಯೊಳು) ಹಣವಾಗಿ, (ಪತಿಯ) ಇಚ್ಛೆಯನ್ನು ತಿಳಿದುಕೊಂಡು (ಅದರಂತೆ) ವರ್ತಿಸುವ ಪತ್ನಿಯೊಬ್ಬಳಿರಲಾಗಿ ಸ್ವರ್ಗಕ್ಕೆ ಬೆಂಕಿಯನ್ನು ಹಚ್ಚಬೇಕು. (ಸ್ವರ್ಗವನ್ನು ಯಾಲೂ ಅಪೇಕ್ಷಿಸುವದಿಲ್ಲ.)

೩೦೦. ಎತ್ತುಗಳು ಎರಡಾಗಿ |ಬತ್ತದಿಹ ಹಯನಾಗಿ |
ಪುತ್ರರಯ್ದಾಗಿ ಸತಿಯೊಬ್ಬಳಾದರೆ |
ನಿತ್ಯದಿ ಸುಖವು ಸರ್ವಜ್ಞ ||

(ಬೇಸಾಯಕ್ಕಾಗಿ) ಎರಡೆತ್ತುಗಳು, ಯಾವಾಗಲೂ (ಹಾಲನ್ನು) ಕರೆಯುತ್ತಿರುವಂಥ ಎಮ್ಮೆ.ಆಕಳು ಐದು ಪುತ್ರರು ಹಾಗು ಒಬ್ಬ ಪತ್ನಿ ಇವಿಷ್ಟಿದ್ದರೆ ನಿತ್ಯವೂ ಸುಖವು ತಪ್ಪದು.

೩೦೧. ಹಳ್ಳಗದ್ದೆಗಳಾಗಿ | ಕುಳ್ಳವೆರಡೆತ್ತಾಗಿ |
ಒಳ್ಳೆ ಗುಣದವಳು ಸೊಸೆಯಾದರಾ ಮನೆಗೆ |
ಬಳ್ಳದಲಿ ಹೊನ್ನ ಸರ್ವಜ್ಞ ||

ಹಳ್ಳದ ಸಮೀಪದಲ್ಲಿರುವ ಗದ್ದೆಗಳು, ಚಿಕ್ಕ ಚೊಕ್ಕ ಎರಡೆತ್ತುಗಳು ಹಾಗು ಒಳ್ಳೆಯ ಗುಣದ ಸೊಸೆಯು ದೊರೆತರೆ ಆ ಮನೆ ಬಳ್ಳ ತುಂಬ ಹೊನ್ನ ಸಿಕ್ಕಂತೆ.

೩೦೨. ಅಡಿಕೆಯಿಲ್ಲದ ವೀಳ್ಯೆ | ಕಿಡಿಕೆಯಿಲ್ಲದ ಮನೆಯು |
ಒಡಕು ಬಾಯುವಳ ಮನೆವಾರ್ತೆ ಎಣ್ಣೆಯ |
ಕುಡಿಕೆಯೊಡೆದಂತೆ | ಸರ್ವಜ್ಞ ||

ಅಡಿಕೆಯಿಲ್ಲದೆ ಮೆಲ್ಲುವಂಥ ವೀಳ್ಯ, ಕಿಟಕಿಗಳಿಲ್ಲದಂಥ ಮನೆಯು ಹಾಗು ಒಡಕುಬಾಯುವಳ ಸಂಸಾರ ಇವು ಮೂರು ಎಣ್ಣೆಯ ಕುಡಿಕೆಯು ಒಡೆದುಹೋದಂತೆ.

೩೦೩. ಕಣಕವಿಲ್ಲದ ಊಟ | ವನಿತೆಯಿಲ್ಲದ ಬಾಳ್ವೆ |
ಎಣಿಕೆಯಿಲ್ಲದವನ ಮನೆವಾರ್ತೆ ಹೊಳೆಯೊಳಗೆ |
ಮುಣುಗಿ ಹೋದಂತೆ ಸರ್ವಜ್ಞ ||

ಗೋಧಿಯ ಹಿಟ್ಟು ಇಲ್ಲದ ಊಟ, ಹೆಂಡತಿಯಿಲ್ಲದವನ ಬಾಳುವೆ ಹಾಗು ಎಣಿಕೆಯುಲ್ಲದವನ ಸಂಸಾರ ಹೊಳೆಯೊಳಗೆ ಮುಳುಗಿಹೋದಂತೆ ವ್ಯರ್ಥವಾಗುವವು.

೩೦೪. ಮಾತನರಿಯದ ಮಗನು | ನೀತಿಯರಿಯದ ಸತಿಯು |
ಭೀತಿಯನಳಿದ ಆಳಿದ್ದರಾ ಮನೆಯು |
ಏತಕ್ಕೂ ಬೇಡ ಸರ್ವಜ್ಞ||

ಮಾತನ್ನು ತಿಳಿಯಲಾರದಂತ ಮಗನು, ನೀತಿಯನ್ನು ಅರಿಯಲಾರದಂಥ ಪತ್ನಿಯು ಹಾಗು ಭೀತಿಯನ್ನೇ ಅರಿಯದಂಥ ಸೇವಕನಿದ್ದ ಮನೆಯು ಏತಕ್ಕೂ ಬೇಡ.

೩೦೫. ಈಚಲ ಮರಹೀನ | ನೀಚರ ನೆರೆಹೀನ |
ನೋಚಿದ ಹೆಣ್ಣು ತಾಹೀನ, ಮನೆಯೊಳಗೆ |
ಪೇಚಾಟ ಹೀನ ಸರ್ವಜ್ಞ ||

ಈಚಲ ಗಿಡವು, ನೀಚರ ನೆರೆಹೊರೆಯು, ವಿಧವೆಯ ಸಂಗತಿಯು ಹಾಗು ಮನೆಯೊಳಗೆ ( ಯಾವಾಗಲೂ ) ಪೇಚಾಟವು ಅತ್ಯಂತ ಹೀನವಾದುದು. ( ಆದ್ದರಿಂದ ಯಾವಾಗಲೂ ಇವುಗಳಿಂದ ದೂರವಿರಬೇಕು.)

೨೦೬. ಆಲಕ್ಕೆ ಹೂವಿಲ್ಲ | ಶೀಲಕ್ಕೆ ಸರಿಯಿಲ್ಲ |
ನಾಲಗೆಯುಲೊಂದು ಎಲುವಿಲ್ಲ, ದೃಢ ಮನವು |
ಬಾಲೆಯರಿಗಿಲ್ಲ ಸರ್ವಜ್ಞ ||

ಆಲದ ಗಿಡಕ್ಕೆ ಹೂವಿಲ್ಲ, ಶೀಲಕ್ಕೆ ಸರಿಯಾದುದು ಯಾವುದೂ ಇಲ್ಲ, ನಾಲಿಗೆಯೊಳಗೆ ಒಂದು ಕೂಡ ಎಲುಬು ಇಲ್ಲ, ಅದರಂತೆ ಬಾಲೆಯರಿಗೆ ದೃಢ ಮನಸ್ಸು ಇರುವದಿಲ್ಲ.

೨೦೭. ನಾಯುಬಾಲವ ನಂಬಿ | ಹಾಯುವರೆ ಹಳ್ಳವನು ||
ನಾಯು ಬಾಲಿಂದ ಅತಿ ಚಪಲ ಹೆಣ್ಣೆಂಬ |
ನಾಯು ನೆಚ್ಚುವರೆ? ಸರ್ವಜ್ಞ ||

ನಾಯಿಯ ಬಾಲವನ್ನು ನಂಬಿ ಹಳ್ಳವನ್ನು ದಾಟುವದುಂಟೆ ? ಅದ ರಂತೆ ನಾಯಿಯ ಬಾಲಕ್ಕಿಂತಲೂ ಚಪಲಳಾದ ಹೆಣ್ಣೆಂಬ ನಾಯಿಯನ್ನು ನಂಬಿ ಬಾಳುವದುಂಟೆ ?

೨೦೮. ಹೆಂಡರ ಕೌತುಕವ | ಗಂಡರು ಬಲ್ಲರೇ ?
ಗುಂಡಿನೀರೊಳಗೆ ಕಿರಿಮೀನ ಹೆಜ್ಜೆಯನು |
ಕಂಡಾತನಾರು ಸರ್ವಜ್ಞ ||

ಹೆಂಡಂದಿರ ಕೌತುಕವನ್ನು ಗಂಡಂದಿರು ತಿಳಿದುಕೊಳ್ಳುವದು ಸಾಧ್ಯವೇ ಇಲ್ಲ. ಗುಂಡಿಯೊಳಗಿದ್ದ ನೀರಿನೊಳಗೆ ಚಿಕ್ಕ ಮೀನಿನ ಹೆಜ್ಜೆಯನ್ನು ಕಂಡವರಾರು ?

೨೦೯. ಅಲ್ಲ ಸಿಹಿಯಾದಂದು | ನೆಲ್ಲಿ ಹಣ್ಣಾದಂದು |
ಕಲ್ಲು ಪ್ರತಿಮೆಗಳು ಕುಣಿದಂದು ಸತಿಯರ |
ಸೊಲ್ಲ ನಂಬುವದು ಸರ್ವಜ್ಞ ||

ಹಸಿ ಶುಂಠಿಯು ಸಿಹಿಯಾದಾಗ, ನೆಲ್ಲಿಕಾಯಿಯು ಹಣ್ಣಾದಾಗ ಹಾಗು ಕಲ್ಲಿನ ಪ್ರತಿಮೆಗಳು ಎದ್ದು ಕುಣಿಯತೊಡಗಿದಾಗ ಪತ್ನಿಯರ ಮಾತನ್ನು ನಂಬಬಹುದು.

೩೧೦. ಹೆಣ್ಣು ಮುನಿದರೆ ತಿದ್ದು | ವಣ್ಣಗಳ ನಾ ಕಾಣೆ |
ಹೆಣ್ಣೊಳಮೃತವು ವಿಷವುಂಟು ಉಣಬಲ್ಲ |
ಅಣ್ಣಗಳು ಯಾರು ಸರ್ವಜ್ಞ ||

ಹೆಂಗಸು ಮುನಿದರೆ ಅವಳನ್ನು ತಿದ್ದುವಂಥವರನ್ನು ಕಾಣೆ. ಅವಳಲ್ಲಿ ಅಮೃತವುಂಟು, ವಿಷವುಂಟು. ಅದನ್ನು ಉಣ್ಣಬಹುದಾದಂಥ ಅಣ್ಣಗಳಾದರೂ ಯಾರಿದ್ದಾರೆ ?

೩೧೧. ನಾರಿ ಪರರುಪಕಾರಿ | ನಾರಿ ಸ್ವರ್ಗಕೆ ದಾರಿ |
ನಾರಿ ಸಕಲರಿಗೆ ಹಿತಕಾರಿ, ಮುನಿದರೆ |
ನಾರಿಯೇ ಮಾರಿ ಸರ್ವಜ್ಞ ||

ನಾರಿಯು ಪರರಿಗೆ ಉಪಕಾರಿಯೂ ಅಹುದು, ಅವಳು ಸ್ವರ್ಗಕ್ಕೆ ದಾರಿ ತೋರುವವಳೂ ಹೌದು. ಆದರಂತೆ ನಾರಿಯು ಸಕಲರಿಗೂ ಹಿತವನ್ನುಂಟು ಮಾಡುವಳು. ಆದರೆ ಅವಳು ಮುನಿದರೆ ಮಾತ್ರ ಮಾರಿ (ರಾಕ್ಷಸಿ) ಯಾಗುವಳು.

೩೧೨. ಮಂಜುಮಳೆ ಬರಲೇಸು | ಪಂಜು ಇರುಳಲಿ ಲೇಸು |
ನಂಜುತಲ್ಲುಣವ ಹಾದರದ ಕಳ್ಳಂಗೆ |
ಬಂಜೆ ಲೇಸೆಂದ ಸರ್ವಜ್ಞ ||

ಮಂಜಿನ ಮಳೆ ಬಂದರೆ ಒಳ್ಳೆಯದು, ರಾತ್ರಿಯ ಸಮಯದಲ್ಲಿ ದೀವಟಿಗೆಯು ಒಳ್ಳೆಯದು, ಅದರಂತೆ ವಿಷವನ್ನು ಉಣಬಯಸುವ ಹಾದರದ ಕಳ್ಳನಿಗೆ (ಜಾರನಿಗೆ) ಬಂಜೆಯೇ ಯೋಗ್ಯಳಾದಂಥವಳು.

೩೧೩. ನರೆಬಂದ ಮುದುಕಂಗೆ । ಭರಸ ಜವ್ವನೆ ಏಕೆ ?|
ಕರಗಿದ ತುಪ್ಪ ಹೇರುವಂತೆ ಜವ್ವನವು |
ತಿರುಗಿ ಬಂದಿಹುದೆ ಸರ್ವಜ್ಞ ||

ತಲೆಕೂದಲುಗಳು ಬಿಳಿದಾದ ಮುದುಕನಿಗೆ ತುಂಬು ಯೌವನೆಯಾದ ತರುಣಿಯು ಏತಕ್ಕೆ ಬೇಕು ? ಕರಗಿದಂಥ ತುಪ್ಪವು ಮತ್ತೆ ಗಟ್ಟಿಯಾಗಿ ಹೆರೆತುಕೊಳ್ಳುವಂತೆ ಮುದುಕರಿಗೆ ಯೌವನವು ಮರಳಿ ಬರುವದೇ ?

೩೧೪. ಹಾರವನ ನೆಗಳಿನ । ಗೇರುಬೀಜದ ಸೊನೆಯು ।
ಜಾರ ವನಿತೆಯರ ಗುಣವನು ಅರಿಯದಲೆ ।
ಸಾರಿದವ ಕೆಡಗು ಸರ್ವಜ್ಞ ॥

ಹಾರವನ (ಬ್ರಾಹ್ಮಣನ) ಮೊಸಳೆಯು, ಕೇರುಬೀಜದ ತುದಿಯ ಹಾಗೂ ಸೂಳೆಯರ ಗುಣಗನ್ನು ಚೆನ್ನಾಗಿ ತಿಳಿದುಕೊಳ್ಳದೆ ಹೋಗಬಾರದು ಅವರಿಂದ ಕೇಡು ತಪ್ಪದು.

೩೧೫, ಅತ್ತ ಸೂಳೆಯು ಸಂಗ । ಇತ್ತ ವಿಧವೆಯು ಸಂಗ ।
ಮತ್ತೆ ಪಶುಸಂಗ ಬಿಡದವಗೆ ಭವಭವದಿ ।
ಕತ್ತೆ ಜನುಮ ಸರ್ವಜ್ಞ ॥

ಒತ್ತಟ್ಟಿಗೆ ಸೂಳೆಯ ಸಂಗ, ಇನ್ನೊತ್ತಟ್ಟಿಗೆ ವಿಧವೆಯೊಡನೊಡನಾಟ, ಮತ್ತೆ ಪಶುವಿನ ಸಂಗವನ್ನು ಬಿಡದಂಥವನು ಜನ್ಮ ಜನ್ಮಕ್ಕೂ ಕತ್ತೆಯಾಗಿ ಜನಿಸುವನು.

೩೧೬. ಅಚ್ಚು ಹಾಕಿದ ಸೀರೆ ।ಪಪ್ಪಗುಪ್ಪಸ ತೊಟ್ಟು ।
ಹೆಚ್ಚಾಗಿ ಮುರುಕ ಮಾಡುವಳು ಕಾಮನು ।
ನೆಚ್ಚಿದ ಬಾಣ ಸರ್ವಜ್ಞ ॥

ಅಚ್ಚು ಹಾಕಿದ ಸೀರೆ, ಹಸಿರುವರ್ಣದ ಕಪ್ಪಸವನ್ನು ತೊಟ್ಟುಕೊಂಡು ಹೆಚ್ಚಾಗಿ ವೈಯಾರ ಮಾಡುವಂಥವಳು ಕಾಮನು ಮೆಚ್ಚಿದ ಬಾಣವೆಂದೇ (ಅತಿಕಾಮಿಯೆಂದು) ತಿಳಿಯತಕ್ಕದ್ದು.

೩೧೭. ಕರುಳನೆವರಿಸುತ । ನೀರಿಗೆಗಳ ಪಸರಿಸುತ ।
ಉರದೋರೆ ಸೆರಗ ಹೊರತಿಹಳು ಹಾದರದ ।
ತಿರುಳು ಕಾಣಯ್ಯ ಸರ್ವಜ್ಞ ॥

(ಮೇಲಿಂದ ಮೇಲೆ) ಮುಂಗುರುಗಳನ್ನು ನೇವರಿಸುತ್ತ, ಸೀರೆಯ ನೀರಿಗೆಗಳನ್ನು ಪಸರಿಸುತ್ತ, ಎದೆಗಳು ಕಾಣುವಂತೆ ಸೆರಗನ್ನು ಹೊದ್ದುಕೊಳ್ಳುವಂಥವಳು ಹಾದರದ ಮೂರ್ತಿಯಿದ್ದಂತೆ ಎಂದ ಭಾವಿಸಲಡ್ಡಿಯಿಲ್ಲ

೩೧೮. ಬಡವನ ಹೆಂಡತಿಯು | ಕಡು ಚಲುವೆಯಾದರೆ,
ನಡುಬೀದಿಯೊಳಗೆ ದವನವನು ಬಿತ್ತಲು |
ಮುಡಿಯುದವರಾರು ಸರ್ವಜ್ಞ ||

ಬಡವನ ಹೆಂಡತಿಯು ಅತಿ ಸುಂದರಿಯಾಗಿದ್ದರೆ, ಮಾರ್ಗದ ಮಧ್ಯದಲ್ಲಿ ದವನವನ್ನು ಬಿತ್ತಿದರೆ ಮುಡಿಯಲು ಎಲ್ಲರೂ ಮುಂದೆ ಬರುವಂತೆ ಅವಳ ಬಳಿ ಸುಳಿಯತೊಡಗುವರು.

೩೧೯. ಆಲಕ್ಕೆ ಹೂವಿಲ್ಲ | ಸಾಲಕ್ಕೆ ಕೊನೆಯಿಲ್ಲ |
ಜಾಲಿಯ ಗಿಡಕ್ಕೆ ಗಂಧಿಲ್ಲ, ದೇನನು |
ಸೂಳೆಗಿಲ್ಲೆಂದ ಸರ್ವಜ್ಞ ||

ಆಲದ ಗಿಡಕ್ಕೆ ಹೂವು, ಸಾಲಕ್ಕೆ ಕೊನೆಯು ಹಾಗೂ ಜಾಲಿಯ ಗಿಡಕ್ಕೆ ವಾಸನೆಯು ಇಲ್ಲದಂತೆ ಸೂಳೆಗೆ (ವೇಶ್ಯೆಗೆ) ದೇವರೇ ಇರುವದಿಲ್ಲ.

೩೨೦. ಕತ್ತೆಯಲಿ ಗುಣವಿಲ್ಲ | ಕತ್ತಿಗೆ ದಯವಿಲ್ಲ |
ಬತ್ತಿದ ಕೆರೆಗೆ ತರುವಿಲ್ಲ, ಸೂಳೆಯರೊ |
ಳುತ್ತಮರು ಇಲ್ಲ ಸರ್ವಜ್ಞ ||

ಕತ್ತೆಯಲ್ಲಿ ಒಳ್ಳೆಯ ಗುಣಗಳು, ಖಡ್ಗಕ್ಕೆ ದಯೆಯು ಹಾಗೂ ಬತ್ತಿದ ಕೆರೆಯ ಸಮೀಪಕ್ಕೆ ದನಗಳು ಸುಳಿಯದಂತೆ ಸೂಳೆಯರಲ್ಲಿ ಉತ್ತಮರೆಂಬುವವರು ಇರುವದೇ ಇಲ್ಲ.

೩೨೧. ಅರಳೆಯಲಿ ರಸವಿಲ್ಲ | ಕರುಳಿಗೆ ನಾಚಿಕೆ ಇಲ್ಲ |
ಮರುಳನಿಗಾರು ಹಿತರಿಲ್ಲ, ಸೂಳೆಯಲಿ |
ಸರಲವೇ ಇಲ್ಲ ಸರ್ವಜ್ಞ ||

ಅರಳೆಯೊಳಗೆ ರಸವಿರುವದಿಲ್ಲ. ಕರುಳಿಗೆ ನಾಚಿಕೆ ಇರುವದಿಲ್ಲ ಹಾಗೂ ಮರುಳು (ಮೂರ್ಖ)ನಿಗೆ ಹಿತಚಿಂತಕರು ಇರುವದಿಲ್ಲ. ಅದರಂತೆ ಸೂಳೆಯಲ್ಲಿ ಸರಳತೆ ಎಂಬುದೇ ಇರುವದಿಲ್ಲ.

೩೨೨. ಕಾಲನಿಗೆ ದಿನವಿಲ್ಲ | ಸಾಲಕ್ಕೆ ಕೊನೆಯಿಲ್ಲ |
ಕಾಲಿಲ್ಲದವಗೆ ಬಲವಿಲ್ಲ ಸೂಳೆಗೆ |
ಶೀಲವೇ ಇಲ್ಲ ಸರ್ವಜ್ಞ ||

ಯಮನಿಗೆ ವೇಳೆ ಎಂಬುದಿಲ್ಲ. ಸಾಲಕ್ಕೆ ಕೊನೆಯೆಂಬುದಿಲ್ಲ, ಹಾಗೂ ಕಾಲುಗಳಿಲ್ಲದವನಿಗೆ ಬಲ (ಬೆಂಬಲ) ವಿಲ್ಲ. ಆದರಂತೆ ಸೂಳೆಗೆ ಶೀಲವೇ ಇರುವುದಿಲ್ಲ.

೩೨೩. ಎಲೆಗೆ ಬೀಜಗಳಿಲ್ಲ | ಮೊಲೆಗೆ ಎಲುವುಗಳಿಲ್ಲ |
ಅಲಗಲಗು ಹಳಚೆ ಮಸೆಯಿಲ್ಲ, ಸೂಳೆಗೆ |
ಕುಲಶೀಲವಿಲ್ಲ ಸರ್ವಜ್ಞ ||

ಎಲೆಗೆ ಬೀಜ (ಬೇಕಾಗಿಲ್ಲ) ಇಲ್ಲ. ಸ್ತನಗಳಿಗೆ ಎಲುವುಗಳಿಲ್ಲ. ಹಾಗೂ ಅಲಗಿಗೆ ಅಲಗು ತಿಕ್ಕಿದರೆ ಹರಿತವಾಗುವದಿಲ್ಲ. ಆದರಂತೆ ಸೂಳೆಗೆ ಕುಲ ಶೀಲಗಳೇ ಇಲ್ಲ.

೩೨೪. ತುಂಬೆಯು ಸೊಪ್ಪಿಂಗೆ | ಇಂಗೇಕೆ ಮೆಣಸೇಕೆ |
ಶೃಂಗಾರವೇಕೆ ಬಡವಂಗೆ, ಸೂಳೆಗೆ |
ನಂಬುಗೆಯುದೇಕೆ ಸರ್ವಜ್ಞ ||

ತುಂಬೆಯ ಸೊಪ್ಪಿನ ಪಲ್ಯಕ್ಕೆ ಇಂಗು-ಮೆಣಸುಗಳು ಅನವಶ್ಯಕ, ಬಡವನಿಗೆ ಶೃಂಗಾರವು ಅನವಶ್ಯಕ. ಅದರಂತೆ ವೇಶ್ಯೆಯಲ್ಲಿ ನಂಬಿಗೆಯನ್ನಿರಿಸುವದು ತಕ್ಕದ್ದಲ್ಲ.

೩೨೫. ಹಕ್ಕಿಯು ಸೂಳೆಯು | ಠಕ್ಕೆರಡು ಒಂದಯ್ಯ |
ಹಕ್ಕಿ ಹಾಲ್ದೆನೆಯು ಹರಿತಿಂದು ಕಿಂಕಿಯುನು |
ಇಕ್ಕಿ ಹೋದಂತೆ ಸರ್ವಜ್ಞ ||

ಹಕ್ಕಿಯು ಹಾಗೂ ಸೂಳೆಯ ಧೈರ್ಯಗಳೊಂದೇ ಇವೆ. ಸೂಳೆಯು ಎಲ್ಲವನ್ನೂ ದೋಚಿಕೊಂಡು ಅವನನ್ನು ಬರಿಗೈಯನ್ನಾಗಿ ಮಾಡಿ ಕೈ ಬಿಡುವಂತೆ ಹಕ್ಕಿ ಹಾಲ್ದೆನೆಯೊಳಗಿನ ಕಾಳನ್ನೆಲ್ಲ ತಿಂದು ಬರೀ ಕಂಕಿಯನು ಮಾತ್ರ ಬಿಟ್ಟುಹೋಗುವದು.

೩೨೬. ಹರಗೋಲು ಸೂಳೆಯು | ತೆರನೆರಡು ಒಂದಯ್ಯ |
ಹರಗೋಲನೇರಿದವನಿಳಿಯೆ, ಬೇರೊಬ್ಬ |
ಹರಿದವರೇರುವಂತೆ ಸರ್ವಜ್ಞ ||

ಹರಗೋಲು (ನಾವೆ) ಹಾಗೂ ಸೂಳೆ ಇವೆರಡೂ ಒಂದೇ ತೆರನಾಗಿವೆ. ( ಸೂಳೆಯ ಮನೆಯೊಳಗಿಂದ ಒಬ್ಬನು ಹೊರಬಿದ್ದೊಡನೆ ಮತ್ತೊಬ್ಬನು ಆ ಮನೆಯೊಳಗೆ ಪ್ರವೇಶಿಸುವಂತೆ ) ಹರಗೋಲನ್ನೇರಿದವನು ಇಳಿದೊಡನೆಯೇ ಮತ್ತೊಬ್ಬನು ಏರುತ್ತಾನೆ.

೩೨೭. ಬೆಳೆಗೆ ಮಳೆ ಬರಲೇಸು | ಗಿಳಿಗೆ ಪಂಜರ ಲೇಸು |
ಸುಳಿಗಾಳಿ ಲೇಸು ಬೆವರಿಂಗೆ, ಸೂಳೆಗೆ |
ಗಳಿಗೆ ಲೇಸೆಂದ ಸರ್ವಜ್ಞ ||

( ಹೊಲದೊಳಗಿನ ) ಬೆಳೆಗೆ ಮಳೆ ಬಂದರೆ ಒಳ್ಳೆಯದು. ಗಿಳಿಗಳಿಗೆ ಪಂಜರವಿದ್ದರೆ ವಿಹಿತವು. ಹಾಗು (ಮೈತುಂಬ) ಬೆವರು ಬಂದಾಗ ಸುಳಿಗಾಳಿಯು ಒಳ್ಳೆಯದು. ಅದರಂತೆ ವೇಶ್ಯೆಗೆ ಗಳಿಕೆಯೇ ಲೇಸು.

೩೨೮. ಕುರುಬರಿಗೆ ಕುರಿಯಾಸೆ | ಮರಿಗಳಿಗೆ ಮೊಲೆಯಾಸೆ |
ಸರುವರಿಗೆ ಮಳೆಯು ಬರುವಾಸೆ, ಸೂಳೆಗೆ |
ಬೆರೆದಾಟದಾಸೆ ಸರ್ವಜ್ಞ ||

ಕುರುಬರಿಗೆ ಕುರಿಗಳ ಆಶೆ, ಮರಿಗಳಿಗೆ (ತಮ್ಮ ತಾಯಿಯ) ಮೊಲೆಯುಣ್ಣುವಾಸೆ ಹಾಗು ಎಲ್ಲರಿಗೂ ಮಳೆಯು ಬರಲೆಂಬ ಆಶೆಯು ಇರುವಂತೆ ಸೂಳೆಗೆ ವಿಟನ ಒಡನಾಟದಾಶೆ ಇರುತ್ತದೆ.

೩೨೯. ಬಿಲ್ಲಾಸೆ ಬೇಡಂಗೆ | ಕೊಲ್ಲಾಸೆ ಕಟುಗಂಗೆ |
ಬೆಲ್ಲದ ಆಸೆ ಬಾಲರಿಗೆ, ಸೂಳೆಗೆ |
ಚಲ್ಲಾಟದಾಸೆ ಸರ್ವಜ್ಞ ||

ಬೇಡರವನಿಗೆ ಬಿಲ್ಲಿನ ಆಸೆ, ಕಟುಕಗೆ ಪ್ರಾಣಿಗಳನ್ನು ಕೊಲ್ಲುವ ಆಸೆ ಹಾಗು ಬಾಲಕರಿಗೆ ಬೆಲ್ಲದ ಆಸೆ ಇರುವದು. ಆದರಂತೆ ಸೂಳೆಗೆ ಚಲ್ಲಾಟದಾಸೆ.

೩೩೦. ಬಳ್ಳಿ ತೋಟಿಗ ಬಲ್ಲ। ಎಳ್ಳು ಗಾಣಿಗ ಬಲ್ಲ।
ಕಳ್ಳರನು ಬಲ್ಲ ತಳವಾರ, ಸೂಳೆ ಹಣ।
ವುಳ್ಳನರಿದಿಹಳು ಸರ್ವಜ್ಞ ॥

ಬಳ್ಳಿಗಳ ಬಗ್ಗೆ ತೋಟಿಗನು, ಎಳ್ಳುಗಳ ಬಗ್ಗೆ ಗಾಣಿಗನು ಹಾಗು ಕಳ್ಳರ ಬಗ್ಗ ತಳವಾರನು ಬಲ್ಲಂತೆ ಸೂಳೆಯು ಹಣವುಳ್ಳವರನ್ನು ಬಲ್ಲಳು.

೩೩೧. ಬೆಲೆವೆಣ್ಣಿನಾ ಬಾಯಿ। ಹಲವೆಂಜಲೆನಬೇಡ।
ಹುಳಿ ಮುಟ್ಟೆ ಕಿಲುಬು ಕೆಡುವಂತೆ, ಬಾಯುವಳ।
ಎಲೆ ಮೆಲಲು ಶುದ್ಧ ಸರ್ವಜ್ಞ ॥

ಬೆಲೆವೆಣ್ಣಿನ (ವೇಶ್ಯೆಯ) ಬಾಯಿಯು ಹಲವರ ಎಂಜಲು ಎಂದು ಭಾವಿಸಬೇಡ. ಹುಳಿ ತಗುಲಿದೊಡನೆ (ಪಾತ್ರೆಯ) ಕಿಲುಬು ಬಿಟ್ಟೋಡಿದಂತೆ (ಅವಳೊಮ್ಮೆ) ಎಲೆ ಅಡಿಕೆಯನ್ನು ತಿನ್ನಲು (ಅವಳ) ಬಾಯಿಯು ಶುದ್ಧವಾಗುವದು.

೩೩೨. ಹಣವ ಕಂಡಾಕ್ಷಣವೇ। ಗುಣವಂತೆಯಾಗುವಳು।
ಹಣಹೋದ ವಿಟನು ಸಾರಿದರೆ ಸೂಳೆಗೆ।
ಹೆಣನ ಕಂಡಂತೆ ಸರ್ವಜ್ಞ ॥

(ಸೂಳೆಯು) ಹಣವನ್ನು ಕಂಡೊಡನೆ ಮಹಾ ಗುಣವಂತೆಯಾಗುವಳು. (ಒಂದು ವೇಳೆ ಅವಳಿಗಾಗಿಯೇ) ಹಣವನ್ನು ಕಳೆದುಕೊಂಡು ಬರಿಗೈಯಾದಂಥ ವಿಟನು ಬಂದರೆ ಅವಳು ಅಂಥವನನ್ನು ಹೆಣದಂತೆ ನೋಡುವಳು.

೩೩೩. ಉರುಂಬ ಬಾವಿಂಗೆ। ಊರ ಹೆಬ್ಬಾಗಿಲಿಗೆ।
ಆರನೆಯು ಮರದ ನೆರಳಿಂಗೆ, ಸೂಳೆಗೆ।
ಹೊರುವವನ ಹೆಡ್ಡ ಸರ್ವಜ್ಞ ॥

(ಇಡಿಯ) ಊರ ಜನರೇ ಉಪಯೋಗಿಸುವಂಥ ಭಾವಿಗಾಗಿ, ಊರಿನ ಹೆಬ್ಬಾಗಿಲಿಗಾಗಿ ಹಾಗು ಎಲ್ಲರೂ ವಿಶ್ರಾಂತಿಯನ್ನು ಪಡೆಯುವಂಥ ದೊಡ್ಡ ಮರಕ್ಕಾಗಿ ಆದಂತೆ ಸೂಳೆಗಾಗಿ ಒದಿನಾಡುವಂಥವನು ಮಹಾ ಮೂರ್ಖನು.

೩೩೪. ಸೂಳೆಯೊಸು ಹೋದವನ | ಬಾಳುವೆಯನೇನೆಂಬೆ |
ಮೂಳನಾಯಾಗಿ, ಹುಣ್ಣೊಡೆದು, ಹಲ್ಲುದುರಿ |
ಗೋಳಾಡಿಸಾವ ಸರ್ವಜ್ಞ ||

ಸೂಳೆಯ ಸಂಗವನ್ನು ಮಾಡಿದವನ ಬಾಳುವೆಯ ಪರಿಚಯವನ್ನು ಹೇಳುವದು ಅಸಾಧ್ಯ. ಅವನು ಮೂಳನಾಯಿಯಂತಾಗಿ, ಹುಣ್ಣು ಹಚ್ಚಿಕೊಂಡು ಹಲ್ಲುಗಳು ಉದುರಿಬಿದ್ದು ಗೋಳಾಡಿ ಸಾಯುವನು.

೩೩೫. ಕುಲವನ್ನು ಕೆಡಿಸುವದು | ಛಲವನ್ನು ಬಿಡಿಸುವದು |
ಹೊಲೆಯನ ಮನೆಹೊಗಿಸುವದು, ಕೂಳಿನ |
ಬಲುಮೆ ನೋಡೆಂದ ಸರ್ವಜ್ಞ ||

ಮನುಷ್ಯನ ಕುಲವನ್ನು ಕೆಡಿಸುವ (ಅವನಲ್ಲಿಯ) ಛಲವನ್ನು ಬಿಡಿಸುವ ಹಾಗೂ (ಪ್ರಸಂಗ ಬಂದರೆ) ಹೊಲೆಯನ ಮನೆಯನ್ನೂ ಪ್ರವೇಶಿಸಲು ಹಿಂದೆ-ಮುಂದೆ ನೋಡದ ಅನ್ನದ ಪ್ರಭಾವವು ಬಹಳ ದೊಡ್ಡದು.

೩೩೬. ಕನ್ನವನು ಕೊರಿಸುವದು | ಭಿನ್ನವನು ತರಿಸುವದು |
ಬನ್ನದಕರಗೆ ಒಯ್ಯುವದು ಒಂದು ಸೇ |
ರನ್ನ ನೋಡೆಂದ ಸರ್ವಜ್ಞ ||

(ಅನ್ಯರ ಮನೆಗೆ) ಕನ್ನವನ್ನಿಕ್ಕಲು ಪ್ರೇರೇಪಿಸುವದು, (ಪರಸ್ಪರರಲ್ಲಿ) ಭಿನ್ನ ಭೇದವನ್ನು ಹುಟ್ಟಿಸುವದು, ಕೊನೆಗೊಮ್ಮೆ ಜೇಲಿನ ಬಾಗಿಲಿಗೆ ಒಯ್ಯುವಂಥದು (ಕೇವಲ) ಒಂದುಸೇರು ಅನ್ನವು ಮಾತ್ರ.

೩೩೭. ಉಗುರ ತಿದ್ದಿಸು | ಮುಗುಳು ನಗೆ ನಗಿಸುವದು |
ಹಗರಣದ ಮಾತನಾಡಸುವದು, ಬೋನದ |
ಬಗೆಯ ನೋಡೆಂದ ಸರ್ವಜ್ಞ ||

ಉಗುರು ತಿದ್ದಿಸಲಿಕ್ಕೆ ಹಚ್ಚುವದು, ಮುಗುಳುನಗೆ ನಗೆಸುವದು ಹಾಗೂ (ಎಂಥವರೊಂದಿಗೂ) ಪ್ರೀತಿಯ ಮಾತುಗಳನ್ನಾಡಿಸುವಂಥ ಅನ್ನದ ಮಹಿಮೆಯು ಹೇಳಲಸದಳವಾದಂಥದು

೩೩೮. ಬಟ್ಟೆಯನು ಗುಡಿಸುವದು | ಸೆಟ್ಟೆಯೆಂಡೆಸಿಸುವದು |
ಕಟ್ಟಾಣಿ ಸತಿಯ ಕುಣಿಸುವದು ತಾ ಚೋಟು |
ಹೊಟ್ಟೆ ಕಾಣಯ್ಯ ಸರ್ವಜ್ಞ ||

ಮಾರ್ಗವನ್ನು ಗುಡಿಸಲು ಹಚ್ಚುವದು, ಸೆಟ್ಟೆಯೆಂದೆನಿಸುವದು, ನಲುಮೆಯ ಸತಿಯನ್ನು (ಪತಿಯು ಹೇಳಿದಂತೆ) ಕುಣಿಯಲು ಹಚ್ಚುವದು ಆ ಚೋಟು ಹೊಟ್ಟೆಯೇ ಹೊರತು ಬೇರೇನೂ ಅಲ್ಲ.

೩೩೯. ನಿದ್ದೆಗಳು ಬಾರವು | ಬುದ್ಧಿಗಳು ತೋಚವು |
ಮುದ್ದಿನ ಮಾತು ಸೊಗಸದು, ಬೋನದ |
ಮುದ್ದೆ ತಪ್ಪಿದರೆ ಸರ್ವಜ್ಞ ||

ಬೋನದ ಮುದ್ದೆಯು (ಹೊಟ್ಟೆಯೊಳಗೆ ಬೀಳಲು) ತಪ್ಪಿದರೆ ನಿದ್ರೆಯು ಬರಲಾರದು, ಬುದ್ಧಿಗೆ ಏನೆಂದೂ ತೋಚಲಾರದು, ನಲುಮೆಯ ಮಾತುಗಳು ಕೂಡ ರುಚಿಸಲಾರವು. (ಅಂದಾಗ) ಅದರ ಮಹಿಮೆಯು ಎಂತಿರಬೇಕು ?

೩೪೦. ಕಣ್ಣುಗಳು ಇಳಿಯುವವು | ಬಣ್ಣಗಳು ಅಳಿಯುವವು |
ಹುಣ್ಣಿಮೆಯು ಹೋದ ಶಶಿಯಂತೆ ಅಶನವನು |
ಉಣದವ ನೋಡಲು ಸರ್ವಜ್ಞ ||

ಅನ್ನವು ಉದರದೊಳಗೆ ಹೋಗದಿದ್ದರೆ, ಕಣ್ಣುಗಳು ಇಳಿಯುವವು, (ಮುಖದ) ಬಣ್ಣವೂ ಬದಲಾಗುವದು. ಹುಣ್ಣಿಮೆ ಕಳೆದ ಚಂದ್ರನಂತೆ ಅವನು ಕ್ಷಯಿಸುತ್ತ ಹೋಗುವನು.

೩೪೧. ಆಳು ಇದ್ದರೆ ಅರಸು | ಕೂಳು ಇದ್ದರೆ ಬಿರುಸು |
ಆಳು-ಕೂಳು ಮೇಳಿಲ್ಲದವನ ಮನೆಯು |
ಬಾಳುಗೇಡೆಂದ ಸರ್ವಜ್ಞ ||

(ಮನೆಯಲ್ಲಿ) ಆಳು ಇದ್ದರೆ (ಮನೆಯೊಡೆಯನು) ಅ ರ ಸ ನು. (ಹೊಟ್ಟೆಯಲ್ಲಿ) ಕೂಳಿದ್ದರೆ ಅವನು ಬಿರುಸಾಗುವನು. ಆಳು-ಕೂಳುಗಳ ಮೇಳವಿಲ್ಲದವನ ಮನೆಯು ಏತಕ್ಕೂ ಬೇಡ.

೩೪೨. ಕೂಳಿಲ್ಲದವನೊಡಲು | ಹಾಳು ಮನೆಯಂತಕ್ಕು |
ಹೇಳದ ಹೊಕ್ಕ ರುಜೆಗಳಿಂ ತನುವೊಡೆದು |
ಹಾಳೆಯಂತಕ್ಕು ಸರ್ವಜ್ಞ ||

ಕೂಳಿಲ್ಲದವನ ಹೊಟ್ಟೆಯು ಹಾಳುಮನೆಯಂತಾಗುವದು. (ಅಲ್ಲದೆ ಅದು) ಗೊತ್ತಾಗದೆ ಹೊಕ್ಕಂಥ ರೋಗಗಳಿಂದ ತನುವಿನ ಮೇಲೆ ಪರಿಣಾಮ ವಾಗಿ ತೆಳುವಾದ ಗಾಜಿನಂತಾಗುವದು.

೩೪೩. ಹೊತ್ತದೆ ಹೊಗೆಯದೆ | ಮತ್ತೆ ಉರಿ ಏಳದೆ |
ನಿತ್ಯವೂ ಹೊತ್ತಿ ಕಿಚ್ಚಿಲ್ಲದಾ ಕಿಚ್ಚು |
ತುತ್ತ ಬೆಂದಿರ್ಪುದು ಸರ್ವಜ್ಞ ||

ಬೆಂಕಿಯು ಹೊತ್ತದೆ, ಹೊಗೆಯೇಳದೆ, ಉರಿಯು ಕೂಡ ಏಳದೆ, ನಿತ್ಯವೂ ಹೊತ್ತುವಂತೆ ಆ ಬೆಂಕಿಯಿಲ್ಲದಂಥ ( ಹೊಟ್ಟೆಯೊಳಗಿನ ) ಕಿಚ್ಚು ಕೂಳನ್ನು ಬೇಯಿಸುವದು.

೩೪೪. ಎತ್ತ ಹೋದರು ಒಂದು | ತುತ್ತು ಕಟ್ಟಿರಬೇಕು |
ತುತ್ತೊಂದು ಗಳಿಗೆ ತಡೆದಿಹರೆ, ಕೈಹಿಡಿದು |
ಎತ್ತಬೇಕೆಂದ ಸರ್ವಜ್ಞ ||

ಎತ್ತ ಕಡೆಗೆ ಹೋದರೂ (ತನ್ನ ಹಿಂದೆ) ಅನ್ನವನ್ನು (ಬುತ್ತಿ) ಕಟ್ಟಿ ಕೊಂಡು ಹೋಗಬೇಕು. ಅನ್ನವು ಒಂದು ಗಳಿಗೆ ಸಿಗದೇ ಹೋದರೆ ( ಕುಳಿತುಕೊಂಡವನನ್ನು ) ಕೈ ಹಿಡಿದು ಎಬ್ಬಿಸಬೇಕಾಗುವದು.

೩೪೫. ತಿತ್ತಿ ಹೊಟ್ಟೆಗೆ ಒಂದು | ತುತ್ತು ತಾ ಹಾಕುವದು |
ತುತ್ತೆಂಬ ಶಿವನ ತೊರದಿಹರೆ, ಸುಡುಗಾಡಿ |
ಗೆತ್ತಬೇಕೆಂದ ಸರ್ವಜ್ಞ ||

ಹೊಟ್ಟೆಗೆ ( ಹೇಗಾದರೂ ಮಾಡಿ ) ಒಂದು ತುತ್ತು ಅನ್ನವನ್ನು ಹಾಕಲೇಬೇಕು. ಅನ್ನದೇವನನ್ನು ತೊರೆದುದೇ ಆದರೆ (ಅಂಥವನನ್ನು) ಸ್ಮಶಾನಕ್ಕೆ ಒಯ್ಯಬೇಕಾಗುವದು.

೩೪೬. ಅನ್ನದೇವರ ಮುಂದೆ | ಇನ್ನುದೇವರು ಉಂಟೆ |
ಅನ್ನವುಂಟಾದರುಣಲುಂಟು ಜಗದೊಳಗೆ |
ಅನ್ನವೇ ದೈವ ಸರ್ವಜ್ಞ ||

ಅನ್ನ ದೇವರಿಗಿಂತ ಹೆಚ್ಚಾದ ದೇವರು ಇನ್ನಿಲ್ಲವೇ ಇಲ್ಲ. ಅನ್ನ ವುಂಟಾದರೆ ಉಣಲಿಕ್ಕೆ ಉಂಟು, ಜಗತ್ತಿನೊಳಗೆ ಅನ್ನವೇ ದೈವವು.

೩೪೭. ಉಂಡು ಕೆಂಡವ ಕಾಸಿ | ಉಂಡುಶತಪಥ ನಡೆದು |
ಉಂಡೆಡದ ಮಗ್ಗುಲಲಿ ಮಲಗೆ ವೈದ್ಯನ |
ಭಂಡಾಟವಿಲ್ಲ ಸರ್ವಜ್ಞ ||

ಊಟ ಮಾಡಿದ ನಂತರ ಬೆಂಕಿಯಿಂದ ಕಾಸಿದರೆ, ಊಟದ ನಂತರ ನೂರು ಹೆಜ್ಜೆ ನಡೆದು, ಆ ಮೇಲೆ ಎಡಪಕ್ಕಕ್ಕೆ ಮಲಗಿದರೆ ವೈದ್ಯನ ಅವಶ್ಯಕತೆಯಿಲ್ಲ.

೩೪೮. ಮಾತಿನಿಂ ನಗೆನುಡಿಯು | ಮಾತಿನಿಂ ಹಗೆಕೊಲೆಯು |
ಮಾತಿನಿಂ ಸರ್ವಸಂಪದವು ಲೋಕಕ್ಕೆ |
ಮಾತೆ ಮಾಣಿಕವು ಸರ್ವಜ್ಞ ||

ಮಾತಿನಿಂದ ನಗುತ್ತಲಿರಬಹುದು, ಮಾತಿನಿಂದಲೇ ವೈರತ್ವವೂ ಬೆಳೆಯುವದು, ಮಾತಿನಿಂದ ಸರ್ವ ಸಂಪತ್ತನ್ನೂ ಗಳಿಸಬಹುದು, ಆದುದರಿಂದ ಒಳ್ಳೇ ಮಾತುಗಳು ಮಾಣಿಕವಿದ್ದಂತೆ.

೩೪೯. ಮಾತುಬಲ್ಲಾತಂಗೆ | ಮಾತೊಂದು ಮಾಣಿಕವು |
ಮಾತತಾನರಿಯದಧಮಂಗೆ ಮಾಣಿಕವು |
ತೂತುಬಿದ್ದಂತೆ ಸರ್ವಜ್ಞ ||

ಮಾತು ಬಲ್ಲ ಜಾಣನಿಗೆ ಮಾತೇ ಮಾಣಿಕವು (ಅಂದರೆ ಆಭರಣವು) ಮಾತನರಿಯದ ಅಧಮನ ಜೀವನವೇ ಒಂದು ಕುಂದು (ನಿಸ್ಸಾರ.)

೩೫೦. ಎತ್ತೊಮ್ಮೆ ಹೂಡುವದು | ಮತ್ತೊಮ್ಮೆ ಹರಗುವದು |
ಬಿತ್ತೊಮ್ಮೆ ಹರಗಿ ಕಳೆದೆಗೆದರಾ ಬೆಳೆಯು |
ಎತ್ತಗೈಯುದ್ಧ ಸರ್ವಜ್ಞ ||

ಹೊಲದಲ್ಲಿ ಮೊದಲು ಎತ್ತು ಹೂಡಿ ಹರಗಬೇಕು. ಆ ಮೇಲೆ ಬೀಜ ಬಿತ್ತಬೇಕು, ಬಿತ್ತಿದ ಮೇಲೆ ಮತ್ತೊಮ್ಮೆ ಹರಗಿದರೆ ಆ ಪೈರು ಎತ್ತ ಗೈಯುದ್ದ ಬೆಳೆದು ಬರುವದು.

೩೫೧. ಕೆಂದಸಾದೆತ್ತಾಗಿ | ಮುಂದುವ ಮಗನಾಗಿ |
ಕುಂದದಲೆ ಗೈವ ಸೊಸೆಯಾದರಾಮನೆಗೆ |
ಬಿಂದಿಗೆಯ ಹೊನ್ನು ಸರ್ವಜ್ಞ ||

ಸಭ್ಯವಿರುವ ಕಂದುಬಣ್ಣದ ಎತ್ತು ಇದ್ದು ಸಾಹಸದಿಂದ ದುಡಿವ ಮಗ, ಓರಣದಿಂದ ಕೆಲಸ ಮಾಡುವ ಸೊಸೆಯು ಇದ್ದರೆ ಆ ಮನೆಗೆ ಬಿಂದಿಗೆಯು ತುಂಬುವಷ್ಟು ಬಂಗಾರದ ಆಧಾಯವಾಗುವದು.

೩೫೨. ಬಂಡು ಹೆಂಡತಿಯಾಗಿ ತುಂಡೊಬ್ಬ ಸೊಸೆಯಾಗಿ |
ಕಂಡಲ್ಲಿ ಹರಿವ ಮಗನಾದರಾಮನೆಗೆ |
ದಂಡ ತಪ್ಪುವುದೆ ? ಸರ್ವಜ್ಞ ||

ಜಗಳಗಂಟಿ ಹೆಂಡತಿ, ಕಡವನದಂತೆ ಬೆಳೆದು ಆಲಸಿಯಾದ ಸೊಸೆ, ಅನೇಕ ಹೊರ ಹವ್ಯಾಸಗಳುಳ್ಳ ಮಗ ಹೀಗೆ ಇದ್ದರೆ ಆ ಮನೆತನಕ್ಕೆ ಲುಕ್ಸಾನವೆಂಬುವದು ತಪ್ಪುವದೇ ಇಲ್ಲ.

೩೫೩. ಕಡಲೆಯನು ಗೋದಿಯನು | ಮಡಕುದ್ದು ಬೆಳೆದರೂ |
ಸುಡಬೇಕು ನಾಡೆಂಡವನ ಬಾಯೊಳಗೆ |
ಪುಡಿಗಡಲು ಬೀಳ್ಗು ಸರ್ವಜ್ಞ ||

ಕಡ್ಲಿಯನ್ನು, ಗೋದಿ, ಮಡಕಿ, ಉದ್ದು ಬೆಳೆಯುವಂಥ ನಾಡಿದ್ದರೂ ಅದನ್ನು ತೆಗಳಿ ಮಾತನಾಡುವವನ ಬಾಯಿಗೆ ಮಣ್ಣು ಬೀಳಲಿ (ಅರ್ಥಾತ್ ಅವನು ಬುದ್ಧಿಹೀನನು ಎಂದರ್ಥ.)

೩೫೪. ರಾಗಿಯನು ಉಂಬುವ ನಿ | ರೋಗಿ ಎಂದೆನಿಸುವನು |
ರಾಗಿಯು ಭೋಗಿಗಳಿಗಲ್ಲ ಬಡವರಿ |
ಗಾಗಿ ಬೆಳೆದಿಹುದು ಸರ್ವಜ್ಞ ||

ರಾಗಿಯಿಂದ ತಯಾರಿಸಿದ ಅಡಿಗೆಯನ್ನು ಉಣ್ಣುವವನು ಸದಾ ಆರೋಗ್ಯದಿಂದಿರುವನು. ಅದು ಬಡವರ ಆಹಾರವಾಗಿ ಬೆಳೆಯುವದು, ಶ್ರೀಮಂತರಿಗಾಗಿ ಮಾತ್ರ ಇರುವದಿಲ್ಲ.

೩೫೫. ತುರುಕರಿಲ್ಲದ ಊರು | ನರಕ ಭಾಜನವಕ್ಕು |
ತುರುಕರುಂಟಾದರುಣಲುಂಟು ಜಗಕೆಲ್ಲ |
ತುರುಕರುವೆ ದೈವ ಸರ್ವಜ್ಞ ||

ಆಕಳುಗಳು, ಆಕಳ ಕರುಗಳು ಇಲ್ಲದ ಊರು ನರಕವಿದ್ದಂತೆ— ಅವುಗಳಿದ್ದರೆ ಮಾತ್ರ (ಹೈನ) ಊಟಕ್ಕೆ ಸೊಗಸು. ಆದುದರಿಂದ ಆಕಳು, ಆಕಳ ಕರಗಳು ಊರಿಗೆ ದೇವರಿದ್ದಂತೆ.

೩೫೬. ವಿದ್ಯೆಯುಳ್ಳವನ ಮುಖವು | ಮುದ್ದು ಬರುವಂತಿಕ್ಕು |
ವಿದ್ಯೆವಿಲ್ಲದವನ ಬರಿಮುಖವು ಹಾಳೂರ |
ಹದ್ದಿನಂತಿಕ್ಕು ಸರ್ವಜ್ಞ ||

ವಿದ್ಯಾಪ್ರವೀಣನಾದವನ ಮುಖವು ಮೋಹಕವಾಗಿರುವದು, ವಿದ್ಯೆಯಿಲ್ಲದವನ ದುರ್ಲಕ್ಷಣವಾದ ಮೊಗವು ಹಾಳುಬಿದ್ದ ಊರಲ್ಲಿ ಹಾರಾಡುವ ಹದ್ದಿನ ಮೊಗದಂತೆ (ಅಮಂಗಲವಾಗಿ) ಇರುವದು-

೩೫೭. ಅಕ್ಕರವು ಲೇಖಕ್ಕೆ | ತರ್ಕತಾವಾದಕ್ಕೆ |
ಮಿಕ್ಕ ಓದುಗಳು ತಿರುಪೆಗೆ ಮೋಕ್ಷಕರ |
ಡಕ್ಕರವೇ ಸಾಕು ಸರ್ವಜ್ಞ ||

ಲೇಖನವನ್ನು ಬರೆಯಲು ಅಕ್ಷರಗಳ ಜ್ಞಾನವಿರಬೇಕು, ವಾದಕ್ಕೆ ತರ್ಕಶಾಸ್ತ್ರ ಪ್ರವೀಣನಿರಬೇಕು, ಭಿಕ್ಷೆ ಬೇಡಲು ಮಿಕ್ಕ ವಿದ್ಯೆಗಳೇ ಗತಿ. ಆದರೆ ಮೋಕ್ಷಪ್ರಾಪ್ತಿಗೆ ಎರಡೇ ಅಕ್ಷರಗಳು (ಭಕ್ತಿ) ಸಾಕು.

೩೫೮. ಅವಯವಗಳೆಲ್ಲರಿಗೆ | ಸಮನಾಗಿ ಇರುತಿರಲು |
ಭವಿ, ಭಕ್ತ, ಶ್ವಪಚ, ಶೂದ್ರರಿವರಿತೆಂಬ |
ಕವನವೆತ್ತಣದು ಸರ್ವಜ್ಞ ||

ಮನುಷ್ಯರೆಂಬುವವರೆಲ್ಲರಿಗೂ ಒಂದೇ ರೀತಿಯ ಅವಯವಗಳಿರುವಾಗ ಇವನು ಪೂಜ್ಯ, ಇವನು ಭಕ್ತ, ಇವನು ಹೇಸಿ, ಕೀಳು, ಶೂದ್ರರೆಂಬ ಭೇದಭಾವದ ರಾಗವು ಎಲ್ಲಿಂದ ಹುಟ್ಟಿತು ?

೩೫೯. ಹಸಿವು ತೃಷೆ ನಿದ್ರೆಗಳು | ವಿಷಯು ಮೈಥುನಬಯಕೆ |
ಪಶುಪಕ್ಷಿ ನರಗೆ ಸಮನಿರಲು ಕುಲವೆಂಬ |
ಘುಸಣೆಯೆತ್ತಣದು ಸರ್ವಜ್ಞ ||

ಪಶು, ಪಕ್ಷಿ ಮತ್ತು ಮನುಷ್ಯರಲ್ಲಿ ಕೂಡ ಹಸಿವು, ನೀರಡಿಕೆ, ನಿದ್ರೆ, ಆಶೆ, ಮೈಥುನ, ಅಭಿಲಾಷೆಗಳು ಇದ್ದೇ ಇರುವವು. ಅಂದಬಳಿಕ 'ಕುಲ' ಎಂಬ ತಿಕ್ಕಾಟವು ಎಲ್ಲಿಂದ ಪ್ರಾರಂಭವಾಯಿತು.

೩೬೦. ಯಾತರದು ಹೂವೇನು | ನಾತರದು ಸಾಲದೇ ?
ಜಾತಿ ವಿಜಾತಿಯೆನಬೇಡ ದೇವನೊಲಿ |
ದಾತನೇ ಜಾತ ಸರ್ವಜ್ಞ ||

ಯಾವ ಹೆಸರಿನ ಹೂವಿದ್ದರೇನು ? ಸುಗಂಧ ಬೀರಿದರೆ ಸಾಕು. ಅದ ರಂತೆ ಈ ಜಾತಿ ಆ ಜಾತಿಯವನೆಂದು ಎಣಿಸಬೇಡ. ದೇವರನ್ನು ಒಲಿಸಿ ಕೊಂಡವನೇ ಶ್ರೇಷ್ಠ ಜಾತಿಯವನೆಂದು ತಿಳಿ.

೩೬೧. ಮದ್ಯಪಾನವಮಾಡಿ | ಇದ್ದುದೆಲ್ಲವನೀಗಿ |
ಬಿದ್ದುಬರುವವನ ಸದ್ದಡಗಿ ಸಂತಾನ |
ವೆದ್ದುಹೋಗುವದು ಸರ್ವಜ್ಞ ||

ಸೆರೆ ಶಿಂದಿ ಕುಡಿತದಿಂದ ಇದ್ದಬಿದ್ದ ಧನವನ್ನೆಲ್ಲ ಕಳೆದುಕೊಂಡು ಬಿದ್ದುಬಿಟ್ಟರುವಂಥವನ ಸಕಲ ವ್ಯವಹಾರ, ಸಾಮರ್ಥ್ಯ ಮೊದಲಾದವುಗಳು ಹೋಗುವವಲ್ಲದೇ ಅವನ ವಂಶವೇ ಹಾಳಾಗಿ ಹೋಗುವದು

೩೬೨. ಭಂಗಿಯನು ಸೇದುವನ | ಭಂಗವನು ಏನೆಂಬೆ ?
ಭಂಗಿಯ ಗುಂಗು ತಲೆಗೇರಲಾಡುವ |
ಮಂಗನಂತಿಹನು ಸರ್ವಜ್ಞ ||

ಗಾಂಜಾ ಮೊದಲಾದ ಅಮಲೇರುವ ದ್ರವ್ಯಗಳನ್ನು ಸೇದುವವನ ಪಾಡನ್ನು ಏನು ಹೇಳುವದು! ಇವುಗಳ ಗುಂಗು ತಲೆಗೇರಿದಾಗ ಮಂಗನಂತೆ ಜಿಗಿದಾಡಿ ನಿತ್ರಾಣನಾಗುವನು.

೩೬೩. ಸುರೆಯ ಸೇವಿಸುವವನ | ಸುರಿಗೆಯನು ಪಿಡಿದವನ |
ದೊರೆಯೊಲುಮೆಗಾಗಿ ಹೆಣಗುವವನ ಕಾಯುವದು |
ಸೊರಗಿಸಾಯುವದು ಸರ್ವಜ್ಞ ||

ಮಧ್ಯಕುಡಿಯುವಂಥವನ, ಖಡ್ಗಧಾರಿಯು, ಮತ್ತು ತನ್ನ ಮೇಲಧಿಕಾರಿಯ ( ಅಥವಾ ಅರಸು ) ಪ್ರೀತಿ ಸಂಪಾದನೆಗಾಗಿ ಹೆಣಗುತ್ತಿರುವವನ ದೇಹವು ಸೊರಗಿ ಕೃಶವಾಗುವದು.

೩೬೪. ಸುರೆಯು ಸೇವಿಸುವಂಗೆ | ಸಿರಿಗರ್ವಪಿಡಿದಂಗೆ |
ದೊರೆಯಲ್ಲಿ ತೇಜಪಡೆದಂಗೆ ಶಿರವಿಹುದು |
ಸ್ಥಿರವಲ್ಲ ನೋಡ ಸರ್ವಜ್ಞ ||

ಸೆರೆಕುಡಿದು ಮತ್ತಾದವನ. ಸಿರಿವಂತಿಕೆಯಿಂದ ಸೊಕ್ಕಿದವನ, ರಾಜರಲ್ಲಿ ಸ್ಥಾನ ಪಡೆದವನ ಶಿರವು ಯಾವಾಗ ಹಾರಿ ಕೆ ಳ ಗು ರು ಳೀ ತೆಂ ಬ ನಿಯಮವಿಲ್ಲ.

೩೬೫. ಪವನಸಪರಿಯುದಂಗೆ ಶಿವನು ಸಾಧಿಸಲಕ್ಕು |
ಭವನವಾರೆ ಹರಿದು ಸುಖಿಸುವೊಡೆ ಅವ ಸದಾ
ಶಿವನು ತಾನಕ್ಕು ಸರ್ವಜ್ಞ ||

ಹವೆಯಂತೆ ಚಿತ್ತ ಚಂಚಲವಿರುವದೆಂದು ತಿಳಿದವನೂ, ಮತ್ತು ಸಂಸಾರ ಬಂಧನವನ್ನು ಹರಿದೊಗೆದು ಸುಖದಿಂದ ಇದ್ದವನೂ, ಶಿವಸಾಯುಜ್ಯವನ್ನು ಸಾಧಿಸಿ ಕೊನೆಗೆ ಶಿವನೇ ಆಗುತ್ತಾನೆ.

೩೬೬. ಮೆಟ್ಟಿಪ್ಪುದಾಸೆಯನು | ಕಟ್ಟಿಪ್ಪುದಿಂದ್ರಿಯವ |
ತೊಟ್ಟಿಪ್ಪುದುಳ್ಳ ಸಮತೆಯನು ಶಿವಪದವು |
ಮುಟ್ಟಿಪ್ಪುದಯ್ಯ ಸರ್ವಜ್ಞ ||

ಸಕಲ ಆಶೆ–ಆಕಾಂಕ್ಷೆಗಳನ್ನು ಮೆಟ್ಟಿ ತುಳಿದು, ಸಂಸಾರ ಸುಖವನ್ನು ಕಟ್ಟಿ ಬಿಸುಟು, ಎಲ್ಲರೂ ತನ್ನ ಸಮರೆಂಬ ಭಾವವನ್ನು ತಳದರೆ ಅವನು ಶಿವಸಾಯುಜ್ಯವನ್ನು ಪಡೆಯುತ್ತಾನೆ.

೩೬೭. ನುಡಿಯಲ್ಲಿ ಎಚ್ಚತ್ತು | ನಡೆಯಲ್ಲಿ ತಪ್ಪಿದರೆ |
ಹಿಡಿದಿರ್ದ ಲಿಂಗ ಹೊಡಮರಳಿ ಕಚ್ಚುವ |
ಹೆಡೆನಾಗ ನೋಡಾ ಸರ್ವಜ್ಞ ||

ಎಚ್ಚರಪೂರ್ವಕವಾಗಿ ಮಾತಾಡಿದರೂ, ಆಡಿದಂತೆ ನಡೆಯದಿದ್ದರೆ ಪೂಜೆ ಮಾಡಿ ಒಲಿಸಿಕೊಂಡ ಲಿಂಗವು ಸಹ ( ಅಂದರೆ ಶಿವನು ) ಸಿಟ್ಟಿಗೆದ್ದು ಹೊರಳಿನಿಂತು ಹೆಡೆತೆರೆದು ನಾಗರಹಾವು ಕಚ್ಚಿದ ಪರಿಣಾಮವಾಗುವದು.

೩೬೮. ಸಲ್ಲೆಯೊಲ್ಲೆಂಬುವರಾ | ಸೊಲ್ಲ ನಾಲಿಗೆ ಹೊಲೆಯು |
ಬಲ್ಲಿದಶ್ರವಣ, ಸನ್ಯಾಸಿಯಿವರುಗಳು |
ಎಲ್ಲಿ ಉದಿಸಿದರು ಸರ್ವಜ್ಞ ||

'ಹೆಂಗಸಿನ ಸಹವಾಸವೇ ಬೇಡ' ಎಂದು ನುಡಿಯುವವರ ನಾಲಿಗೆಯೇ ಶ್ವಪಚವಾದುದು. ಮಹಾಪಂಡಿತನಾದ ಶ್ರವಣನೇ ಮೊದಲಾದ ಸಕಲ ಸನ್ಯಾಸಿಗಳು ಎಲ್ಲಿಂದ ಈ ಭೂಮಿಗವತರಿಸಿದರು. (ಸ್ತ್ರೀ ಗರ್ಭದಿಂದಲೇ ಬಂದರೆಂಬರ್ಥ.)

೩೬೯. ಸರ್ವಜ್ಞನೆಂಬವನು | ಗರ್ವದಿಂದಾವನೇ ?
ಸರ್ವರೊಳೆಂದೊಂದು ನುಡಿಗಲಿತು, ವಿದ್ಯೆಯು |
ಪರ್ವತವೇ ಆದ ಸರ್ವಜ್ಞ ||

ಅಹಂಕಾರದಿಂದ ತಾನು ಸಕಲವಿದ್ಯಾ ಪಂಡಿತನಾಗಲಿಲ್ಲ, ಸಕಲರು ನುಡಿಯುತ್ತಿರುವ ಮಾತನ್ನು ಆಲಿಸಿ ಪರ್ವತದಷ್ಟು ವಿದ್ಯೆಗಳಿಸಿದನು.

೩೭೦. ಬಡವನ ಹೆಂಡತಿಯು | ಕಡುಚಲುವೆಯಾದರೆ |
ನಡುಬೀದಿಯೊಳಗೆ ದವನವನು ಬಿತ್ತಲು |
ಮುಡಿಯದವರಾರು ಸರ್ವಜ್ಞ ||

ಸಾರ್ವಜನಿಕ ಸ್ಥಳದಲ್ಲಿ ದವನವನು ಬಿತ್ತಿ ಬೆಳೆದರೆ ಬಂದವರೆಲ್ಲ ಅದನ್ನೆತ್ತಿ ಮುಡಿಯಲ್ಲಿ ಇಟ್ಟುಕೊಳ್ಳದೇ ಬಿಡರು. ಅದೇ ರೀತಿ ಬಡವಗೆ ಚಲುವೆಯಾದ ಹೆಂಡತಿ ಇದ್ದರೆ ಆಗುವದು.

೩೭೧. ಅಪ್ಪಿಸಪ್ಪಾದವ | ನಪ್ಪುವನು ಕಡುಹೆಡ್ಡ |
ತುಪ್ಪ ಉಂಡೊಗೆದ ಎಲೆನೆಕ್ಕಿ ನಾಯಿಬಾಯ್ |
ಚಪ್ಪರಿಸಿದಂತೆ ಸರ್ವಜ್ಞ ||

ಅನೇಕರಿಂದ ಭೋಗಿಸಲ್ಪಟ್ಟ ಮುದುಕಿಯನ್ನು ಅಪ್ಪಿಕೊಳ್ಳುವವ ಕಡುಮೂರ್ಖನು. ತುಪ್ಪದ ಊಟಮಾಡಿ ಒಗೆದ ಎಲೆಯನ್ನು ನಾಯಿಯು ನೆಕ್ಕಿ ನಾಲಿಗೆಯನ್ನು ಚಪ್ಪರಿಸಿದಂತೆ ಅಂಥವನ ಸ್ಥಿತಿಯಾಗುವದು.

೩೭೨. ಬೊಪ್ಪ್ರವನು ಅರಿದಿಹರೆ | ಸುಮ್ಮನಿದ್ದಿರಬೇಕು |
ಬೊಪ್ಪ್ರವನು ಅರಿದು ಉಸುರಿದರೆ ಕಳಹೋಗಿ |
ಕೆವ್ಮಿಸತ್ತಂತೆ ಸರ್ವಜ್ಞ ||

ಬ್ರಹ್ಮಜ್ಞಾನವನ್ನು ಪಡೆದವರು ಮೌನವಾಗಿರುವದು ಒಳ್ಳೇದು, ತಾನು ಮಹಾಜ್ಞಾನಿಯೆಂಬ ಬಿಂಕದಿಂದ ವಾದಕ್ಕೆ ನಿಂತರೆ ಕಳವು ಮಾಡಿ ಹೊರಹೆರಡುವಾಗ ಕೆಮ್ಮಿದಂತೆ (ಅಂದರೆ ಎಚ್ಚತ್ತು ಅವನನ್ನು ಹಿಡಿದು ಶಿಕ್ಷಿಸುವರು.)

೩೭೩. ಸತ್ಯವನು ಅರಿದಿಹರೆ | ಸತ್ತ ಹಾಗಿರಬೇಕು |
ಸತ್ಯವನು ಅರಿದು ಉಸುರಿದರೆ ಸತ್ತವರಿ |
ಗತ್ತ ಹಾಗಕ್ಕು ಸರ್ವಜ್ಞ ||

ಸತ್ಯವನ್ನರಿತ ಮಹಾನುಭಾವರು ಸತ್ತವರಂತೆ ಬಾಯಿ ಗಟ್ಟಿಯಾಗಿ ಮುಚ್ಚಿಕೊಂಡಿರಬೇಕು. ಆದರೆ ಬಾಯಿ ಬಿಟ್ಟು ಆ ಬಗ್ಗೆ ಮಾತನಾಡ ತೊಡಗಿದರೆ ಸತ್ತವರಿಗಾಗಿ ಅತ್ತಂತೆ ನಿಷ್ಫಲವಾಗುವದು.

೩೭೪. ಆಗಿಲ್ಲ ಹೋಗಿಲ್ಲ | ಮೇಗಿಲ್ಲ ಕೆಳಗಿಲ್ಲ |
ತಾಗಿಲ್ಲ ತಪ್ಪುತಡೆಯಿಲ್ಲ ಲಿಂಗಕ್ಕೆ |
ದೇಗುಲವೇ ಇಲ್ಲ ಸರ್ವಜ್ಞ ||

ದೇವರು (ಲಿಂಗ) ಅನಾದಿ, ಅನಂತ, ವಿಶ್ವವ್ಯಾಪಿ, ವಿಶ್ವವ್ಯಾಪಾರಿ, ಪಾಪಪುಣ್ಯಗಳ ನಿರ್ಲಿಪ್ತನು, ಇಂಥವನಿಗೆ ಕೇವಲ ದೇವಾಲಯವೇ (ವಾಸಿಸಲು) ಬೇಕೆ ?

೩೭೫. ಅನ್ನವನು ಇಕ್ಕುವದು | ನನ್ನಿಯನೆ ನುಡಿಯುವದು |
ತನ್ನಂತೆ ಪರರಬಗೆದೊಡೆ ಕೈಲಾಸ |
ಬಿನ್ನಾಣವಕ್ಕು ಸರ್ವಜ್ಞ ||

(ಹಸಿದವನಿಗೆ ಊಟವನ್ನು ಹಾಕಿದರೆ. ಅಂತಃಕರುಣೆಯ ಮಾತನ್ನಾಡ, ತನ್ನಂತೆ ಪರರಿಗೂ ದುಃಖಗಳುಂಟು ಎಂಬ ಭಾವನೆ ತಳೆದರೆ, ಮೋಕ್ಷಕ್ಕೆ ಒಯಲು ದೇವರಿಂದ ಔತಣವೇ ಬರುವದು. (ಮೋಕ್ಷಕ್ಕೆ ಹೋಗುವನೆಂಬರ್ಥ. )

೩೭೬. ನವದ್ವಾರಗಳ ಮುಚ್ಚಿ | ಶಿವಧ್ಯಾನದೊಳಗಿರಲು |
ನವಖಂಡ ಪೃಥ್ವಿಯೊಳಗಣ ಮಾತೆಲ್ಲ |
ಕಿವಿಯೊಳಗೆ ಇಹುದು ಸರ್ವಜ್ಞ ||

(ನಿರ್ವಿಕಲ್ಪವೇ ಮೊದಲಾದ ಸಮಾಧಿಗಳನ್ನೇರಲು ಯೋಗಿಯು ತನ್ನ ಎಲ್ಲ ನವದ್ವಾರಗಳನ್ನು ಮುಚ್ಚಿಬಿಡಬೇಕಾಗುವದು.) ಹೀಗೆ ಸಮಾಧಿಸ್ಥನಾಗಿ ಶಿವಧ್ಯಾನದಲ್ಲಿರುವ ವರೆಗೆ ಸಕಲ ಬ್ರಹ್ಮಾಂಡ ವಾರ್ತೆಗಳೆಲ್ಲವೂ ಗೊತ್ತಾಗುವವು.

೩೭೭. ಜೀವಜೀವವ ತಿಂದು | ಜೀವಿಪುದು ಜಗವೆಲ್ಲ |
ಜೀವದಿಂ ಹೊರಗೆತಿಂಬುವರ ನಾಕಾಣೆ |
ಜೀವವೀಜಗವು ಸರ್ವಜ್ಞ ||

ಇಡೀ ಜಗತ್ತೆಲ್ಲವೂ ಒಂದು ಜೀವಿಯನ್ನು ತಿಂದು ಇನ್ನೊಂದು ಜೀವಿಯು ಬದುಕುವದು, ಇಂಥದನ್ನು ಮಾಡದಿರುವವರು ಇಲ್ಲ. ಏಕೆಂದರೆ ಇಡೀ ಜಗವೆಲ್ಲವೂ ಜೀವಿಗಳಿಂದಲೇ ತುಂಬಿಹೋಗಿದೆ.

೩೭೮. ಒಂದು ಜೀವಿಯುನೊಂದು | ತಿಂದು ಉಳಿದಿಹಜಗದಿ |
ಎಂದು ಕೊಲಲಾಗದಿಂತೆಂಬ ಜಿನಧರ್ಮ |
ನಿಂದಿಹುದು ಹೇಗೆ ? ಸರ್ವಜ್ಞ ||

ಈ ಜಗತ್ತು ಒಂದು ಜೀವಿಯನ್ನು ತಿಂದು ಇನ್ನೊಂದು ಜೀವಿಯು ಬಾಳುವದಾಗಿದೆ. ಇಂಥದರಲ್ಲಿ ಯಾವುದನ್ನೂ ಕೊಲ್ಲಬಾರದೆಂದು ಸಾರುವ ಜೈನ ಮತವು ಬಾಳುವದಾದರೂ ಹೇಗೆ ?

೩೭೯. ಅನ್ನದೇವರಮುಂದೆ | ಇನ್ನು ದೇವರು ಉಂಟೆ ? |
ಅನ್ನವುಂಟಾದರುಣಲುಂಟು ಜಗಕೆಲ್ಲ |
ಅನ್ನವೇ ಪ್ರಾಣ ಸರ್ವಜ್ಞ ||

ಎಲ್ಲ ದೇವರಿಗಿಂತ ಅನ್ನವೇ ಶ್ರೇಷ್ಠವಾದದ್ದು. ಅನ್ನವಿದ್ದರೆ ಉಂಡು ಬಾಳಬಹುದು, ಅನ್ನವಿಲ್ಲದಿದ್ದರೆ ಜಗತ್ತೆ ನಾಶವಾಗುವದು.

೩೮೦. ಒಮ್ಮೆಯುಂಡವ ತ್ಯಾಗಿ | ಇಮ್ಮೆಯುಂಡವ ಭೋಗಿ |
ಬಿಮ್ಮಗುಂಡವನೆರೋಗಿ ಯೋಗಿ ತಾ |
ಸುಮ್ಮನಿರುತಿಹನು ಸರ್ವಜ್ಞ ||

ಒಪ್ಪತ್ತುಂಡವನು ಸ್ವಾರ್ಥತ್ಯಾಗಿಯು, ಎರಡು ಹೊತ್ತು ಉಣ್ಣು ವವನು ಭೋಗಿ (ವಿಲಾಸಿ)ಯು, ಮೂರುಸಲ ಉಣ್ಣುವವ ಸದಾ ರೋಗ ಪೀಡಿತನು. ಆದರೆ ಯೋಗಿಯು ಮೌನವಾಗಿದ್ದು ನೀಡಿದರೆ ಉಣ್ಣುವನು, ಇಲ್ಲದಿದ್ದರೆ ಇಲ್ಲ.

೩೮೧. ನಾಲಿಗೆಯ ಕಟ್ಟಿಹನು | ಕಾಲನಿಗೆ ದೂರಿಹನು |
ನಾಲಿಗೆಯ ರುಚಿಯುಮೇಲಾಡುತಿರಲವನ |
ಕಾಲಹತ್ತಿರವು ಸರ್ವಜ್ಞ ||

ಕಟ್ಟುನಿಟ್ಟಾಗಿ ಆಹಾರ ಸೇವಿಸುವವನಲ್ಲಿ ಯಮದೂತರು ಬಾರರು, ನಾಲಿಗೆಯ ಚಾಪಲ್ಯದಿಂದ ಸಿಕ್ಕದ್ದು ಸಿಕ್ಕಾಗ ತಿನ್ನುತ್ತ ಇರುವವನ ಆರೋಗ್ಯ ಕೆಟ್ಟು ಸಾವಿಗೀಡಾಗುವನು. (ಯಮನು ಕೊಂಡೊಯ್ಯುವನು ಎಂಬರ್ಥ. )

೩೮೨. ನಾಲಗೆಯ ಕೀಲವನು | ಶೀಲದಲಿತಾನರಿದು |
ಶೂಲವದು ರುಚಿಯು ಎಂದಿಹನು ಮುದಿಯಲಿ |
ಬಾಲನಂತಿಹುದು ಸರ್ವಜ್ಞ ||

ಆಹಾರ ಸೇವನೆಯಲ್ಲಿ ಕಟ್ಟುನಿಟ್ಟಾಗಿ ಇದ್ದು ನೀತಿನಡಾವಳಿಯನ್ನರಿತು ಶಿವನಾಮದ ರುಚಿಯನ್ನರಿತವನು ಮುಪ್ಪಿನಲ್ಲಿಯೂ ಹುಡುಗನಂತೆ ಉತ್ಸಾಹಿಯಾಗಿರುತ್ತಾನೆ.

೩೮೩. ರುಚಿಗಳನು ನೆರೆಗಳೆದು | ಶುಚಿಗಳಲಿ ಮೆರೆವಂಗೆ |
ಪಚನಪದುಬೆಳಗಿ ಬಲದಿಬಾಳುವನೆಂಬ |
ವಚನವೊಂದಿಹುದು ಸರ್ವಜ್ಞ ||

ನಾಲಿಗೆಯ ರುಚಿಯನ್ನು ಸ್ವಾಧೀನದಲ್ಲಿಟ್ಟುಕೊಂಡು ಪವಿತ್ರವಾಗಿ ಇರುವವನ ಪಚನಶಕ್ತಿಯು ಬೆಳೆದು ಬಲವಂತನಾಗಿ ಬಾಳುವನೆಂಬ ನಾಣ್ಣುಡಿಯು ಪ್ರಸಿದ್ಧವಿದೆ.

೩೮೪. ಹರಕುಹೋಳಿಗೆ ಲೇಸು | ಮುರುಕುಹಪ್ಪಳ ಲೇಸು |
ಕುರುಕುರು ಕಡಲೆಬಲುಲೇಸು ಪಾಯಸದ |
ಸುರುಕು ಲೇಸೆಂದ ಸರ್ವಜ್ಞ ||

ಊಟದಲ್ಲಿ ಹರಕು ಹೋಳಿಗೆ, ಮುರಿದ ಹಪ್ಪಳ ಮತ್ತು ಎಲ್ಲಕ್ಕಿಂತ ತೆಳ್ಳಗಿನ ಪಾಯಸವನ್ನು ಸುರಕೊಳ್ಳುವದೆಂದರೆ ಬಲುರುಚಿ ಬಾಯಿಗೆ ಹುರಿದ ಕಡ್ಲೆಯೂ ಸೊಗಸು.

೩೮೫. ಮಾಳಸೂ ಮಾಳಿಯೂ | ಕೂಳಿತ್ತ ಹೆಮ್ಮೆಯಲಿ |
ಕೇಳಲೆನ್ನಾರ ಮಗನೆಂದು ನಾ ಶಿವನ |
ಮೇಳದವನೆಂದೆ ಸರ್ವಜ್ಞ ||

ಒಮ್ಮೆ ಸರ್ವಜ್ಞನ ತಂದೆ-ತಾಯಿಯರಾದ ಮಾಳ ಮತ್ತು ಮಾಳಿಯೂ ( ತಾವೂ ಆಹಾರ ಕೊಟ್ಟು ಬೆಳೆಸಿದೆವೆಂಬ ಹೆಮ್ಮೆಯಿಂದ ) ನೀನಾರ ಮಗನಪ್ಪಾ? ಎಂದು ಕೇಳಿದರಂತೆ; ಅದಕ್ಕೆ 'ನಾನು ಶಿವಪ್ರಮಥಗಣದಲ್ಲಿ ಒಬ್ಬನು' ಎಂದನಂತೆ ಸರ್ವಜ್ಞ.

೩೮೬. ತಾ ಯೆಂಬೆನಲ್ಲದೇ | ತಾಯಿ ನಾನೆಂಬೆನೆ ?
ತಾಯಿಯೆಂದಾನು ನುಡಿದೇನು ಪರಸ್ತ್ರೀಯು |
ತಾಯಿಯೆಂದೆಂಬ ಸರ್ವಜ್ಞ ||

'ತಾ' ಎಂದು ಬೇಡುವೆನು, 'ತಾಯೀ' ಎಂದು (ದೈನ್ಯದಿಂದ) ಯಾಚಿಸುವದಿಲ್ಲ. ಆದರೆ ಸಕಲ ಪರಸ್ತ್ರೀಯರೆಲ್ಲ ನನಗೆ ತಾಯಿಯ ಸಮಾನರೆಂದು ನಾನು ನುಡಿವೆನು.

೩೮೭. ಕುರುಹುದೊರೆಯಿತು ದೇಹ | ಅರಿವಸರಿಯಿತು ಪ್ರಾಣ |
ಹರುಷಾಗಿ ಹೋಯ್ತು ಭವಪಾಶ ಮುಕ್ತಿಯು |
ಇರವು ನಿರವಯವು ಸರ್ವಜ್ಞ ||

ದೇಹಕ್ಕೆ (ಲಿಂಗ) ಸಂಸ್ಕಾರವಾಯಿತು, ಆತ್ಮಜ್ಞಾನವು ಪ್ರಾಣನಿಗಾಯಿತು, ಸಂಸಾರ ಮೋಹ ಪಾಶಗಳು ಹರಿದುಹೋದವು, ಮುಕ್ತಿಯ ಸುಖದ ಅನುಭವವು ನನಗಾಯಿತು.

೩೮೮. ಕುಲಗೆಟ್ಟವರ ಚಿಂತೆ | ಒಳಗಿರ್ಪರಂತಲ್ಲ |
ಕುಲಗೆಟ್ಟು ಶಿವನ ಮೊರೆಹೊಕ್ಕ ಋಷಿಗಳು |
ಕುಲವಾದರಯ್ಯಾ ಸರ್ವಜ್ಞ ||

ಕುಲವನ್ನುಳಿಸಿಕೊಳ್ಳುವೆವೆಂಬರಂತೆ, ಕುಲಗೆಟ್ಟವಂಗೆ ಚಿಂತೆಯಿಲ್ಲ, ಕುಲಗಳನ್ನೇ ಅರಿಯದ ಋಷಿಗಳು ಶಿವನಿಗೆ ಮೊರೆಹೊಕ್ಕು ಸಾಕ್ಷಾತ್ಕರಿಸಿಕೊಂಡು ಸಕಲ ಕುಲಗಳ ಮೂಲವೇ ಆದರು (ಗೋತ್ರರಾದರು.)

೩೮೯. ಹೊಲಸು ಮಾಂಸದ ಹುತ್ತ। ಎಲುವಿನ ಹಂದರವು।
ಹೊಲೆಬಲಿದ ತನುವಿನೊಳಗಿರ್ದುಮದರೊಳಗೆ ।
ಕುಲವನರಸುವರೆ ಸರ್ವಜ್ಞ ॥

(ದೇಹವೆಂಬ) ಎಲುಬಿನ ಹಂದರಕ್ಕೆ ಮಾಂಸದ ಹುತ್ತವೇ ಬೆಳೆದಂತಿದೆ, ಆದರಲ್ಲಿ ಕೀಳಮಟ್ಟದ ತನುವೊಂದು ವಾಸಿಸುವದು, ಇಂಥದಕ್ಕೆ ಕುಲ ಗೋತ್ರಗಳ ಸಂಸ್ಕಾರವೇತಕ್ಕೆ ? (ಪ್ರಯೋಜನವಿಲ್ಲ)

೩೯೦. ಏಳುಕೋಟಿಯೆ ಕೋಟಿ । ಏಳುಲಕ್ಷವೆ ಲಕ್ಷ ।
ಏಳುಸಾವಿರದ ಎಪ್ಪತ್ತು ವಚನಗಳ ।
ಹೇಳಿದನು ಕೇಳೋ ಸರ್ವಜ್ಞ ॥

ಏಳುಕೋಟಿ, ಏಳುಲಕ್ಷ, ಏಳುಸಾವಿರದ ಎಪ್ಪತ್ತು ವಚನಗಳನ್ನು (ತ್ರಿಪದಿ) ಬರೆದಿರುವೆನೆಂದು ಸರ್ವಜ್ಞನು ಹೇಳಿಕೊಂಡಿದ್ದಾನೆ.

೩೯೧. ಸರ್ವಜ್ಞನರಿದಿಹರು । ಸರ್ವರನು ಅರಿದಿಹರು ।
ಸರ್ವಜ್ಞನರಿಯದಿರುತಿಹನು ಉರ್ವಿಯೊಳು ।
ಗರ್ವಿತಾನಕ್ಕು ಸರ್ವಜ್ಞ ॥

ಸರ್ವಜ್ಞನ (ಅವನು ಬರೆದುದರ) ಪರಿಚಯವಿದ್ದವನು ಎಲ್ಲವನ್ನೂ ಬಲ್ಲ ಪಂಡಿತನಾಗುವನು; ಅವನ್ನರಿಯದವನು ಈ ಜಗದಲ್ಲಿ ಸೊಕ್ಕಿನವನೆಂದು ತಿಳಿಯಬೇಕು.

೩೯೨. ಎನ್ನಮನಸಿಗೆ ನೆನಹ । ಪನ್ನಗಾಧರ ಕೊಟ್ಟ ।
ಬಿನ್ನಾಣದಿಂದ ಸ್ತುತಿಗೈದು ಪೊಗಳುವೆ ।
ಚೆನ್ನ ಮೂರುತಿಯ ಸರ್ವಜ್ಞ ॥

ನನ್ನ ಮನಸ್ಸಿಗೆ ಸಂಸಾರ ಮತ್ತು ನೆನಪಿನ ಶಕ್ತಿಯನ್ನು ಶಿವನು ದಯಪಾಲಿಸಿದನು. ಆದುದರಿಂದ ಆ ಸುಂದರ ಮೂರ್ತಿಯನ್ನು ಭಕ್ತಿಯಿಂದ ಸ್ತುತಿಸಿ ಹೊಗಳುವೆನು ಎಂದು ಸರ್ವಜ್ಞ ಹೇಳಿಕೊಂಡಿದ್ದಾನೆ.

೩೯೩. ಎಲ್ಲ ಬಲ್ಲವರಿಲ್ಲ | ಬಲ್ಲವರು ಬಹಳಿಲ್ಲ |
ಬಲ್ಲಿದರು ಇದ್ದು ಬಲವಿಲ್ಲ, ಸಾಹಿತ್ಯ |
ವೆಲ್ಲರಿಗೆ ಇಲ್ಲ ಸರ್ವಜ್ಞ ||

(ಈ ಜಗದಲ್ಲಿ) ಎಲ್ಲ ವಿದ್ಯೆಗಳನ್ನು ಅರಿತವರಾರೂ ಇಲ್ಲ. ಇದ್ದರೂ ಅವರು ಬಹು ಸ್ವಲ್ಪ ಜನರು, ಅವರು ಸಹ ಬಲಹೀನರಾಗಿದ್ದಾರೆ, (ಉದರ ನಿರ್ವಹಣಕ್ಕೆ ಅವರಿಗೆ ಇಲ್ಲ ಎಂದು ಅರ್ಥ) ಸಾಹಿತ್ಯವನ್ನು ಎಲ್ಲರೂ ಬರೆಯಲಾರರು (ಅಥವಾ ಓದಲಾರರು.)

೩೯೪. ಕಲ್ಲರಳಿ ಹೂವಾಗಿ | ಎಲ್ಲರಿಗೆ ಬೇಕಾಗಿ |
ಮಲ್ಲಿಕಾರ್ಜುನನ ಶಿಖರಕ್ಕೆ ಬೆಳಕಾಗಿ |
ಬಲ್ಲವರು ಹೇಳಿ ಸರ್ವಜ್ಞ ||

(ಸುಣ್ಣದ ಹರಳು ನೀರಿನಲ್ಲಿ ಹಾಕಿದೊಡನೆ) ಅರಳಿ ಹೂವಾಗುವದು. ಎಲ್ಲರಿಗೆ ತಾಂಬೂಲಕ್ಕೆ ಅದು ಬೇಕು, ಮಲ್ಲಿಕಾರ್ಜುನನ ದೇವಾಲಯದ ಶಿಖರಕ್ಕೆ ಸೇಣ್ಣ ಹಚ್ಚಿದರೆಂದು ಪ್ರಕಾಶಿಸುವದು.

೩೯೫. ಕಾಲಿಲ್ಲದೆ ಹರಿಗು | ತೋಳಿಲ್ಲದಲೆ ಹೊರಗು |
ನಾಲಿಗಿಲ್ಲದಲೆ ಉಲಿವುದು ಕವಿಕುಲದ |
ಮೇಲುಗಳು ಪೇಳಿ ಸರ್ವಜ್ಞ ||

ಕಾಲುಗಳಿಲ್ಲದೇ ಹರಿದಾಡುವದು, ತೋಳುಗಳಿಲ್ಲದೇ ಈಸುವದು, ನಾಲಿಗಿಲ್ಲದೇ ಮಧುರ ಸ್ವರವನ್ನುಂಟುಮಾಡುವದು ಅದು ನದಿ.

೩೯೬. ಕತ್ತಿಗದು ಹರಿದಿಹುದು | ಮತ್ತೆ ಬರುತೇಳುವದು |
ಕಿತ್ತಿ ಬಿಸಾಡಲದುನಡದು, ಕವಿಜನರು |
ಅರ್ತಿಯಿಂಪೇಳಿ ಸರ್ವಜ್ಞ ||

ಕತ್ತಿಯಿಂದ ಅದನ್ನು ಹರಿದೊಗೆಯಬಹು, ಆದರೆ ಪುನಃ ಅದೇ ಸ್ಥಳದಲ್ಲಿ ಅದೇ ವಸ್ತು ಬೆಳೆದು ನಿಲ್ಲುವದು, ಕಿತ್ತು ಪುನಃ ನೆಟ್ಟರೆ ಅದು ಬೆಳೆಯಲಾರದು. ಇದಾವುದೆಂಬುದನ್ನು ಕವಿಗಳು ಪ್ರೀತಿಯಿಂದ ಹೇಳಲಿ (ತಲೆಗೂದಲು.)

೩೯೭. ಅಚ್ಚಬಣ್ಣವನುಟ್ಟು । ಉಚ್ಚ ಬೈತಲೆ ಬಿಟ್ಟು ।
ನಿಚ್ಚಲಸೆರಗು ಹಾರುವಳು ಹಾದರಕೆ ।
ಮೆಚ್ಚು ಕಾಣಯ್ಯ ಸರ್ವಜ್ಞ ॥

ದಪ್ಪ ಬಣ್ಣದ ಶೀರೆಯನ್ನು ಉಟ್ಟುಕೊಂಡು ಮೇಲಕ್ಕೆ ಬೈತಲೆ ತೆಗೆದು ಬಾಚಿಕೊಂಡು ಎದೆಯ ಮೇಲಿನ ಸೆರಗನ್ನು ಹಾರಾಡಿಸುತ್ತಿರುವವಳು ಹಾದರಕೆ ಮೆಚ್ಚಿದವಳೆಂದು ತಿಳಿ.

೩೯೮. ಓತ್ತಿಕಟ್ಟಿದ ಟೀಕೆ । ಕೆತ್ತಿಸಿದ ಹರಳೋಲೆ ।
ನಿತ್ಯವು ಒನಪು ಮಾಡುವಳು ಕಾಮತಾ ।
ನೆತ್ತಿದಬಾಣ ಸರ್ವಜ್ಞ ॥

ಕಂಠಕ್ಕೆ ತಿಟತಿಟಿಯಾಗಿ ಟೀಕೆಯ ಧರಿಸಿ ಕಿವಿಗಳಲ್ಲಿ ಹರಳು ಬೆಂಡೋಲೆಗಳನ್ನಿಟ್ಟು ದಿನವೂ ಒನಪು ಒಯ್ಯಾರದಲ್ಲಿರುವವಳು ಕಾಮನ ಬಾಣಕ್ಕೆ ಆಹುತಿಯಾದವಳು. (ಮಹಾ ಕಾಮಿಯು)

೩೯೯. ಉಟ್ಟುಟ್ಟು ಕಳೆಯುವವಳ । ಬಿಟ್ಟಿಟ್ಟು ಉಡುವವಳ ।
ಬೊಟ್ಟಿಟ್ಟು ಹಲ್ಲುಸುಲಿಯುವವಳ ಕಂಡರೆ ।
ಕೆಟ್ಟಳೆಂದರಿಗು ಸರ್ವಜ್ಞ ॥

ಶೀರೆಯನ್ನು ಆಗಾಗ ಕಳೆಯುವದನ್ನೂ, ಉಡುವದನ್ನೂ ಮಾಡು ವಂಥವಳ, ಆಗಾಗ ಬೇರೆ ಬೇರೆ ಶೀರೆಯನ್ನು ಉಟ್ಟುಕೊಳ್ಳುವಂಥವಳೂ, ಬಾಯಿಯಲ್ಲಿ ಬಟ್ಟಿಟ್ಟು ನಗುವವಳು ದುರ್ನಡತೆಯುವಳೆಂದು ತಿಳಿಯಬೇಕು.

೪೦೦. ಉಟ್ಟೊಮ್ಮೆ ಕಳೆಯುವಳು । ಬಿಟ್ಟೊಮ್ಮೆ ಉಡುತಿಹಳು ।
ಕೊಟ್ಟಮನೆಬಿಟ್ಟುಬರುತಿಹಳು ಹಾದರದ ।
ಮೊಟ್ಟೆ ಕಾಣಯ್ಯ ಸರ್ವಜ್ಞ ॥

ಮೇಲಿಂದ ಮೇಲೆ ಶೀರೆಯನ್ನುಡುವವಳೂ, ಆಗಾಗ ಶೀರೆಯನ್ನು ಬದಲಿಸುವವಳೂ ಕೊಟ್ಟ (ಗಂಡನ) ಮನೆಯನ್ನು ಬಿಟ್ಟು ಬರುವಂಥವಳೂ ಹಾದರದ ಮೂರ್ತಿಯೆಂದೇ ತಿಳಿಯಬೇಕು.

೪೦೧. ಅರಳಿಯ ಮರದಂತೆ । ಮೊರೆವಾಕೆ ಸುಗುಣೆಯೇ ।
ಬೆರಳಿಂದ ನೆಲವನಗಿವವಳು ಹಾದರದ ।
ನೆರಳು ಕಾಣಯ್ಯ ಸರ್ವಜ್ಞ ॥

ಅರಳಿಯ ಮರದಂತೆ (ಅದು ವಿಶಾಲವಾದುದರಿಂದ ಹೊಯ್ದಾಡುವದು) ಒನಪುಗೈಯುವವಳು ಸುಗುಣೆಯಲ್ಲವೇ ಅಲ್ಲ, ಅದರಂತೆ ಕಾಲ್ಬೆರಳಿಂದ ನೆಲವನ್ನು ಕೆರೆಯುವವಳು ಹಾದರ ಮಾಡುವಳೆಂದೇ ತಿಳಿಯಬೇಕು.

೪೦೨. ಕೆಂಬಾಯಿ ತೆರೆಯುತ್ತ । ಕೆಂಬಲ್ಲ ತೋರುತ್ತ ।
ಕಂಬವನೊರಗಿ ಮುರುಕಿಪಳು ಹಾದರದ ।
ಬೊಂಬೆ ಕಾಣಯ್ಯ ಸರ್ವಜ್ಞ ॥

ತಾಂಬೂಲ ಮೆದ್ದು, ಬಾಯಿತೆರೆದು, ಕೆಂಪಾದ ಹಲ್ಲು ತೋರುತ್ತ (ಅಂದರೆ ನಗುತ್ತ) ಕಂಬಕ್ಕೆ ಆತು ಮುರುಕು ಮಾಡುವಂಥವಳು ಸೂಳೆಯೆಂದೆ ತಿಳಿಯಬೇಕು.

೪೦೩. ಗುರುವಿನ ವಿಸ್ತರದ । ಪರಿಯನಾನೇನೆಂಬೆ ।
ಮೆರೆವ ಬ್ರಹ್ಮಾಂಡದೊಳ ಹೊರಗನವ ಬೆಳಗಿ ।
ಪರಿಪೂರ್ಣನಿಪ್ಪ ಸರ್ವಜ್ಞ ॥

ಗುರುವಿನ ಅಗಾಥವಾದ ಸಾಮರ್ಥ್ಯದ ರೀತಿಯನ್ನು ಬಣ್ಣಿಸಲು ಶಕ್ಯವಿಲ್ಲ. ಬ್ರಹ್ಮಾಂಡದ ಒಳಗೂ ಹೊರಗೂ ಪ್ರಕಾಶಮಾನವಾಗಿ ಮೆರೆದು ಪರಿಪೂರ್ಣನೇ ಆಗಿರುವನು.

೪೦೪. ಹರತನ್ನೊಳಿರ್ದು ಗುರು । ತೋರಿದರೆ ತಿಳಿವುದೆ ।
ಮರದೊಳಗೆ ಅಗ್ನಿ ಇರುತಿರ್ದು ತನ್ನತಾ ।
ನರಿಯಬೇಕೆಂದ ಸರ್ವಜ್ಞ ॥

ಗಿಡದಲ್ಲಿ ಅಗ್ನಿಯು ಹುದುಗಿಕೊಂಡಿದ್ದರೂ ಅದನ್ನು ಗಿಡವು ಅರಿಯದು, ಅದರಂತೆಯೇ ಮನುಷ್ಯ ಹೃದಯದಲ್ಲಿ ಶಿವನಿದ್ದರೂ ಗುರುವಿನ ಅನುಗ್ರಹವಾಗದೆ ಅವನಿಗೆ ಅದು ತಿಳಿಯದು.

೪೦೫. ಜ್ಯೋತಿಯಿಂದಲಿ ನೇತ್ರ | ರಾತ್ರಿಯೊಳು ಕಾಂಬಂತೆ |
ಸೂತ್ರದಿಂದಾತನರಿವಂತೆ ಶಿವನ ಗುರು |
ನಾಥನಿಂದರಿಗು ಸರ್ವಜ್ಞ ||

ರಾತ್ರಿಯಲ್ಲಿ ದೀಪದ ಸಹಾಯದಿಂದ ಕಣ್ಣು ಕಾಣುವಂತೆ ದಾರದಿಂದ ಸೂತ್ರಧಾರಿಯನ್ನು ನೋಡುವಂತೆ ಗುರುನಾಥನ ಅನುಗ್ರಹದಿಂದಲೇ ಶಿವನನ್ನು ಕಾಣುವೆವು.

೪೦೬. ವಿದ್ಯೆಕಲಿತಡೆ ಇಲ್ಲ | ಬುದ್ಧಿ ಕಲಿತಡೆ ಇಲ್ಲ |
ಉದ್ಯೋಗಮಾಡಿದಡೆ ಇಲ್ಲ ಗುರುಮುಖವು |
ಇದ್ದಲ್ಲದಿಲ್ಲ ಸರ್ವಜ್ಞ ||

ವಿದ್ಯೆ ಬುದ್ಧಿ ಕಲಿತರೂ, ಸತತೋದ್ಯೋಗಿಯಾದರೂ, ಗುರುಮುಖದಿಂದ ಉಪದೇಶವಾಗದಿದ್ದರೆ ಎಲ್ಲವೂ ವ್ಯರ್ಥ.

೪೦೭. ಮಂಡೆ ಬೋಳಾದೊಡಂ | ದಂಡ ಕೊಳ್ನಿಡಿದೊಡಂ |
ಹೆಂಡತಿಯ ಬಿಟ್ಟು ನಡೆದೊಡಂ ಗುರುಮುಖವ |
ಕಂಡಲ್ಲದಿಲ್ಲ ಸರ್ವಜ್ಞ ||

ತಲೆಬೋಳಿಸಿಕೊಂಡು ಕೈಯಲ್ಲಿ ದಂಡಕಾಷ್ಟವ ಹಿಡಿದು ಹೆಂಡತಿಯ ಬಿಟ್ಟು ಸನ್ಯಾಸಿಯಾದರೂ ಕೂಡ ಗುರೂಪದೇಶವಿಲ್ಲದಿದ್ದರೆ ಅದೆಲ್ಲವೂ ವ್ಯರ್ಥ.

೪೦೮. ಪರತತ್ವತನ್ನೊಳಗೆ | ಎರವಿಲ್ಲದಿರುತಿರ್ದು |
ಪರದೇಶಿಯಂತೆ ಇರುತಿಪ್ಪ ಯೋಗಿಯನು |
ಪರಮಗುರುವೆಂಬೆ ಸರ್ವಜ್ಞ ||

ಸಕಲ ವೇದ ಶಾಸ್ತ್ರಗಳ ತತ್ವಗಳನ್ನೂ ತನ್ನ ಹೃದಯದಲ್ಲಿ ಗೌಪ್ಯವಾಗಿಟ್ಟುಕೊಂಡು ಪರದೇಶಿಯಂತೆ ತಿರುಗುತ್ತಿರುವ ಯೋಗಿಯೇ ಸರ್ವಶ್ರೇಷ್ಠವಾದ ಗುರುವು.

೪೦೯. ಕಲ್ಲಿನಲಿ ಕುಚದಲ್ಲಿ | ಬಳ್ಳಿದಲಿ ಹಿಕ್ಕೆಯಲಿ |
ಎಲ್ಲಿ ಭಾವಿಸಿದಡಲ್ಲಿರ್ಪ ಭರಿತವನು |
ಬಲ್ಲವೆ ನಿಮಗ ? ಸರ್ವಜ್ಞ ||

(ಕಲ್ಲಿನಲಿ) ಲಿಂಗಪೂಜೆ ಮಾಡುವಾಗ, ಹೆಂಡತಿಯೊಡನೆ ಸರಸವಾಡುವಾಗ, ವ್ಯಾಪಾರದಲ್ಲಿದ್ದಾಗ, ಉನ್ಮಾದದಲ್ಲಿದ್ದಾಗ ಎಲ್ಲ ಕಾಲದಲ್ಲಿಯೂ ಶಿವನಿರುವನೆಂದರಿದವನು ವೇದಬಲ್ಲವನು.

೪೧೦. ಲಿಂಗಕ್ಕೆ ಕಡೆಯೆಲ್ಲಿ ? | ಲಿಂಗಿಲ್ಲದೆಡೆಯೆಲ್ಲಿ ? |
ಲಿಂಗದೊಳು ಜಗವು ಅಡಗಿಹುದು, ಲಿಂಗವನು |
ಹಿಂಗದವರುಂಟೆ ? ಸರ್ವಜ್ಞ ||

( ಲಿಂಗಕ್ಕೆ ) ದೇವರಿಗೆ ಅಂತ್ಯವಿಲ್ಲ, ದೇವರಿಲ್ಲದ ಸ್ಥಳವಿಲ್ಲ, ದೇವರಲ್ಲಿಯೇ ಇಡೀ ಜಗತ್ತು ಇರುವದು. ಇಂಥ ( ಲಿಂಗವನ್ನು ) ದೇವರನ್ನು ಇಲ್ಲವೆಂದೆನ್ನುವವರಾರಾದರೂ ಇರುವರೇ ?

೪೧೧. ಲಿಂಗವುಳ್ಳನೇ ಪುರುಷ | ಲಿಂಗವುಳ್ಳನೇ ಸರಸಿ |
ಲಿಂಗವುಳ್ಳವನ ಭೋಗದಿ ಜಗವು, ಶುಭ |
ಲಿಂಗದಿಂ ಜನನ ಸರ್ವಜ್ಞ ||

ದೇವನಿರುವನೆಂದು ತಿಳಿದ ಭಾವಿಕನೇ ನಿಜವಾದ ಪುರುಷ, ಅವನ ಜೀವನವು ಸುಖಮಯವು, ಜಗದಲ್ಲಿ ಅವನೇ ಭೋಗಿ, ದೇವರಿಂದಲೇ ಸೃಷ್ಟಿಯುತ್ಪತ್ತಿ ಕಾರ್ಯಗಳಾಗುವವು.

೪೧೨. ಆಕಾರ ತಾನಲ್ಲ | ಓಕಾರ ಮುಖವಲ್ಲ |
ಆಕಾಶ ತಳವ ಮೀರಿಹುದು ಹರಿಯಜರು |
ತಾ ಕಾರಣಯ್ಯ ಸರ್ವಜ್ಞ ||

ನಿರಾಕಾರ ನಿರ್ಗುಣನಾಗಿಯೂ, ಆಕಾಶ-ಪಾತಾಳಗಳಲ್ಲಿ ಕೂಡ ವ್ಯಾಪ್ತನಾಗಿಯೂ ಇರುವ ಆ ಶಿವನ ಮಹಿಮೆಯನ್ನು ಹರಿಬ್ರಹ್ಮರು ಕೂಡ ಅರಿಯರು.

೪೧೩. ಅಲಸದಾ ಶಿವಪೂಜೆ । ಹುಲಸುಂಟು ಕೇಳಯ್ಯಾ ।
ಬಲುಕವುಲೊಡೆದು ಬೇರಿಂದ ತುದಿತಸಕ ।
ಫಲಸುಕಾಂತತೆ ಸರ್ವಜ್ಞ ॥

ಭಕ್ತಿಪೂರ್ವಕವಾಗಿ ಮಾಡಿದ ಶಿವಪೂಜೆಗೆ ಅಖಂಡ ಪುಣ್ಯವುಂಟು. ದೊಡ್ಡ ಗಿಡವು ಅನೇಕಾನೇಕ ಟೊಂಗೆಗಳನ್ನು ಚಾಚಿಬೇರಿನಿಂದ ತುದಿಯ ವರೆಗೆ ಫಲಗಳನ್ನು ನೀಡುವಂತೆ. ಅನಂತ ಫಲಪ್ರಾಪ್ತಿಯು ಶಿವಪೂಜೆಯಿಂದ ಬರುವದು.

೪೧೪. ಉಂಡುಂಡು ತಿರುಗತಿಹ । ಭಂಡರಕೆಳೆಬೇಡ ।
ಕಂಡು ಲಿಂಗವನು ಪೂಜಿಸದವಗೆ ಯಮ ।
ದಂಡ ಕಾಣಯ್ಯ ಸರ್ವಜ್ಞ ॥

ಉಂಡುಂಡು ತಿರುಗುವ ನಾಸ್ತಿಕರ ಗೆಳೆತನವೇ ಬೇಡ. (ಲಿಂಗ) ದೇವರ ದರ್ಶನವಾದರೂ ಪೂಜಿಸದೇ ಹೋಗುವವನಿಗೆ ಯಮಪಾಶವು ತಪ್ಪಿದ್ದಲ್ಲ.

೪೧೫. ಲಿಂಗವಿಲ್ಲದ ಅಂಗ । ಅಂಗಿಯಿಲ್ಲದ ಪುರುಷ ।
ಗಂಗೆಯಿಲ್ಲದ ಶಿವಪೂಜೆ ಇವು ಮೂರು ।
ಭಂಗ ಕಾಣಯ್ಯ ಸರ್ವಜ್ಞ ॥

ಲಿಂಗಧಾರಣೆಯಿಲ್ಲದ ದೇಹವು, ಅಂಗಿ ಧರಿಸದೇ ಇರುವ ಮನುಜನು, ಅಭಿಷೇಕ ಮಾಡದೇ ಮಾಡುವ ಶಿವಪೂಜೆಯು ಇವು ಮೂರು ವ್ಯರ್ಥ ವಾದವುಗಳು.

೪೧೬. ಆ ದೇವ ಈ ದೇವ । ಮಾದೇವನೆನಬೇಡ ।
ಆ ದೇವರದೇವ ಭುವನದ ಪ್ರಾಣಿಗಳಿ ।
ಗಾದವನೇ ದೇವ ಸರ್ವಜ್ಞ ॥

ಆ ದೇವ ದೊಡ್ಡವ, ಈ ದೀವ ದೊಡ್ಡವ, ಮಹಾದೇವರು ದೊಡ್ಡವರು ಎಂದೆನ್ನಬೇಡ. ಜಗತ್ತಿನಲ್ಲಿಯ ಸರ್ವ ಪ್ರಾಣಿಗಳ ಸುಖ-ದುಃಖಗಳಿಗೆ ಆಗು ವವನೇ ಎಲ್ಲ ದೇವರಿಗಿಂತ ದೊಡ್ಡವನು.

೪೧೭. ಚಿತ್ರವನು ನವಿಲೊಳು । ವಿಚಿತ್ರವನು ಗಗನದೊಳು ।
ಪತ್ರಪುಷ್ಪಗಳ ವಿವಿಧ ಬಣ್ಣಗಳಿಂದ ।
ಚಿತ್ರಿಸಿದರಾರು ? ಸರ್ವಜ್ಞ ॥

ನವಿಲಗರಿಯ ಚಿತ್ರವನ್ನು, ಮುಗಿಲಿನಲ್ಲಿ ಕಾಣುವ ವಿಚಿತ್ರತರವಾದ ಬಣ್ಣಗಳನ್ನು, ಗಿಡಗಳ ಎಲೆ ಮತ್ತು ಹೂಗಳ ಅನೇಕ ಬಣ್ಣಗಳನ್ನು ಯಾರು ಬರೆದರು ? ( ದೇವರು ಎಂಬರ್ಥ. )

೪೧೮. ಭ್ರಷ್ಟದೈವಕೆ ಬಾಯಿ । ಬಿಟ್ಟಲ್ಲಿ ಫಲವಿಲ್ಲ ।
ಸೃಷ್ಟಿಗೀಶ್ವರನ ಭಜಿಸಿದರೆ ಮುಂದಕ್ಕೆ ।
ಇಷ್ಟಾರ್ಥವೀವ ಸರ್ವಜ್ಞ ॥

ದುರ್ದೈವಕ್ಕೆ ದುಃಖಿಸುವದರಲ್ಲಿ ಫಲವಿಲ್ಲ, ಜಗತ್ತಿಗೆ ಈಶ್ವರನಾದ ದೇವರನ್ನು ಭಜಿಸುತ್ತಿದ್ದರೆ ಮುಂದಾದರೂ ಬಯಸಿಸ ಫಲವನ್ನು ಕೊಡುವನು.

೪೧೯. ಕಲ್ಲುಕಲ್ಲೆಂಬುವಿರಿ । ಕಲ್ಲೊಳಿಪ್ಪುದೆ ದೈವ ? ।
ಕಲ್ಲಲ್ಲಿ ಕಳೆಯು ನಿಲಿಸಿದ ಗುರುವಿನ ।
ಸೊಲ್ಲಲ್ಲೆ ದೈವ ಸರ್ವಜ್ಞ ॥

'ಕಲ್ಲು ಕಲ್ಲು' ಎಂದೆನ್ನುವಿರಿ. ಕಲ್ಲಿನಲ್ಲಿ ದೇವರಿರುವನೇ ? ಆದರೆ ಅಂಥ ಕಲ್ಲಿನಲ್ಲಿ ದೇವರನ್ನು ತಂದು ನಿಲ್ಲಿಸಿದ ಗುರುವಿನ ಅನುಗ್ರಹಪೂರ್ಣವಾದ ಮಾತುಗಳೇ ದೇವರೆಂದು ತಿಳಿಯಬೇಕು.

೪೨೦. ತೆರೆದ ಹಸ್ತವು ಲೇಸು । ಹಿರಿದು ಪೂಜೆಯು ಲೇಸು ।
ಅರಸೊಲಿಯೆ ಲೇಸು, ಸರ್ವರು ಶಿವನಿಂಗೆ ।
ಶರಣವೇ ಲೇಸು ಸರ್ವಜ್ಞ ॥

ಕೈಗಳನ್ನು ತೆರೆದುಕೊಂಡಿದ್ದರೆ ಒಳ್ಳೇದು. (ಜನರಿಗೆ ತಿಳಿಯಬಾರದು) ಭಕ್ತಿಪೂರ್ವಕವಾಗಿ ಪೂಜೆ ಮಾಡಿದರೆ ಒಳ್ಳೇದು, ಅರಸನು ಪ್ರೀತನಾದರೆ ಕಲ್ಯಾಣವಾಗುವದು ಖಂಡಿತ. ಆದರೆ ಎಲ್ಲದಕ್ಕಿಂತಲೂ ದೇವರಿಗೆ ಶರಣು ಹೋದರೆ ಸರ್ವಶ್ರೇಷ್ಠನು.

೪೨೧. ಖುಲ್ಲಮಾನವ ಬೇಡೆ ಕಲ್ಲು ತಾ ಕೊಡುವದೇ ? |
ಸೊಲ್ಲರಿವ ಶಿವನ ಬೇಡಿಪಡೆ ಬಯಸಿದು |
ಬೆಲ್ಲವನು ಕೊಡುವ ಸರ್ವಜ್ಞ ||

ಮನುಷ್ಯನು ಕೀಳುತನದಿಂದ ಕಲ್ಲನ್ನು ಬೇಡಿದರೆ ಅದೇನು ಕೊಟ್ಟೀತು, ಆದರೆ ದಯಾಳುವಾದ ಶಿವನನ್ನು ಭಕ್ತಿಯಿಂದ ಬೇಡಿದರೆ ಬಯಸಿದ್ದೆಲ್ಲವನ್ನೂ ಕೊಡುವನು.

೪೨೨. ಭಕ್ತಿಯೆಂಬುದೇ ಬೀಜ | ಮುಕ್ತಿಯೆಂಬುದೇ ಫಲವು |
ಯುಕ್ತಿಯಿಂ ವೃಕ್ಷವೇರಿದಗೆ ಇಹದಲ್ಲಿ |
ಮುಕ್ತಿಯಹುದೆಂದ ಸರ್ವಜ್ಞ ||

(ದೇವರಲ್ಲಿ) ಭಕ್ತಿಯ ಬೀಜ ಬಿತ್ತಿದರೆ ಮುಕ್ತಿಯೆಂಬ ಫಲವು ದೊರಕುವದು, ಯುಕ್ತಿಯಿಂದ ಈ ವೃಕ್ಷವನ್ನೇರಿದರೆ (ಅಂದರೆ ಧರ್ಮಿಷ್ಠನಾಗಿ ಸಂಸಾರ ವೃಕ್ಷವನ್ನೇರಿದರೆ) ಇಲ್ಲಿಯೇ ಮುಕ್ತಿ ಫಲ ದೊರೆಯುವದು.

೪೨೩. ಐವರಟ್ಟಾಳುಗಳ | ಯೌವನದ ಹಿಂಡುಗಳು |
ತವಕದಿಂ ಹೊಯ್ದುನಿಂದಾತ ಜಗದೊಳಗೆ |
ದೈವತಾನಕ್ಕು ಸರ್ವಜ್ಞ ||

ತಾರುಣ್ಯದಲ್ಲಿ (ಮನುಷ್ಯನಿಗೆ) ಕಾಮ, ಕ್ರೋಧ ಮೊದಲಾದ ಐದು ಪ್ರಭಲ ಶತ್ರುಗಳು ಗಂಟುಬೀಳುವರು, ಆದರೆ ಅವರನ್ನೆಲ್ಲ ಹೊಡೆದೋಡಿಸಿ ನಿಂತಾತ ಜಗತ್ತಿಗೇ ದೇವರಂತಾಗುವನು.

೪೨೪. ಯೌವನವ ಹಿಂಡುಗಳು | ಅಯ್ವರಟ್ಟಾಳುಗಳು |
ಅಯ್ವರನು ವಶಕೆ ತಂದಾತ ಲೋಕಕ್ಕೆ |
ದೇವಜ್ಞನಕ್ಕು ಸರ್ವಜ್ಞ ||

ಕಾಮ, ಕ್ರೋಧ, ಮದ, ಮತ್ಸರಾದಿಗಳು ತಾರುಣ್ಯದಲ್ಲಿ ಮನುಜನನ್ನು ಹಿಂಡಿ ಹಿಪ್ಪಿಮಾಡುವವು; ಆದರೆ ಅವುಗಳನ್ನು ತನ್ನ ವಶದಲ್ಲಿಟ್ಟುಕೊಂಡರೆ ಆ ಮಾನವನೇ ದೇವರಾಗುವನು.

೪೨೫. ಜ್ಞಾನದಿಂ ಮೇಲಿಲ್ಲ | ಶ್ವಾನನಿಂ ಕೀಳಿಲ್ಲ |
ಭಾನುವಿಂದಧಿಕ ಬೆಳಗಿಲ್ಲ, ಜಗದೊಳಗ |
ಜ್ಞಾನವೇ ಮಿಗಿಲು ಸರ್ವಜ್ಞ ||

ಜ್ಞಾನಕ್ಕಿಂತ ಶ್ರೇಷ್ಠವಾದುದು ಯಾವುದೂ ಇಲ್ಲ, ನಾಯಿಗಿಂತ ಕೀಳಾದ ಪ್ರಾಣಿಯೂ ಇಲ್ಲ, ಸೂರ್ಯ ಸಮಾನವಾದ ಬೆಳಕಿಲ್ಲ, ಜಗತ್ತಿನಲ್ಲಿ ಜ್ಞಾನಕ್ಕೆ ಮಿಗಿಲಾದುದಾವುದೂ ಇಲ್ಲ

೪೨೬. ಜ್ಞಾನದಿಂದಲಿ ಇಹವು | ಜ್ಞಾನದಿಂದಲಿ ಪರವು |
ಜ್ಞಾನವಿಲ್ಲದಿರೆ ಸಕಲವೂ ತನಗಿದ್ದು |
ಹಾನಿ ಕಾಣಯ್ಯ ಸರ್ವಜ್ಞ ||

ಜ್ಞಾನವಿದ್ದರೆ ಜಾಣತನದಿಂದ ಲೌಕಿಕದಲ್ಲಿ ಸುಖ ಕಾಣುವನು, ಪರ ಲೋಕ ಸಾಧನೆಯನ್ನೂ ಮಾಡಿಕೊಳ್ಳುವನು, ಜ್ಞಾನವಿಲ್ಲದೇ ಸಕಲವೆಲ್ಲವೂ ಇದ್ದರೂ ಇಲ್ಲದಂತೆ ವ್ಯರ್ಥ.

೪೨೭. ಅರಿವಿಯ ಅರಿವು ತಾ | ಧರೆಯೊಳಗೆ ಮೆರೆದಿಹುದು |
ಅರಿವಿನ ಅರಿಗ ಹರಿಹರ ಬ್ರೊಮ್ಮರೂ |
ಹಿರಿಯರ್ಕೈ ಕಾಣ ಸರ್ವಜ್ಞ ||

ಈ ಜಗತ್ತಿನಲ್ಲಿ ಬ್ರಹ್ಮಜ್ಞಾನವು ಶ್ರೇಷ್ಠವೆಂದು ಮೆರೆಯುತ್ತಿರುವದು, ಇಂಥ ಬ್ರಹ್ಮಜ್ಞಾನದ ಅರಿವು ಹರಿಹರ ಬ್ರಹ್ಮರಿಗೂ ಆಗಿಲ್ಲವೆಂದು ಸರ್ವಜ್ಞನು ಅನ್ನುವನು.

೪೨೮. ಎತ್ತ ಹೋದರು ಮನವ | ಹತ್ತಿಕೊಂಡೇಬಹುದು |
ಮತ್ತೊಬ್ಬ ಮುನಿದುಕೊಳಲರಿಯ ಜ್ಞಾನದ |
ಬಿತ್ತು ಲೇಸೆಂದ ಸರ್ವಜ್ಞ ||

ಜ್ಞಾನವು ನಾವು ಹೋದಲ್ಲೆಲ್ಲ ನಮ್ಮ ಜೊತೆಗೆ ಬರುವದು, ಹೆರವನು ಸಿಟ್ಟಿಗೆದ್ದು ಇದನ್ನು ಕಸಿದುಕೊಳ್ಳಲಾರ, ಆದುದರಿಂದ ಜ್ಞಾನವನು ಹೃದಯದಲ್ಲಿ ಬಿತ್ತುವದೇ ಶ್ರೇಷ್ಠ.

೪೨೯. ತತ್ವಜ್ಞಾನ ತಾ | ನುತ್ತಮುವೆನಬೇಕು |
ಮತ್ತೆ ಶಿವಧ್ಯಾನ ಬೆರೆದರದು ಶಿವನಿಂದ |
ಅತ್ತಲೆನಬೇಕು ಸರ್ವಜ್ಞ ||

ತತ್ವಜ್ಞಾನ ಸಂಪಾದನೆಯು ಎಲ್ಲದಕ್ಕೂ ಶ್ರೇಷ್ಠವಾದುದು, ಆದರೆ ಶಿವಧ್ಯಾನದಿಂದೊಡಗೂಡಿದ ತತ್ವಜ್ಞಾನೋದಯವು ಪ್ರತ್ಯಕ್ಷ ಶಿವನಿಗಿಂತ ಶ್ರೇಷ್ಠವಾದುದು.

೪೩೦. ನಾಟಿರಾಗವು ಲೇಸು | ತೋಟಮಲ್ಲಿಗೆ ಲೇಸು |
ಕೂಟವದು ಲೇಸು | ಹಿರಿಯರೋಳು, ಶಿವನ ಅರಿ |
ದಾಟವೇ ಲೇಸು ಸರ್ವಜ್ಞ ||

(ನಾಟ) ಬೇಸಾಯ ಪದ್ಧತಿಯು ಒಳ್ಳೇದು, ಮಲ್ಲಿಗೆ ಹೂ ತೋಟಕ್ಕೆ ಭೂಷಣವು, ಹಿರಿಯರ (ಬುದ್ಧಿವಂತರ) ಸಹವಾಸವು ಸೊಗಸಾದದ್ದು. ಆದರೆ ಪರಮಾತ್ಮನ ಜ್ಞಾನಸಂಪಾದನೆಯು ಸರ್ವಶ್ರೇಷ್ಠವಾದುದು.

೪೩೧. ಎಣ್ಣೆ ಬೆಣ್ಣೆಯ ಋಣವು | ಅನ್ನ ವಸ್ತ್ರದ ಋಣವು |
ಹೊನ್ನು ಹೆಣ್ಣಿನ ಋಣ | ತೀರಿದಾಕ್ಷಣದಿ |
ಮಣ್ಣು ಪಾಲೆಂದ ಸರ್ವಜ್ಞ ||

ಎಣ್ಣೆ, ಬೆಣ್ಣೆ, ಅನ್ನ, ವಸ್ತ್ರ, ಐಶ್ವರ್ಯ ಮತ್ತು ಹೆಂಡತಿಯರ ಋಣ ತೀರಿದಾಕ್ಷಣ ಮನುಜನು ಸಾಯುವನು.

೪೩೨. ಸತ್ತುಹೋದರೆ ನಿನಗೆ | ದೆತ್ತಣದ ಮೋಕ್ಷವೈ |
ಸತ್ತುಹೋಗದಲೆ ಜೀವಿಸಿರಲು ಮೋಕ್ಷದ |
ಗೊತ್ತುತಿಳಿಯೆಂದ ಸರ್ವಜ್ಞ ||

(ಏನೂ ತಿಳಿಯದೇ) ಸತ್ತರೆ ನಿನಗೆ ಮೋಕ್ಷ ದೊರಕುವದು ಹೇಗೆ? ಸಾಯುವ ಪೂರ್ವದಲ್ಲಿ ಜೀವಿಸಿರುವಾಗ ಮೋಕ್ಷವನ್ನು ದೊರಕಿಸುವ ದಾರಿಯನ್ನು ಅರಿತುಕೊಳ್ಳಬೇಕು.

೪೩೩. ಕತ್ತಲೆಯು ಠಾವಿಂಗೆ | ಉತ್ತಮವು ಜ್ಯೋತಿ ತಾ |
ಮತ್ತೆ ಪ್ರಜ್ವಲಿಸುವಾ ಠಾವು ಬೆಳಗಲ |
ತ್ಯುತ್ತಮವದಕ್ಕು ಸರ್ವಜ್ಞ ||

ಕತ್ತಲೆಯಿರುವ ಸ್ಥಳದಲ್ಲಿ ದೀಪವನ್ನಿಟ್ಟರೆ ಒಳ್ಳೇದು, ಆದರೆ ಪ್ರಕಾಶ ಮಾನವಾದ ಸ್ಥಳದಲ್ಲಿ ಹೆಚ್ಚು ಬೆಳಗುವ ದೀಪವನ್ನಿಟ್ಟರೆ ಅತ್ಯುತ್ತಮ ವಾದುದು.

೪೩೪. ಯೋನಿಜರು ಯೋಗಿಯನು | ಹೀನವೆನ್ನುವದೇನು ? |
ಆನಂದಠಾಣದೊಳಿರಲು ಯೋಗಿಯ |
ಮಾನಘನವಹುದು ಸರ್ವಜ್ಞ ||

ಮಾನವರು ಯೋಗಿಯನ್ನು ಹೀನನೆಂದ ಏಕೆ ತಿಳಿಯುವರೋ ಕಾಣೆ, ಯೋಗಿಯು ಆತ್ಮಾನಂದದಲ್ಲರಲು ಅವನ ಯೋಗ್ಯತೆಯು ಬಹಳ ಘನವಾಗಿರುವದು.

೪೩೫. ಯೋಗವನು ಮನವುಟ್ಟಿ | ಭೋಗವನು ತೊರೆದಿಹರೆ |
ಮಾಗಿಯ ಮಳೆಯು ಸುರಿದಂತೆ ಆಯೋಗ |
ಸಾಗುತ್ತಲಿಹುದು ಸರ್ವಜ್ಞ ||

ಲೌಕಿಕ ಸುಖಗಳನ್ನು ತೊರೆದು ಯೋಗಸಾಧನೆ ಮಾಡಿದರೆ ಸುಗ್ಗಿಯ ಕಾಲದಲ್ಲಿ ಮಳೆ ಬಂದು ಪೈರು ಬೆಳೆದು ಬರುವಂತೆ ಯೋಗಸಿದ್ಧಿಯು ಬರುವದು.

೪೩೬. ವ್ಯಾಪಾರವಳಿದಲ್ಲ | ದಾಪರವು ಕಾಣಿಸದು |
ಪಾಪಕರ್ಮಗಳಸತಿಗಳೆದು ನಿಂದವಗೆ |
ಕೋಪವೆಲ್ಲಿಯದು ಸರ್ವಜ್ಞ ||

ವ್ಯಾಪಾರ ಮಾಡುವದನ್ನು ಬಿಡದವನಿಗೆ ಪರಲೋಕ ಸಾಧನೆಯಿಲ್ಲ. ಪಾಪಕರ್ಮಗಳನ್ನು ಮಾಡದೇ ದೂರವಿದ್ದವಗೆ ಕೋಪವೇ ಬರಲಾರದು.

೪೩೭. ಕಾಶಿಯು ನುಡಿಬೇಡ | ಕ್ಲೇಶದಲಿ ಕೆಡಬೇಡ |
ಸಾಸಿರದ ಜಡೆಯು ಹೊರಬೇಡ ಸಮತೆಯು |
ಭ್ಯಾಸದೊಳಗಿರಲು ಸರ್ವಜ್ಞ ||

ಎಲ್ಲರೂ ಸರಿಸಮಾನರು, ದೇವರ ಮಕ್ಕಳು ಎಂದು ತಿಳಿಯುವನು ಕಾಶೀಯಾತ್ರೆ ಮಾಡುವ ಕಷ್ಟವಹಿಸುವ ಕಾರಣವಿಲ್ಲ, ಜಟಾ ಜೂಟಗಳನ್ನು ಬಿಡುವ ಕಾರಣವೂ ಇಲ್ಲ.

೪೩೮. ಒಡಲೆಂಬ ಹುತ್ತಕ್ಕೆ | ನುಡಿವ ನಾಲಿಗೆ ಸರ್ಪ |
ಕಡುಕೋಪವೆಂಬ ವಿಷವೇರಿ ಸಮತೆ ಗಾ |
ರುಡಿಗನಂತಕ್ಕು ಸರ್ವಜ್ಞ ||

ದೇಹವೆಂಬ ಹುತ್ತದಲ್ಲಿ ನಾಲಿಗೆಯೆಂಬ ಸರ್ಪವಿದ್ದು, ವಿಷಪ್ರಾಯವಾದ ಶೀಘ್ರ ಕೋಪವೆಂಬ ಸ್ವಭಾವವು ಸೇರಿದರೆ ಸಮತಾ ಭಾವಕ್ಕೆ ಇವನು ವೈರಿಯಾಗುವನು.

೪೩೯. ಕುಂಡಲಿಯು ಕಂಡಾತ | ಹೆಂಡತಿಗೆ ಒಲಿಯುವನೇ |
ಕಂಡಿತದೊಳಿಪ್ಪ ಶಿವಯೋಗಿ ಮಾಂಸದ |
ಪಿಂಡಕೊಲಿಯುವನೇ ಸರ್ವಜ್ಞ ||

ಭವಿಷ್ಯ ನೋಡಿ ಮದುವೆಯಾದರೆ ಆವಳಿಗೆ ಗಂಡನು ವಶವಾಗ ಒಹುದೇ ? ನಿಶ್ಚಿತ ಚಿತ್ತದ ಶಿವಯೋಗಿಯು (ಮಾಂಸದ ಪಿಂಡ ಅಂದರೆ) ಸುಂದರ ಸ್ತ್ರೀ ಜಾಲದಲ್ಲಿ ಬೀಳುವನೇ ?

೪೪೦. ಕುಂಡಲಿಯುಸರಿದಾತ | ಮಿಂಡೆಯರಿಗೊಲಿಯುವನೇ ? |
ಬಂಡಿಸಕ್ಕರೆಯು ಮೆಲುವಾತ ಮಗ್ಗಿನ |
ಹಿಂಡೆಗೆರಗುವನೇ ಸರ್ವಜ್ಞ ||

ಜೀವನದ ಭವಿಷ್ಯವನ್ನು ಕಂಡವನು ಸೂಳೆಯರಿಗೆ ಒಲಿಯಲು ಸಾಧ್ಯವೇ ? ಸದಾ ಸಕ್ಕರೆಯನ್ನುಣ್ಣುವಂಥವನು ಬಳಸುಗಟ್ಟಿದ (ಹಿಂಡಿ) ಚಟ್ನಿಗೆ ಬಾಯ್ಬಿಡುವನೇ ?

೪೪೧. ಉಂಡುಂಡು ದೇವರನು | ಕಂಡವರು ತಾನುಂಟೆ ? |
ಉಂಡು ಉಪವಾಸಿಯಾಗಿಪ್ಪ ಶಿವಯೋಗಿ |
ಕಂಡಿಹುದೇ ನಿಜವು ಸರ್ವಜ್ಞ ||

ಉಂಡು ಐಷಾರಾಮದಲ್ಲಿದ್ದವರಿಗೆ ದೇವರು ಪ್ರತ್ಯಕ್ಷನಾಗುವನೇ ? ಉಂಡರೂ ಕೂಡ ಉಪವಾಸವಿದ್ದಂತೆ ಇರುವ ತ್ಯಾಗಿಯಾದ ಶಿವಯೋಗಿಗೆ ಮಾತ್ರ ದೇವರು ಕಾಣಿಸಿಕೊಂಡಿರಬಹುದು.

೪೪೨. ಆಶೆರೋಷವ ಬಿಟ್ಟು | ಈಶ ಧ್ಯಾನದೊಳಿರಲು |
ಮೋಸವನು ಮಾಡಿ ಸತಿ ಬಂದು ಪಿಡಿಯಲ್ಕೆ |
ಹೇಸಿ ತೊಲಗುವದು ಸರ್ವಜ್ಞ ||

ಆಶೆ, ಸಿಟ್ಟು ಮೊದಲಾದವುಗಳನ್ನು ಬಿಟ್ಟು ದೇವರ ಧ್ಯಾನದಲ್ಲಿರುವವನನ್ನು ಮೋಹದಿಂದ ಹೆಂಡತಿಯು ಬಂದು ಕೈಹಿಡಿದರೆ ಏನೂ ಪ್ರಯೋಜನವಾಗಲಾರದು.

೪೪೩. ಸಂಗವನು ತೊರೆದಂಗೆ | ಅಂಗನೆಯುರಿರಲೇಕೆ ? |
ಬಂಗಾರವೇಕೆ ? ಬಲವೇಕೆ ? ಲೋಹದ |
ಶೃಂಗಾರವೇಕೆ ಸರ್ವಜ್ಞ ||

ಸರ್ವತ್ಯಾಗ ಮಾಡಿದಂಥವನು ಸ್ತ್ರೀ-ಸಂಗವನ್ನಾಗಲೀ, ಶಕ್ತಿ, ಧನ ಸಂಪತ್ತು, ಆಭರಣ ಮೊದಲಾದವುಗಳನ್ನೇನೂ ಆಶಿಸುವದಿಲ್ಲ.

೪೪೪. ಗಾನವಿದ್ಯೆಯು ಲೇಸು | ಮಾನವತಿ ಸತಿ ಲೇಸು |
ಸ್ವಾನುಭಾವಿಗಳ ಕೆಳೆಲೇಸು, ಎಲ್ಲಕು |
ದಾನಿಯೇ ಲೇಸು ಸರ್ವಜ್ಞ ||

ಗಾನಸಂಪತ್ತು ಒಳ್ಳೇದು, ಮಾನವಂಥ ಹೆಂಡತಿಯು ಭೂಷಣಪ್ರಾಯಳು, ಅಪರೋಕ್ಷ ಜ್ಞಾನಿಗಳ ಸಹವಾಸವು ಅತ್ಯುತ್ತಮವಾದುದು. ಆದರೆ ಇವರೆಲ್ಲರಿಗಿಂತ ದಾನಿಯೇ ಶ್ರೇಷ್ಠನು.

೪೪೫. ಈವಂಗೆ ದೇವಂಗೆ | ಆವುದಂತರವಯ್ಯ ? |
ದೇವನು ಜಗಕೆ ಕೊಡುತಿಹನು ಕೈಯಾರೆ |
ಈವನೇ ದೇವ ಸರ್ವಜ್ಞ ||

ದಾನ ಮಾಡುವವನಿಗೂ ದೇವರಿಗೂ ಏನೂ ಅಂತರವಿಲ್ಲ. ದೇವರು ಜಗತ್ತಿಗೆ ಕೊಡುವಂತೆ ( ದಾನಿಯು ಕೊಡುವವನಾದುದರಿಂದ ) ಇವನೇ ದೇವರು ಎಂದು ತಿಳಿಯಬೇಕು.

೪೪೬. ದಾನಿಗೂ ದೀನಗೂ | ಜ್ಞಾನಿಗಜ್ಞಾನಿಗೂ |
ಮಾನಿಗೂ ಮಾದಹೀನನಿಗೂ ಸಿಂಹರು |
ಶ್ವಾನಗಂತರವು ಸರ್ವಜ್ಞ ||

ದಾನ ಮಾಡುವವನಿಗೂ, ದೀನನಿಗೂ, ಜ್ಞಾನಿಗೂ; ಅಜ್ಞಾನಿಗೂ, ಮಾನವಂತನಿಗೂ, ಮಾನ-ಮರ್ಯಾದೆಗಳಿಲ್ಲದವನಿಗೂ ನಡುವೆ ಸಿಂಹ ಮತ್ತು ನಾಯಿಗೆ ಇರುವಷ್ಟು ಅಂತರವಿರುವದು.

೪೪೭. ಇಕ್ಕುವವನೂರಿಗೊಂ | ದೊಕ್ಕಲೆಂದೆನಬೇಡ |
ಅಕ್ಷಯಪದವ ಪಡೆದು ಕೈಲಾಸದಿಂ |
ದೊಕ್ಕಲಿಗ ಬಂದು ಸರ್ವಜ್ಞ ||

ಕೊಡುಗೈಯುಳ್ಳವನು ಊರಿಗೆ ಒಬ್ಬ ನಾಗರಿಕನೆಂದಷ್ಟೇ ತಿಳಿ ಬಾರದು, ಕೈಲಾಸದಲ್ಲಿ ಶಾಶ್ವತ ಸ್ಥಾನ ಪಡೆದು ಇಲ್ಲಿ ಒಕ್ಕಲಾಗಿರಲು ಬಂ ರುವನೆಂದು ತಿಳಿಯಬೇಕು.

೪೪೮. ಇಕ್ಕುವವನೆಂದಿಗೊಂ | ದೊಕ್ಕಲೆಂದೆನಬೇಡ |
ಇಕ್ಕಿಮೆರೆಯುವವನು ಇಲ್ಲಿರದೆ ಸ್ವರ್ಗಕೆ |
ಒಕ್ಕಲಿರಹೋಹ ಸರ್ವಜ್ಞ ||

ದಾನಿಯು ನಮ್ಮ ( ಕೇವಲ ) ನೆರೆಹೊರೆಯುವನೆಂದು ತಿಳಿಯಬೇ ಇಲ್ಲಿ ದಾನಮಾಡಿ ಮೆರೆದಾಡಿ ಸ್ವರ್ಗದಲ್ಲಿ ಶಾಶ್ವತವಾಗಿ ಇರಲು ಹೋಗುವ ಪುಣ್ಯಾತ್ಮನೆಂದು ತಿಳಿ.

೪೪೯. ಪರರಿಗುಪಕಾರಗಳ | ನೆರೆಪಮಾಳ್ಪ ಮಾನವನ |
ಪರಶಿವನು ಕಳುಹಲವಬಂದ ಧರೆಯೊಳಗೆ |
ವರಿವೀವುತಿಹನು ಸರ್ವಜ್ಞ ||

ಹೆರವರಿಗೆಲ್ಲ ಸಕಲ ರೀತಿಯಗೆ ಉಪಕಾರಗಳನ್ನು ಮಾಡುತ್ತಿರುವಂಥ ಮನುಜನನ್ನು ಪರಶಿವನು ಅತ್ಯಂತ ಶ್ರೇಷ್ಠನನ್ನಾಗಿ ಮಾಡಿ ಈ ಜಗತ್ತಿಗೆ ಕಳಿಸುವನು (ಮುಂದಿನ ಜನ್ಮದಲ್ಲಿ ಸುಖಿಯಾಗುವನು.)

೪೫೦. ಒಂದೆಲಗ ಮೆಲಹೊಲ್ಲ | ಹಂಡೆ ರಣದಲ್ಲಿ ಹೊಲ್ಲ |
ತಂದೆಯನು ಜರೆವ ಮಗ ಹೊಲ್ಲ, ಲೋಕಕ್ಕೆ |
ಬಂಧನವೇ ಹೊಲ್ಲ ಸರ್ವಜ್ಞ ||

ವೀಳ್ಯಯಲ್ಲಿ ಒಂದೇಎಲೆಯನ್ನು ಮೆಲ್ಲುವದು ಉಚಿತವಲ್ಲ, ರಣರಂಗದಲ್ಲಿ ಹಂದೆಯು ಅಯೋಗ್ಯನು, ತಂದೆಯನ್ನು ನಿಂದಿಸುವ ಮಗನು ಅಯೋಗ್ಯನು, ಅದರಂತೆ ದೇಶಕ್ಕೆ ಅಸ್ವಾತಂತ್ರ್ಯವೇ ಅಯೋಗ್ಯವಾದುದು.

೪೫೧. ಅಂದಗೇಡಿಯು ಹೊಲ್ಲ | ಮಂದಮತಿಸುತಹೊಲ್ಲ |
ಹಂದೆಯನನಂಬಿಹೊಗಹೊಲ್ಲ, ಬಾಳುವೆಗೆ |
ಬಂಧನವೇ ಹೊಲ್ಲ ಸರ್ವಜ್ಞ ||

ಕುರೂಪವು ತಿರಸ್ಕೃತವು, ದಡ್ಡ ಮಗನು (ವಂಶಕ್ಕೆ) ಅಯೋಗ್ಯನು, ಹಂದಿಯನ್ನು ನಂಬಿ ನುಗ್ಗುವದು ಅಯೋಗ್ಯವು, ಅದರಂತೆ ಅಸ್ವತಂತ್ರ (ಅಂದರೆ ಪರರ ಮೇಲೆ ಅವಲಂಭಿಸಿ) ಜೀವನವು ತ್ಯಾಜ್ಯವು.

೪೫೨. ತಂತುವಾದ್ಯವು ಲೇಸು | ಮಂತ್ರಿಯು ಕೆಳೆ ಲೇಸು |
ಯಂತ್ರವಾಹಕನ ದಯೆ ಲೇಸು, ಜಗದಿ ಸ್ವಾ |
ತಂತ್ರ್ಯವೇ ಲೇಸು ಸರ್ವಜ್ಞ ||

(ಸಕಲ ವಾದ್ಯಗಳಲ್ಲಿ) ತಂತುವಾದ್ಯವು ಶ್ರೇಷ್ಠವಾದದ್ದು. ಮಂತ್ರಿಯ ಗೆಳೆತನ, ಯಂತ್ರದಿಂದ ನಡೆಯುವ ವಾಹನವನ್ನು ನಡೆಸುವವನ ದಯೆ ಸಂಪಾದಿಸುವದು ಒಳ್ಳೇದು, ಅದರಂತೆ ಜಗತ್ತಿಗೆ ಸ್ವಾತಂತ್ರ್ಯವೇ ಶ್ರೇಷ್ಠವಾದುದು.

೪೫೩. ಗುರುವು ಇಲ್ಲದ ಮಠವು । ಹಿರಿಯರಿಲ್ಲದ ಮನೆಯು ।
ಅರಸಿಲ್ಲದೂರು, ಇವು ಮೂರು ನುಲಿ ಹರಿದ ।
ಹೊರಸಿನಂತಿಕ್ಕು ಸರ್ವಜ್ಞ ॥

ಗುರುವಿಲ್ಲದ ಮಠವು, ಹಿರಿ ಯಜಮಾನನಿಲ್ಲದ ಮನೆ, ಅರಸನಿಲ್ಲದ ಊರು ಇವು ಮೂರು ನೂಲಿನ ಹಗ್ಗಗಳು ಹರಿದು ಹೋದ ಹೊರಸಿನಂತೆ ನಿಷ್ಪ್ರಯೋಜಕಗಳು.

೪೫೪. ನಾಡೆಂಬ ದೇಹಕ್ಕೆ । ರೂಢಿಪತಿಯೇ ಪ್ರಾಣ ।
ನಾಡಳಿಯೇ ರೂಢಿಪತಿಕೆಡಗು, ಅರಸಳಿಯೇ ।
ನಾಡೆಲ್ಲ ಕೆಡಗು ಸರ್ವಜ್ಞ ॥

ದೇಶವೇ ದೇಹವೆಂದು ತಿಳಿದರೆ ಅದಕ್ಕೆ ಅರಸನೇ ಪ್ರಾಣವಿದ್ದಂತೆ, ದೇಶವೇ ಹೋದರೆ ಅರಸನಿಗೆ ಕೇಡು (ಅರಸೊತ್ತಿಗೆಯೇ ಅಳಿದು ಹೋಗುವದು) ಅರಸನೇ ಸತ್ತರೆ ದೇಶವೇ ಹಾಳಾಗುವದು.

೪೫೫. ಮೇರುವಿಂಗೆಣೆಯಿಲ್ಲ । ಧಾರಣಿಗೆ ಪಿಡಿಯಿಲ್ಲ ।
ಕಾರುಣಿಕರಪ್ಪ ಹಿರಿಯರ ಸಂಸರ್ಗ ।
ದಾರಿಂದಲಧಿಕ ಸರ್ವಜ್ಞ ॥

ಮೇರು ಪರ್ವತದ ಎತ್ತರವನ್ನಳೆಯಲು ಸಾಧ್ಯವಿಲ್ಲ, ಭೂಮಿಯ ಆಕಾರವನ್ನು ಕಾಣಲುಬಾರದು, ಅದರಂತೆ ಮಹಾಯೋಗಿ ವಿಭೂತಿ ಪುರುಷನ ಸಂಬಂಧ ಎಲ್ಲದಕ್ಕೂ ಹೆಚ್ಚಿನದು.

೪೫೬. ಭೃಂಗಕೇಳಲು ಚಂದ । ಹಂಗನೋಡಲುಚಂದ ।
ಭಂಗವಿಲ್ಲದ ನುಡಿ ಚಂದ, ಸಜ್ಜನರ ।
ಸಂಗವೇ ಲೇಸು ಸರ್ವಜ್ಞ ॥

ಗುಂಗೀಹುಳವ ಗುಂಯಿಗುಡುವಿಕೆಯ ಸೊಗಸು, ಹಂಗನು (ಒಂದು ತರದ ಪಕ್ಷಿ) ಚಂದವಾದದ್ದು, ಧಾರಾಕಾರವಾಗಿ ನುಡಿಯುವ ಮಾತು ಬಹು ಸೊಗಸು, ಅದರಂತೆ ಸಜ್ಜನರ ಸಹವಾಸವು ಎಲ್ಲದಕ್ಕೂ ಒಳ್ಳೇದು.

೪೫೭. ಹಂಗನ ಬಲಲೇಸು | ಹಂಗಾಳು ಇರಲೇಸು |
ಹಂಗಿಸದವರ ನೆರೆಲೇಸು, ಸಜ್ಜನರ |
ಸಂಗವೇ ಲೇಸು ಸರ್ವಜ್ಞ ||

(ಕಾರ್ಯಾರ್ಥಿಯಾಗಿ ಹೋಗುವಾಗ) ಹಂಗ ಪಕ್ಷಿಯು ಬಲಕ್ಕೆ ಹಾಯ್ದರೆ ಶುಭವಾಗುವದು, ಜೀತದ ಆಳನ್ನು ಇಟ್ಟುಕೊಳ್ಳುವದು ಒಳ್ಳೇದು, ಹಂಗಿಸಿ ಮಾತಾಡದಂಥವರ ಗೆಳೆತನವು ಒಳ್ಳೇದು, ಅದರಂತೆ ಸಜ್ಜನರ ಸಹವಾಸವು ಒಳ್ಳೇದು.

೪೫೮. ಸತ್ಯವಂತರ ನೀಸು | ಸತ್ತರೆಂದೆನಬೇಡ |
ಹೆತ್ತಮ್ಮ ಮಗನ ಕರೆವಂತೆ ನಿನ್ನನವ |
ರೆತ್ತಿ ಕೊಂಬುವರು ಸರ್ವಜ್ಞ ||

ಸತ್ಯ ನಡಿವವರು (ನಡೆವವರು) ಸತ್ತು ಹೋಗಿದ್ದಾರೆಂದು ಅನಬೇಡ, (ಅವರು ಸತ್ತರೂ) ತಾಯಿಯು ಮಗುವನ್ನು ಕರೆದು ಎತ್ತಿಕೊಳ್ಳುವಂತೆ (ತಮ್ಮ ನಡೆನುಡಿಗಳಿಂದ) ನಿನ್ನನ್ನು ಎತ್ತಿ (ಸನ್ಮಾರ್ಗದಲ್ಲಿ) ಹಿಡಿಯುತ್ತಾರೆ.

೪೫೯. ಹಂದಿ ಹದ್ದಾದವರು | ಇಂದುಧರಣಿಗೆ ಬಂದು |
ಮಂದಮತಿಯಿಂದ ಜರಿದರೆ ಸುಜನರಿಗೆ |
ಕುಂದು ಬಂದಪುದೆ ? ಸರ್ವಜ್ಞ ||

(ಹಂದಿ) ಅಯೋಗ್ಯರೂ, (ಹದ್ದಾದವರು) ನೀಚರೂ ಇಂದು ಈ ಭೂಮಿಗೆ ಬಂದು ಅಜ್ಞಾನದಿಂದ ಒಳ್ಳೇ ಜನರನ್ನು ನಿಂದಿಸಿದರೆ ಅವರಿಗೆ ಕಲಂಕ ಬರುವದೇ ? (ಇಲ್ಲ ಎಂದರ್ಥ.)

೪೬೦. ಎಲೆಯು ಕೊಳೆತರೆ ಹೊಲ್ಲ| ತೊಲೆಯು ಮುರಿದರೆ ಹೊಲ್ಲ|
ಕೊಲೆ ಹೊಲ್ಲ ಊರ ಜನರೊಳು, ಸುಜನ ಮೂ |
ದಲೆಯೊಳಿರಹೊಲ್ಲ ಸರ್ವಜ್ಞ ||

ಕೊಳೆತ ಎಲೆಗಳು ಎಲ್ಲದಕ್ಕೂ ನಿರುಪಯೋಗಿ ( ಮನೆಯ ) ತೊಲೆ ಮುರಿದರೆ ಅದು ಬಿದ್ದುಹೋಗುವದು, ಊರ ಜನರಲ್ಲಿ ಕೊಲೆಗಡಕನು ಕಂಟಕನಾಗುವನು. ಅದರಂತೆ ಕುಹಕರಲ್ಲಿ, ನಿಂದಿಸುವವರಲ್ಲಿ ಸುಜನರು ವಾಸಿಸುವದು ಅಯೋಗ್ಯವಾದುದು.

೪೬೧. ಸಾರಂಗಿಯು ಸಸಿಗೆ । ನೀರು ತಂದೆರೆದಿಹರೆ ।
ಮೀರಿದ ಮೃತವನೀವಂತೆ ಹಿರಿಯರ ।
ಕಾರುಣ್ಯವೆಂದ ಸರ್ವಜ್ಞ ॥

ಕಿತ್ತಳೆ ಗಿಡದ ಸಸಿಗೆ ನೀರೆರೆದು ದೊಡ್ಡದನ್ನಾಗಿ ಮಾಡಿದಾಗ ಅದು ತನ್ನ ಹಣ್ಣಿನಿಂದ ಅತ್ಯಂತ ರುಚಿಕರವಾದ ರಸವನ್ನು ಕೊಡುವಂತೆ ಹಿರಿಯರ ಕಾರುಣ್ಯಕ್ಕೆ ಶ್ರಮಿಸಿದರೆ ಅಂಥ ಫಲವೇ ಸಿಗುವದು.

೪೬೨. ಕಪ್ಪೆಗಳು ಮೀನುಗಳು । ಇಪ್ಪದದು ತೀರ್ಥವೇ ? ।
ತುಪ್ಪ ಓಗರಕೆ ಸಲುವದು, ಸತ್ಪುರುಷ ।
ರಿಪ್ಪುದೇ ತೀರ್ಥ ಸರ್ವಜ್ಞ ॥

ಕಪ್ಪೆ, ಮೀನು ಮೊದಲಾದವುಗಳ ವಾಸಸ್ಥಾನವಾದ ಜಲಾಶಯವು ತೀರ್ಥವೆನಿಸುವದೇ ? (ಇಲ್ಲ) ಅನ್ನಕ್ಕೆ ತುಪ್ಪವನ್ನಿಕ್ಕುವದು ಒಪ್ಪುವಂತೆ ಸತ್ಪುರುಷರಿರುವ ಸ್ಥಾನವೇ ತೀರ್ಥವೆನಿಸುವದು.

೪೬೩. ಸತ್ಯರ ನುಡಿ ತೀರ್ಥ । ನಿತ್ಯರ ನಡೆ ತೀರ್ಥ ।
ಉತ್ತಮರ ಸಂಗವದು ತೀರ್ಥ ಹರಿವ ನೀ ।
ರೆತ್ತಣದು ತೀರ್ಥ ಸರ್ವಜ್ಞ ॥

ಸತ್ಯ ಮಾತಾಡುವವರ ನುಡಿಯು ಪವಿತ್ರವಾದುದು, ನೀತಿವಂತರ ನಡಾವಳಿಯು ಪವಿತ್ರವು, ಅದರಂತೆ ಸಜ್ಜನರ ಸಹವಾಸವು ತೀರ್ಥದಂತೆಯೇ ಪವಿತ್ರವು. ಅಲ್ಲದೆ ಕೇವಲ ಹರಿಯುವ ನೀರು ಪವಿತ್ರವೆಂದು ತಿಳಿಯಬಾರದು.

೪೬೪. ಹರಿಹಂದಿಯಾದಂದು । ಹರನು ತಿರಿದುಂಡಂದು ।
ಹರನಜನ ಶಿರವ ಹರಿದಂದು ಲಿಖಿತವನು ।
ಬರೆದವರು ಯಾರು ಸರ್ವಜ್ಞ ॥

ಹರಿಯು ಹಂದಿಯಾಗಬೇಕು, (ವರಾಹಾವತಾರ) ಹರನು ಭಿಕ್ಷೆ ಬೇಡಬೇಕು, ಬ್ರಹ್ಮನ ಒಂದು ಶಿರಸ್ಸನ್ನು ಶಿವನು ಕತ್ತರಿಸಬೇಕು ಎಂಬ ಪ್ರಾರಬ್ಧವನ್ನು ಯಾರು ಬರೆದರು.

೪೬೫. ಹರಿಯು ಕೋಡಗನಾದ | ಹಿರಿಬೊಮ್ಮ ನಾಡಾದ |
ಮೆರೆದಿರ್ದ ಶಿವನು ನರಿಯಾದನಿಂತೆಂದು |
ಬರೆದಿಟ್ಟರಾರು ? ಸರ್ವಜ್ಞ ||

ಹರಿಯು ಮಂಗನಾದನೆಂದೂ, ಆ ಹಿರಿಯನಾದ ಬ್ರಹ್ಮನು ಆಡಾದನೆಂದೂ, ಶಿವನು ನರಿಯಾದನೆಂದೂ ಯಾರು ಬರೆದಿಟ್ಟರು. (ಎಲ್ಲವೂ ಪ್ರಾರಬ್ಧವು.)

೪೬೬. ಕರ್ಮದಿಂದಲೇ ಹರನು | ಚರ್ಮವನು ತಾನುಟ್ಟ |
ಹೊಮ್ಮರಾಲನಜನಾದ ಗೋವಿಂದ |
ಯೆಮ್ಮೆಯನು ಕಾದ ಸರ್ವಜ್ಞ ||

(ತಮ್ಮ ತಮ್ಮ) ಕಾರ್ಯಕ್ಕೆ ಬದ್ಧರಾಗಿ ಶಿವನು ಚರ್ಮವನ್ನುಟ್ಟನು, ಬ್ರಹ್ಮನು ಆಡು ಆದನು, ಗೋವಿಂದನು (ಹರಿ) ಯಮ್ಮೆ, ಆಕಳು ಮತ್ತು ದನಗಳನ್ನು ಕಾದನು.

೪೬೭. ಕೋಡಗಾದನು ಹರಿಯು | ಆಡಾದನಾ ಅಜನು |
ನೋಡಿದರೆ ಹರನು ನರಿಯಾದನುಳಿದವರ |
ಪಾಡೇನು ಹೇಳು ಸರ್ವಜ್ಞ ||

ಹರಿಯು (ಸೀತೆಯನ್ನು ಕಳಕೊಂಡು) ಮಂಗನಾದನು, ಬ್ರಹ್ಮನು ಆಡಿನಂತಾದನು, ಶಿವನು ನರಿಯಂತೆ ಓಡಬೇಕಾಯಿತು, ಇಂಥವರಿಗೆ ಪ್ರಾರಬ್ಧ ಬೆನ್ನುಬಿಡಲಿಲ್ಲ. ಉಳಿದವರ ಪಾಡೇನು ?

೪೬೮. ಪುಡಿಯಾದನಂಗಜನು | ಹಿಡಿವಡೆದ ಹನುಮಂತ |
ಪೊಡವಿಗೀಶ್ವರನು ತಿರಿದುಂಡರುಳಿದರ |
ಸಡಗರವದೇನು ? ಸರ್ವಜ್ಞ ||

ಕಾಮನು ಸುಟ್ಟು ಬೂದಿಯಾಗಿ ಹೋದನು, ಹನುಮಂತನು (ಸೀತಾನ್ವೇಷಣೆಗಾಗಿ ಹೋದಾಗ) ಬಂಧಿಸಲ್ಪಟ್ಟನು, ಜಗತ್ತಿಗೇ ಒಡೆಯನೆಂಬುವ ಶಿವನು (ಹೊಟ್ಟೆಗಾಗಿ) ಭಿಕ್ಷೆ ಬೇಡಿದನು, ಅಂದಮೇಲೆ ಉಳಿದವರ ಗತಿಯೇನು ?

೪೬೯. ಗಾಯತ್ರಿ ವೇದಕ್ಕೆ | ತಾಯೆಂದು ಹೊಗಳಿರಲು |
ವಾಯಕ್ಕೆ ದ್ವಿಜರು ಹಲವು ಶಾಖೆಗೆ ತಾವು |
ಹಾಯುತಿಹರೇಕೆ ? ಸರ್ವಜ್ಞ ||

ಸಕಲ ವೇದಗಳಿಗೆಲ್ಲ ಗಾಯತ್ರಿಯು (ತಾಯಿ) ಮೂಲವಾಗಿಹುದು, ಇಂಥದನ್ನು ಬಿಟ್ಟು ವೇದದ ಅನೇಕ ಶಾಖೆಗಳನ್ನು ಹಿಡಿದು ವ್ಯರ್ಥವಾಗಿ ಈ ಬ್ರಾಹ್ಮಣರು ಕಾದಾಡುವರೇಕೆ ? (ತಿಳಿಯದು.)

೪೭೦. ಪಕ್ಕಕೊಂದುಪವಾಸ | ಪುಕ್ಕಟೆ ಶ್ರೀ ತುಲಸಿ |
ಸಿಕ್ಕಿ ಸಿಕ್ಕಿದಲಿ ಹರಿನಾಮ, ಭವ ಭವದಿ |
ಸಿಕ್ಕಿಸಾಯುವದು ಸರ್ವಜ್ಞ ||

ಹದಿನೈದು ದಿವಸಗಳಿಗೊಂದು ( ಏಕಾದಶೀ ) ಉಪವಾಸ, ಬೆಲೆ ಇಲ್ಲದೇ ಸಿಗುವ ತುಳಸೀ ದಳಗಳು, ಸ್ಥಳ ತಾರತಮ್ಯವಿಲ್ಲದ ಹರಿನಾಮ ಸ್ಮರಣೆಗಳು ಇವು ಅಯೋಗ್ಯರ ಕೈಯಲ್ಲಿ ಸಿಕ್ಕು ಸಾಯುತ್ತಿರುವವು.

೪೭೧. ಮಾಗದಲಿ ಮಿಂದಿಹನು | ಮೂಗ ತಾ ಹಿಡಿದಿಹನು |
ಯೋಗ ಧ್ಯಾನಗಳ ತೊರೆದಿಹನು, ಹಾರುವನು |
ಭೋಗಿಯಾಗಿಹನು ಸರ್ವಜ್ಞ ||

( ಮಾಘ ಮಾಸದಲ್ಲಿ ) ನಸುಕಿನಲ್ಲಿ ಸ್ನಾನ ಮಾಡಿ, ಸಂಧ್ಯಾವಂದನೆಗಳನ್ನು ಮಾಡುತ್ತ, ಜಪತಪ ಯೋಗಾಭ್ಯಾಸಗಳನ್ನು ಬಿಟ್ಟು ( ಭೋಗಿ ) ಸುಖಿಯಾಗಿ ಬಾಳುತ್ತಿರುವನು ಈ ಬ್ರಾಹ್ಮಣನು (ಅರ್ಥಾತ್ ಇವನು ಪಾಪಿ.)

೪೭೨. ಮಿಂದುಂಬ ಹಾರುವಗೆ | ಸಂಧ್ಯಾವಂದನೆಯೇಕೆ ? |
ಮಿಂದು ಮೈಲಿಗೆಯ ನುಡಿಯಲೇಕೆ ? ಸ್ನಾನದ |
ಸಂದೇಹವೇಕೆ ಸರ್ವಜ್ಞ ||

ಸ್ನಾನಮಾಡಿ ( ಮಡಿಯಾಗಿ )ಯೇ ಊಟ ಮಾಡುವ ಬ್ರಾಹ್ಮಣನು ಸಂಧ್ಯಾವಂದನೆಗಳನ್ನೇಕೆ ಮಾಡಬೇಕು, ಸ್ನಾನವಾದಾಗ ಅವಾಚ್ಯವನೇಕೆ ನುಡಿಯಬೇಕು, ಮತ್ತೆ ಮತ್ತೆ ಸಂಶಯದಿಂದ ಸ್ನಾನವನ್ನೇ ಮಾಡಬೇಕು ?

೪೭೩. ಸೃಷ್ಟಿಯಲ್ಲಿ ಜಿನ ಧರ್ಮ | ಪಟ್ಟಗಟ್ಟಿರುತ್ತಿರಲು |
ಕೆಟ್ಟಿರೆ ಕೆಡಗು ಜಗವೆಲ್ಲ, ತಲೆಹೋದ |
ಅಟ್ಟೆಯಂತಕ್ಕು ಸರ್ವಜ್ಞ ||

ಇಡೀ ಸೃಷ್ಠಿಯಲ್ಲಿ ಜೈನ ಧರ್ಮವೇ ಶ್ರೇಷ್ಠವೆಂದು ಪ್ರಸಾರವಾದರೆ (ಆಗಲಿ ಉಪಾಯವಿಲ್ಲ) ಜಗತ್ತೆ ಕೆಟ್ಟುಹೋಗುವದು, ರುಂಡವಿಲ್ಲದ ಧಡ ದಂತಾಗುವದು (ಈ ಜಗವು.)

೪೭೪. ಕೊಲ್ಲುವ ಧರ್ಮವನೊಯ್ದು | ಒಲೆಯೊಳಗೆ ಇಕ್ಕುವ |
ಕೊಲಲಾಗದೆಂಬ ಜೈನ ಮತವೆನ್ನ |
ತಲೆಯಮೇಲಿರಲಿ ಸರ್ವಜ್ಞ ||

(ಕೊಲ್ಲುವಂಥ) ಯಜ್ಞ-ಯಾಗಾದಿಗಳನ್ನು ಮಾಡುವ ಧರ್ಮವನ್ನು ಸುಡು, ಪ್ರಾಣಿವಧೆ ಮಾಡಬಾರದೆಂದು ಹೇಳುವ ಜೈನಮತವು ಪೂಜ್ಯ ವಾದುದು, (ತನ್ನ ತಲೆಯ ಮೇಲಿರಲಿ ಎಂದು ಸರ್ವಜ್ಞನು ಹೇಳುವನು.)

೪೭೫. ಆದಿಯಲಿ ಜಿನರಿಗೆಲ್ಲ | ವೇದದಲ್ಲಿ ಹುಸಿಯಿಲ್ಲ |
ವಾದದಿಂದಾವ ಧನವಿಲ್ಲ, ಸ್ವರ್ಗದಲಿ |
ಮಾದಿಗರೇ ಇಲ್ಲ ಸರ್ವಜ್ಞ ||

ಜೈನಧರ್ಮವು ಆದಿ ಬುನಾದಿ ಕಾಲದ್ದಲ್ಲ, ವೇದದಲ್ಲಿ ಸುಳ್ಳೆಂಬುದೇ ಇಲ್ಲ, ವಾದ-ವಿವಾದದಿಂದ ಸಿರಿವಂತನಾಗುವದಿಲ್ಲ, ಅದರಂತೆ ಸ್ವರ್ಗದಲ್ಲಿ ಅಂತ್ಯಜರೇ ಇಲ್ಲ, (ಅದರಂತೆ ದೇವರ ದೃಷ್ಟಿಯಲ್ಲಿ ಎಲ್ಲರೂ ಸಮಾನರು ಎಂದರ್ಥ. )

೪೭೬. ಮುತ್ತು ಮುದುಕಿಗೆ ಏಕೆ ? | ತೊತ್ತೇಕೆ ಗುರುಗಳಿಗೆ |
ಬತ್ತಿದ ಕೆರೆಗೆ ಮಿಗವೇಕೆ ? ಶ್ರವಣರಿಗೆ |
ಮಿಥ್ಯತನವೇಕೆ ಸರ್ವಜ್ಞ ||

ಮುದುಕಿಗೆ ಮುತ್ತಿನ ಉಪಯೋಗವಿಲ್ಲ, ಗುರುಗಳಿಗೆ ಸೇವಕಿಯು ಅನಾವಶ್ಯಕ, ಬತ್ತಿದ ಕೆರೆಗೆ (ನೀರು ಕುಡಿಯಲು) ಕಾಡು ಹಂದಿಯು ಬರು ವದೇ ? ಅದರಂತೆ ಜೈನ ಸನ್ಯಾಸಿಗೆ ಸುಳ್ಳುತನವೇಕೆ ? ( ಸತ್ಯದಿಂದ ಅವನಿ ರಬೇಕು.)

೪೭೭. ಮೊಸರು ಇಲ್ಲದ ಊಟ । ಪಸರವಿಲ್ಲದ ಹರದ ।
ಹಸನವಿಲ್ಲದವಳ ರತಿಕೂಟ, ಜಿನನ ಬಾಯ್ ।
ಕಿಸುರುಳದಂತೆ ಸರ್ವಜ್ಞ ॥

ಮೊಸರು ಇಲ್ಲದ ಊಟವೂ, ತಾಮ್ರ ಹಿತ್ತಾಳೆಯ ಅಂಗಡಿಗಳಿಲ್ಲದ ಪೇಟೆ, ಸರಸ ಸಲ್ಲಾಪಗಳನ್ನು ತೋರದವಳೊಡನೆ ನಡೆಸಿದ ಸಂಭೋಗ, ಇವೆಲ್ಲ ಜೈನ ಮತದವನ ಕೊಳಚೆಯಂತೆ, ಹಸಿವೆಯಾಗಿರುವ ಬಾಯಿಯಂತೆ ಇರುವವು.

೪೭೮. ಮೂರು ಗಾವುದವನ್ನು । ಹಾರಬಹುದೆಂದಿಹರೆ ।
ಹಾರಬಹುದೆಂದು ಎನಬೇಕು, ಮೂರ್ಖನೊಡ ।
ಹೋರಬೇಡೆಂದ ಸರ್ವಜ್ಞ ॥

ಮೂರ್ಖನು 'ಮೂರು ಗಾವುದವನ್ನು ಸಹಜವಾಗಿ ಹಾರಬಹುದು' ಎಂದರೆ "ಹೌದು, ಹಾರಬಹುದು" ಎಂದು ಉತ್ತರ ಕೊಡಬೇಕೇ ವಿನಃ ಅವನೊಡನೆ ವಾದಕ್ಕೆ ನಿಲ್ಲಬಾರದು.

೪೭೯. ಬಸವನೆನಗೆ ನಿರೂ । ಪಿಸಿದ ಕಾಲಜ್ಞಾನ ।
ಭಸಿತವನಿಟ್ಟು, ಮರ್ತ್ಯರಿರವನು ನಿಮ್ಮ ।
ಶಿಶುವಾಗಿ ಪೇಳ್ವೆ ಸರ್ವಜ್ಞ ॥

ಮಾನವರ ಜೀವನದ ಬಗ್ಗೆ ಬಸವೇಶ್ವರನು ನನಗೆ ನಿರೂಪಿಸಿದ ಕಾಲಜ್ಞಾನವನ್ನು ವಿಭೂತಿಯನ್ನಿಟ್ಟು ಹೇಳುವೆನು. ( ನಾನೊಬ್ಬ ) ಕೂಸು ಎಂದು ತಿಳಿದು ಕೇಳಿರಿ (ಎಂದು ಸರ್ವಜ್ಞನು ಹೇಳುತ್ತಾನೆ.)

೪೮೦. ಒಪ್ಪಭಸಿನವನಿಟ್ಟು । ಕಪ್ಪುರವೀಳೆಯ ಕೊಟ್ಟು ।
ಕಪ್ಪು ಕೊರಳಿನ ಕರುಣದಿ ಇದನರಿದು ।
ಒಪ್ಪಿ ಹೇಳಿದನು ಸರ್ವಜ್ಞ ॥

ವಿಭೂತಿಯನ್ನು ಅಂದವಾಗಿ ಧರಿಸಿ, ಕರ್ಪೂರದ ವೀಳ್ಯೆಯನ್ನು ಕೊಟ್ಟು ನೀಲಕಂಠ (ಶಿವ) ನ ದಯೆಯಿಂದ ( ಭವಿಷ್ಯವನ್ನು ) ಅರಿತು ಸಂತೋಷದಿಂದ (ಸರ್ವಜ್ಞನು) ಹೇಳಿದನು.

೪೮೧. ವೀರ ಬಸವಂತನು | ಧೀರ ಬಿಜ್ಜಳ ತಾನು |
ಮೀರಿ ಕಲಿದೇವ ನಡೆದಾನು ಅವನೊಡನೆ |
ಹೋರುವವರಿಲ್ಲ ಸರ್ವಜ್ಞ ||

ವೀರಾಧಿವೀರನಾದ ಬಸವಂತನು ಅರಸನಾದ ಬಿಜ್ಜಳನ ವೇಗವನ್ನು ಮೀರಿ ಕಲಿಯುಗದ ದೇವರೆಂಬಂತೆ ನಡೆದು ಬಂದನು. ಇವನೊಡನೆ ಸರಿ ಯಾರು ಈ ಜಗದಲ್ಲಿ.

೪೮೨. ಮಳೆಗಳನು ಕುಡಿದಿಹನು | ಬೆಳೆಗಳನು ಮುಕ್ಕಿಹನು |
ಬಳಗಗಳನೆಲ್ಲ ಮುರಿದಿಹನು ಜಗದೊಳಗೆ |
ಉಳಿವರಿನ್ನಿಲ್ಲ ಸರ್ವಜ್ಞ ||

( ಪ್ರಳಯ ಕಾಲದಲ್ಲಿ ಶಿವನು ) ಮಳೆ ಬಾರದಂತೆ ಮಾಡಿದನು, ಈ ಬೆಳೆಗಳನ್ನೂ ಕಮರಿಸಿದನು, ಜನರನ್ನೆಲ್ಲ ಕೊಂದುಬಿಟ್ಟನು. ಅಂದ ಮೇಲೆ ಇನ್ನಾರು ಉಳಿದರು ? (ಯಾರೂ ಉಳಿಯಲಿಲ್ಲವೆಂದು ಅರ್ಥ.)

೪೮೩. ಅಂದು ರಾಮನು ಬಂದು | ಸಂದುದಿರ್ಸಾಸಿರವ |
ಮುಂದೆ ಬಂದಿಹನು ವೀರ ಬಸವಂತ ತಾ |
ಕುಂದದಿಳೆಗೆಂದ ಸರ್ವಜ್ಞ ||

ಹಿಂದಕ್ಕೆ ರಾಮಾವತಾರವಾಗಿ ಸಾವಿರಗಟ್ಲೆ ವರುಷವಾಯಿತು, ಅವನ ತರುವಾಯ ಪ್ರಕಾಶಮಾನವಾಗಿ ಭೂಮಿಗೆ ಇಳಿದವನೆಂದರೆ ವೀರ ಬಸವಂತನೇ ಸರಿ.

೪೮೪. ಜಾಜೀಯು ಹೂ ಲೇಸು | ತೇಜಿವಾಹನಲೇಸು |
ರಾಜಮಂದಿರದೊಳಿರಲೇಸು ತಪ್ಪುಗಳ |
ಮಾಜುವದೇ ಲೇಸು ಸರ್ವಜ್ಞ ||

ಜಾಜೀ ಹೂ ಬಹು ಸೊಗಸು, ಕುದುರೆಯ ಸವಾರಿಯು ಒಳ್ಳೇದು, ಅರಮನೆಯ ವಾಸವು ಸುಖಕರವು, ಅದರಂತೆ ( ಹೆರವರ ) ತಪ್ಪುಗಳನ್ನು ಕ್ಷಮಿಸುವದು ಬಹಳ ಶ್ರೇಷ್ಠವಾದುದು,

೪೮೫. ಉದ್ದಿನವಡೆ ಲೇಸು | ಬುದ್ಧಿಯ ನುಡಿ ಲೇಸು |
ಬಿದ್ದೊಡವೆ ಕೈಗೆ ಬರಲೇಸು, ಶಿಶುವಿಗೆ |
ಮುದ್ದಾಟ ಲೇಸು ಸರ್ವಜ್ಞ ||

ಉದ್ದಿನವಡೆಯು ರುಚಿಕರವಾದದು, ಬುದ್ಧಿಯ ಮಾತುಗಳು ಹಿತಕರವಾದವುಗಳು, ಕಳೆದುಕೊಂಡ (ವಸ್ತುವು)ದ್ದು ಸಿಕ್ಕರೆ ಬಹಳ ಸಂತೋಷ, ಅದರಂತೆ ಮಗುವನ್ನು ಮುದ್ದಿಸುವದು ಸುಖದಾಯಕವಾದದು.

೪೮೬. ಅಳೆ ಲೇಸು ಗೊಲ್ಲಂಗೆ | ಮಳೆ ಲೇಸು ಕಳ್ಳಂಗೆ |
ಬಲೆ ಲೇಸು ಮೀನ ಹಿಡಿವಂಗೆ, ಕುರುಡಂಗೆ |
ಸುಳಿದಾಟ ಲೇಸು ಸರ್ವಜ್ಞ ||

ಗೌಳಿಗಳಿಗೆ ಮಜ್ಜಿಗೆಯು ಅವಶ್ಯ, ಮಳೆ ಬಂದರೆ ಕಳ್ಳನಿಗೆ ಬಹಳ ಅನುಕೂಲ, ಮೀನಗಾರನಿಗೆ ಬಲೆಯು ಅವಶ್ಯವಾಗಿ ಬೇಕು ( ಮೀನ ಹಿಡಿದು ಉಪಜೀವಿಸುವದಕ್ಕಾಗಿ ) ಕುರುಡನಿಗೆ ಅತ್ತಿತ್ತ ತಿರುಗಾಡುವದು ಸೇರುವದು.

೪೮೭. ಅಕ್ಕಿಯೋಗರ ಲೇಸು | ಮೆಕ್ಕೆ ಹಿಂಡಿಯು ಲೇಸು |
ಮಕ್ಕಳನ್ನು ಹೆರುವ ಸತಿ ಲೇಸು, ಜಗಕೆಲ್ಲ |
ರೊಕ್ಕವೇ ಲೇಸು ಸರ್ವಜ್ಞ ||

(ಅನ್ನಕ್ಕೆ) ಅಡಿಗೆಗೆ ಅಕ್ಕಿಯು ಬೇಕು, ಮೆಕ್ಕೆಕಾಯಿಯ ಚಟ್ಣಿಯು ಬಹು ರುಚಿಕರವು, ಮಕ್ಕಳನ್ನು ಪಡೆಯುತ್ತಿರುವ ಮಡದಿಯಿದ್ದರೆ ಸುಖಕರವು, ಜಗತ್ತಿಗೆಲ್ಲ ರೊಕವು ಅತ್ಯವಶ್ಯಕವು.

೪೮೮. ಇಂಬಿನ ಮನೆ ಲೇಸು | ಶಂಭುವಿನ ದಯೆ ಲೇಸು |
ನಂಬುಗೆಯನೀವ ನೃಪ ಲೇಸು, ಕೆರೆಭಾವಿ |
ತುಂಬಿರಲು ಲೇಸು ಸರ್ವಜ್ಞ ||

ಪ್ರಶಸ್ತವಾದ ದೊಡ್ಡ ಮನೆಯಿದ್ದರೆ ಒಳ್ಳೇದು. ಶಿವನ ದಯೆಯಿದ್ದರಂತೂ ಅತ್ಯಂತ ಸೊಗಸು. ವಿಶ್ವಾಸವಿಟ್ಟವರನ್ನು ಕಾಯುವ ಅರಸನಿರಬೇಕು ಕೆರೆ ಭಾವಿಗಳು ಸದಾಕಾಲ ತುಂಬಿಕೊಂಡಿರುವದು ಹಿತಕರವು.

೪೮೯. ಬಾಳೆಯೂವನ ಲೇಸು | ಮೂಳಿಗೆಯು ಮನೆ ಲೇಸು |
ಬಾಳುವರೆ ಕೆಂಚ ಸತಿ ಲೇಸು ಮೆಲ್ಲಲ್ಕೆ |
ಹೋಳಿಗೆಯುು ಲೇಸು ಸರ್ವಜ್ಞ ||

ಬಾಳೆಯವನಿದ್ದರೆ ಸುಖ, ಮಾಳಿಗೆಯ ಮನೆಯು (ಬೆಚ್ಚಗೆ) ವಾಸಿಸಲು ಒಳ್ಳೇದು, ಸಂಸಾರ ಮಾಡಿಕೊಂಡಿರಲು ಕೆಂಪಗಿರುವ ಪತ್ನಿಯಿದ್ದರೆ ಆಂನದವು, ತಿನ್ನಲು ಹೋಳಿಗೆಯುು ಸುಖವೀಯುವದು.

೪೯೦. ಜಾಣೆಯು ನುಡಿ ಲೇಸು | ವೀಣೆಯು ಸ್ವರಲೇಸು |
ಮೂಣದಲೆ ವದನ ಶುಚಿ ಲೇಸು, ಕೂರ್ಪವರ |
ಕಾಣುವದೇ ಲೇಸು ಸರ್ವಜ್ಞ ||

ಜಾಣಳಾದ (ಹೆಂಡತಿಯ) ಮಾತುಗಳು ಸೊಗಸು, ವೀಣೆಯ ಸ್ವರವು ಬಹು ಇಂಪು, ಸದಾಕಾಲ ಸ್ವಚ್ಛವಾಗಿಟ್ಟಿರುವ ಬಾಯಿಯು ಒಳ್ಳೇದು, ಗಂಡಂದಿರನ್ನು ಕಾಣುವದು (ಹೆಂಡಂದಿರಿಗೆ) ಬಹಳ ಆಂನದದಾಯಕವು.

೪೯೧. ಪುಣ್ಯ ಪಾಪಗಳೆಂಬ | ತಿಣ್ಣ ಭೇಧಗಳಿಂದ |
ತಣ್ಣಗೀಜಗವು ನಡೆದಿಹುದು ಅಲ್ಲದಡೆ |
ನುಣ್ಣಗಾಗಿಹುದು ಸರ್ವಜ್ಞ ||

ಪಾಪ ಪುಣ್ಯಗಳಲ್ಲಿ ದೊಡ್ಡ ಭೇದವಿರುವದರಿಂದಲೇ ಈ ಜಗತ್ತು ಸುಸೂತ್ರವಾಗಿ ಸಾಗಿರುವದು, ಇಲ್ಲದೇ ಇದ್ದರೆ (ಪಾಪಕೃತ್ಯಗಳಿಂದ) ಇದು ನುಚ್ಚು-ನೂರಾಗಿ ಪುಡಿ- ಪುಡಿಯಾಗುತ್ತಿತ್ತು.

೪೯೨. ಕಿರಿಯಂದಿನಾ ಪಾಪ | ನೆರೆಬಂದು ಹೋದೀತೇ ?
ಅರಿವಿಂಗೆ ಹಿರಿದು ಕಿರಿದಿಲ್ಲ, ಇದನು ನೀ |
ನರಿದು ನೋಡೆಂದ ಸರ್ವಜ್ಞ ||

ಚಿಕ್ಕವರಿದ್ದಾಗ ಮಾಡಿದ ಪಾಪವು ಮುದುಕರಾದಾಕ್ಷಣ ಹೋದೀತೇ ? ದೇವರ ದೃಷ್ಟಿಯಲ್ಲಿ ಚಿಕ್ಕವ, ದೊಡ್ಡವನೆಂಬ ಭೇದಭಾವವಿಲ್ಲ, ಇದನ್ನು ತಿಳಿದು ನೀನು (ಸತ್ಪಥದಲ್ಲಿ) ನಡೆಯಬೇಕು.

೪೯೩. ಹಿಂದೆ ಪಾಪವ ಮಾಡಿ | ಮುಂದೆ ಪುಣ್ಯವು ಹೇಗೆ ? |
ಹಿಂದೆ ಮುಂದರಿದು ನಡೆಯುದಿರೆ ನರಕದಲಿ |
ಬೆಂದು ಸಾಯುವದು ಸರ್ವಜ್ಞ ||

ಹಿಂದಕ್ಕೆ ಪಾಪಗಳನ್ನು ಮಾಡಿ, ಮುಂದೆ ಪುಣ್ಯ ಕಾರ್ಯಗಳನ್ನು ಮಾಡಿದರೆ ( ಹಿಂದಿನ ಪಾಪಕರ್ಮವು ಹೋದೀತೇ ? ಇಲ್ಲ. ) ಆದ್ದರಿಂದ ಹಿಂದು ಮುಂದು ನೋಡಿ ಜಾಗರೂಕತೆಯಿಂದ ಬಾಳುವೆ ಮಾಡದಿದ್ದರೆ ನರಕದ ದುಃಖ ತಪ್ಪುವದಿಲ್ಲ.

೪೯೪. ಹರೆಯಲ್ಲಿನಾ ಪಾಪ | ಕೆರೆಯಲ್ಲಿ ಪೋಪುದೇ ? |
ಒರೆಗಲ್ಲಿನಂತೆ ವಿಧಿಯಿರಲು, ನೀತಿಯು |
ಇರವುಬೇಕೆಂದ ಸರ್ವಜ್ಞ ||

ತಾರುಣ್ಯದಲ್ಲಿ ಮಾಡಿದ ಪಾಪವು ತೀರ್ಥಯಾತ್ರೆಯಿಂದ ಹೋಗುವದೇ ? (ಇಲ್ಲ) ಪ್ರಾರಬ್ಧವು ಒರೆಗಲ್ಲಿನಂತೆ ಎಲ್ಲವನ್ನೂ ತಿಕ್ಕಿ ನೋಡುತ್ತ ಹೋಗುವದು; ಆದುದರಿಂದ ನೀತಿಯ ಬಾಳುವೆಯು ಅವಶ್ಯವಾದುದು.

೪೯೫. ಅರಿತು ಮಾಡಿದ ಪಾಪ | ಮರೆತರದು ಪೋಪುದೇ ? |
ಮರೆತರೆ ಮರವ ಬಿಡಿಸುವದು, ಕೊರತೆಯದು |
ಅರಿತು ನೋಡೆಂದ ಸರ್ವಜ್ಞ ||

ತಿಳಿದೂ ತಿಳಿದೂ ಮಾಡಿದ ಪಾಪವು (ತಾನು ಅಥವಾ ಜನರು) ಮರೆತರೆ ಅದು ಹೋಗುವದೇ ? (ಇಲ್ಲ) ಇಷ್ಟೇ ಅಲ್ಲ, ಮರೆಯದಂತೆ ಅದು ನೆನಪು ಕೊಡುತ್ತಲೇ ಇರುವದು; ಇಂಥ ಕೊರತೆಯನ್ನು ಚನ್ನಾಗಿ ತಿಳಿದು ಬಾಳುವೆ ಮಾಡಬೇಕು.

೪೯೬. ಒಮ್ಮೆ ಸೀತರೆ ಹೊಲ್ಲ | ಇಮ್ಮೆ ಸೀತರೆ ಲೇಸು |
ಕೆಮ್ಮಿ ಕೇಕರಿಸಿ ಉಗುಳುವ ಆ ಲೇಸು |
ಬೊಮ್ಮಗೂ ಇಲ್ಲ ಸರ್ವಜ್ಞ ||

( ಶಕುನದಲ್ಲಿ ) ಒಮ್ಮೆ ಸೀತರೆ ಅಪಶಕುನ, ಎರಡು ಸಲ ಸೀತರೆ ಕಾರ್ಯಸಿದ್ಧಿ, ಕೆಮ್ಮಿ ಕೇಕರಿಸಿ ಉಗುಳಿದರಂತೂ ಆಗಿನ ಸಂದರ್ಭದ ಕಾರ್ಯಸಿದ್ಧಿ, (ಬ್ರಹ್ಮ ಪದಕ್ಕಿಂತಲೂ ಹೆಚ್ಚಿನ ಫಲ ಬರುವದೆಂಬುದು ರೂಢಿಯ ಮಾತು.)

೪೯೭. ಏನು ಮನ್ನಿಸದಿರಲು । ಸೀನು ಮನ್ನಿಸಬೇಕು ।
ಸೀನು ಮನ್ನಿಸದೆ ಹೋಗಿಹರೆ, ಹೋದಲ್ಲಿ ।
ಹಾನಿಯೇ ಬಕ್ಕು ಸರ್ವಜ್ಞ ॥

ಯಾವ ಶಕುನವನ್ನು ಲಕ್ಷಿಸದಿದ್ದರೂ ಸರಿ, ಒಂಟಿ ಸೀನು ಸೀತದ್ದನ್ನು ಕಂಡು ತಡೆಯಲೇಬೇಕು, ಇದನ್ನು ತಿರಸ್ಕರಿಸಿ ಮುಂದೆ ಹೋದರೆ ಎಲ್ಲ ಕಾರ್ಯಗಳೂ ಕೆಟ್ಟೇ ಹೋಗುವವು.

೪೯೮. ತಂತ್ರ ತಾಂಬೂಲದಲಿ । ಮಂತ್ರಗಾರುಡಿಯಲ್ಲಿ ।
ಯಂತ್ರ ಜೋಯಿಸನ ಗ್ರಹಣದಲಿ ಇವು ಮೂರು ।
ಎಂತು ಹುಸಿಯೆಂದ ಸರ್ವಜ್ಞ ॥

ಮಂತ್ರಿಸಿ ತಾಂಬೂಲ ಕೊಡುವದೂ, ಮಾಟ ಮೋಡಿ ಮಾಡಿ ದಾರ ಕಟ್ಟುವದೂ, ಜೋಯಿಸನು ಮಂತ್ರ ಬರೆದು ತಾಯಿತ ಕಟ್ಟುವದೂ ಇವು ಮೂರು ಶುದ್ಧ ಸುಳ್ಳು.

೪೯೯. ಶಂಖ ಹುಟ್ಟಿದ ನಾಡು । ಬಿಂಕವನು ಏನೆಂಬೆ ? ।
ಶಂಕರನ ಪೂಜೆ ಮನೆ ಮನೆಗೆ ಮಿಗಿಲಾಗಿ ।
ತೆಂಕಲುಂಟೆಂದು ಸರ್ವಜ್ಞ ॥

ಶಂಖವು ದೊರೆಯುದ ದೇಶದಲ್ಲಿದ್ದವರ ಸೊಕ್ಕೆಂಷ್ಟೆಂದು ಹೇಳಲಿ ! ಪ್ರತಿ ಮನೆಯಲ್ಲಿಯೂ ಶಿವಪೂಜೆಯನ್ನು ಮಾಡುತ್ತ ವೈಭವದಿಂದ ಈ ದಕ್ಷಿಣ ದೇಶದವರು ಇರುವರು.

೫೦೦. ರಾಗವೇ ಮೂಡಲು । ಯೋಗವೇ ಬಡಗಲು ।
ರೋಗವದು ಶುದ್ಧ ಪಡುವಲು ತೆಂಕಲು ।
ಭೋಗದ ಬೀಡು ಸರ್ವಜ್ಞ ॥

ಪೂರ್ವ ದಿಕ್ಕಿನಲ್ಲಿರುವವರು ಸಿಟ್ಟಿನವರು, ಉತ್ತರದವರು ಯೋಗಿಗಳು, ಪಶ್ಚಿಮದಲ್ಲಿರುವವರು ಸದಾ ರೋಗಿಗಳು, ಆದರೆ ದಕ್ಷಿಣದವರು ಸದಾ ಸುಖದಲ್ಲಿಯೇ ಲೋಲಾಡತಕ್ಕವರು.

೫೦೧. ಅಟ್ಟೆಂಬುದು ಮೂಡಲು | ಸುಟ್ಟೆಂಬುದು ಬಡಗಲು |
ತಟ್ಟೆಲುಂಬುವದು ಪಡುವಲು, ತೆಂಕಣದ |
ಮುಷ್ಟಿಲುಂಬುವದು ಸರ್ವಜ್ಞ ||

ಪೂರ್ವ ದಿಕ್ಕಿನವರು ಆಹಾರವನ್ನು (ಅಟ್ಟಿಸ) ಕುದಿಸಿ ಉಣ್ಣುವರು, ಉತ್ತರದವರ ಸುಟ್ಟು ತಿನ್ನುವರು, ಪಶ್ಚಿಮದವರು ತಾಟಿನಲ್ಲಿ ಬಡಿಸಿ ಕೊಂಡು ಊಟ ಮಾಡುವರು, ದಕ್ಷಿಣದವರು ಮುಷ್ಟಿಯಿಂದ ಉಂಡೆ ಕಟ್ಟಿ ಕಟ್ಟಿ ಬಾಯಿಯಲ್ಲಿ ಹಾಕಿಕೊಂಡು ತಿನ್ನುವರು.

೫೦೨. ಉಡುಹೀನ ಮೂಡಲು | ನುಡಿಹೀನ ಬಡಗಲು |
ಕಡುಕೋಪದವರು ಪಡುವಲೊಳು, ತೆಂಕಣದಲಿ |
ಸಡಗರಬಲಿಹರು ಸರ್ವಜ್ಞ ||

ಪೂರ್ವ ದಿಕ್ಕಿನವರು ಅರಬತ್ತಲೆ ಇರುವರು, ಉತ್ತರದವರು ಸುಳ್ಳಾಡುವವರು, ಪಶ್ಚಿಮದವರು ಬಹಳ ಸಿಟ್ಟಿನವರು, ದಕ್ಷಿಣದೇಶದವರು ಸೊಗಸಾಗಿ ಜೀವನ ಸಾಗಿಸತಕ್ಕವರಾಗಿದ್ದಾರೆ.

೫೦೩. ಕಣಕದಾ ಕಡುಬಾಗಿ | ಮಣಕೆಮ್ಮೆ ಹಯನಾಗಿ |
ಕುಣಿಕುಣಿದು ಕಡೆವ ಸತಿಯಾಗಿ, ಬೆಳವಲದ |
ಅಣಕ ನೋಡೆಂದ ಸರ್ವಜ್ಞ ||

ಕಣಕದಿಂದ ಮಾಡಿದ ಕಡುಬಿನ ಊಟ, ಗಿಡ್ಡ ಎಮ್ಮೆಗಳ ಹಯನವು ಇದ್ದು ಮಜ್ಜಿಗೆಯನ್ನು ಕುಣಿಯುತ್ತ ಉತ್ಸಾಹದಿಂದ ಕಡೆದು ಬೆಣ್ಣೆ ತೆಗೆಯುವ ಹೆಂಡತಿ ಇದ್ದರೆ ಬೈಲುಸೀಮೆಯ ವೈಯ್ಯಾರ ಸೊಗಸುಗಳನ್ನು ವರ್ಣಿಸಲಳವಲ್ಲ.

೫೦೪. ಮೂಡಲದ ಹಸ್ತಿನಿಗೆ | ಬಡಗಲದು | ಚಿತ್ತಿನಿಗೆ |
ಪಡುವಲದು ಶುದ್ಧ ಶಂಖಿನಿಗೆ, ತೆಂಕಲಿನ |
ಬೀಡು ಪದ್ಮಿನಿಗೆ ಸರ್ವಜ್ಞ ||

ಹಸ್ತಿನೀ ಜಾತಿಯ ಸ್ತ್ರೀಯರು ಪೂರ್ವ ದೇಶದಲ್ಲಿಯೂ, ಚಿತ್ತಿನೀ ಜಾತೀಯ ಸ್ತ್ರೀಯರು ಉತ್ತರ ದೇಶದಲ್ಲಿಯೂ, ಕೇವಲ ಶಂಖಿನೀ ಸ್ತ್ರೀಯರು ಪಶ್ಚಿಮ ದೇಶಗಳಲ್ಲಿಯೂ, ಪದ್ಮಿನೀ ಜಾತಿಯ ಸ್ತ್ರೀಯರು ದಕ್ಷಿಣ ದೇಶದಲ್ಲಿಯೂ ವಾಸಿಸುತ್ತಾರೆ.

೫೦೫. ಮೂಡಲದು ವಿಟನಿಂಗೆ | ಬಡಗಲದು ವಿದುಷಕಗೆ |
ಪಡುವಲದು ನಾಗರಿಕಗಂ ತೆಂಕಲದು |
ಪೀಠಮರ್ದನಗೆ ಸರ್ವಜ್ಞ ||

ಪರಸ್ತ್ರೀ ಲೋಲುಪನು ಪೂರ್ವ ದೇಶಕ್ಕೂ, ಹಾಸ್ಯಗಾರನು ಉತ್ತರಕ್ಕೂ. ಸರಲ ಜೀವನ ಸಾಗಿಸುವವನು ಪಶ್ಚಿಮಕ್ಕೂ ಹೋಗಬೇಕು. ವಿಲಾಸಿಗಳೂ ಪದ್ಮಿನಿ ಜಾತಿಯ ಸ್ತ್ರೀಯರಿಗೆ ತಕ್ಕ ಪುರುಷರೂ, ದಕ್ಷಿಣ ದೇಶಗಳಿಗೆ ಹೋಗಬೇಕು.

೫೦೬. ಕಿರಿನೋಟ ವಿಟನಿಂಗೆ | ಅರೆನೋಟ ವಿದುಷಕಗೆ |
ನೆರೆನೋಟ ನಾಗರಿಕಗೆ, ಪೀಠಮರ್ದನಗೆ |
ಬೀರಿನೋಟವೆಂದ ಸರ್ವಜ್ಞ ||

ವಿಟನು ವಾರಿಗಣ್ಣಿನಿಂದಲೂ. ವಿದೂಷಕನು ಅರ್ಧಮುಚ್ಚಿದ ಕಣ್ಣುಗಳಿಂದಲೂ, ನಾಗರಿಕನು ಮರ್ಯಾದೆಯಿಂದಲೂ, ವಿಲಾಸಿಯು ಪೂರ್ಣ ತೆರೆದ ಕಣ್ಣುಗಳಿಂದಲೂ ನೋಡುತ್ತಾನೆ.

೫೦೭. ಹಸ್ತಿನಿಗೆ ಜಂಘೆಗಳು, | ಚಿತ್ತಿನಿಗೆ ಹರಡುಗಳು |
ಹಸ್ತಿ ಮರ್ದನವು ಶಂಖಿನಿಗೆ, ಪದ್ಮಿನಿಗೆ |
ಮಸ್ತಕವು ನೋಡ ಸರ್ವಜ್ಞ ||

ಹಸ್ತಿನೀ ಸ್ತ್ರೀಯ ನಿತಂಬಗಳನ್ನೂ, ಚಿತ್ತಿನಿಯ ಪಾದಗಳ ಹರಡುಗಳನ್ನೂ, ಶಂಖಿನಿಯ ಸಮಸ್ತದೇಹದ ವೈಯ್ಯಾರವನ್ನೂ ಪದ್ಮಿನಿಯ ಶಿರವನ್ನೂ ನೋಡಬೇಕು.

೫೦೮. ಒಲೆಯುುವಳು ಹಸ್ತಿನಿಯುು | ಮಲೆಯುುವಳು
ಚಿತ್ತಿನಿಯುು |
ತಲೆವಾಗಿ ನಡೆವಳು ಶಂಖಿನಿಯುು, ಪದ್ಮಿನಿಯುು |
ಸುಲುಭವಾಗಿಹಳು ಸರ್ವಜ್ಞ ||

ಹಸ್ತಿನಿಯು ಒಲಿಯುವಳು. (ಕಾಮಿನಿಯಾದುದರಿಂದ) ಚಿತ್ತಿನಿಯು ಮಲಗಿಬಿಡುವಳು, (ಆಲಸಿಯಾದುದರಿಂದ) ಶಂಖಿನಿಯು ತಲೆಬಾಗಿಸಿ ಸಾಗುವಳು, (ಕುಟಿಲಳಾದುದರಿಂದ) ಪದ್ಮಿನಿಯು ಸುಲಭವಾಗಿ ಸರ್ವಸುಖ ಕೊಡುವಳು.

೫೦೯. ಲೆಕ್ಕಕ್ಕೆ ದುಕ್ಕಿಲ್ಲ । ಬೆಕ್ಕಿಂಗೆ ವ್ರತವಿಲ್ಲ ।
ಸಿಕ್ಕು ಬಂಧನದಿ ಸುಖವಿಲ್ಲ ನಾರಿಗೆ ।
ಸಿಕ್ಕದವರಿಲ್ಲ ಸರ್ವಜ್ಞ ॥

ಲೆಕ್ಕಕ್ಕೆ ಪರಾವಾರವಿಲ್ಲ. ವ್ರತ ನಿಯಮಾದಿಗಳು ಬೆಕ್ಕಿಗಿಲ್ಲ. ಪರಾಧೀನದಲ್ಲಿ ಸುಖವಿಲ್ಲ, ಆದರೆ ಹೆಂಗಸಿನ ಮೋಹಪಾಶದಲ್ಲಿ ಸಿಗದವರೇ ಇಲ್ಲ. (ಆ ಮೋಹಪಾಶದಲ್ಲಿರುವದು ಸುಖವೆಂದೆನಿಸುವದರಿಂದ ಹಾಗೆ ಬೀಳುವರು.)

೫೧೦. ತವಕದಾತುರದವಳ । ನವರತಿಯು ಒದಗಿರಲು ।
ಸವಿಮಾತು ಸೊಬಗು ಸುರಿಯುವ ಯುವತಿಯನು ।
ಅವುಕದವರಾರು ಸರ್ವಜ್ಞ ॥

ಉತ್ಸಾಹದಿಂದಲೂ, ಆತುರದಿಂದಲೂ ಬಂದಂಥ ಹರೆದವರ ಮತ್ತು ಸವಿಮಾತುಗಳನ್ನು ಆಡುತ್ತಲೂ, ಒನಪು ಒಯ್ಯಾರಗಳನ್ನು ತೋರುತ್ತಲೂ ಇರುವ ತರುಣಿಯನ್ನು ಅಪ್ಪಿಕೊಳ್ಳದೇ ಬಿಡುವಂಥವರಾರು? (ಯಾರೂ ಇಲ್ಲವೆಂದರ್ಥ.)

೫೧೧. ರತಿಕಲೆಯೊಳತಿ ಚದುರೆ । ಅತಿಮಿತಿಯು ಮಾತಿನೊಳು ।
ಖತಿಗಳೆದ ಮೊಗವು ಸೊಬಗಿನ ಸುದತಿ ಕಂ ।
ಡತಿ ಬಯಸದಿಹರೆ ಸರ್ವಜ್ಞ ॥

ರತಿಶಾಸ್ತ್ರವನ್ನು ಬಲ್ಲವಳೂ, ಮಿತಭಾಷಿಣಿಯೂ, ಸದಾ ಹಸನ್ಮುಖಿಯೂ, ಒನಪು ವೈಯಾರದಿಂದ ಒಡಗೂಡಿದವಳೂ ಆದ ಹೆಂಡತಿಯನ್ನು ಯಾರು ಬಯಸಲಿಕ್ಕಿಲ್ಲ.

೫೧೨. ಮತಿಯೊಳತಿ ಚದುರಾಗಿ । ರತಿಕೇಳಿಗೊಳಗಾಗಿ ।
ಅತಿಮೋಹ ಮುದುಮೊಗವಾಗಿ ಅಂಗನೆಯು ।
ನತಿಗಳೆದರಾರು ಸರ್ವಜ್ಞ ॥

ಮಾತಿನಲ್ಲಿ ಅತ್ಯಂತ ಜಾಣಳೂ, ಕಾಮಪೀಡಿತಳೂ, ಅತಿ ಮೋಹಕಳೂ, ಮುದ್ದಾದ ಮೊಗವುಳ್ಳವಳೂ ಆದ ಸ್ತ್ರೀಯನ್ನು ತಿರಸ್ಕರಿಸುವವರಾರು? (ಯಾರೂ ಇಲ್ಲ.)

೫೧೩. ವರತಪಸಿ ಸನ್ಯಾಸಿ | ಪರಮಯೋಗಿಯು ಮುನಿಯು |
ಸೆರೆಸಿಕ್ಕು ಮಾಯೆಯೊಳಗಾಗಿ ಇರುತಿರಲು |
ಪರರ ಪಾಡೇನು ಸರ್ವಜ್ಞ ||

ಘೋರ ತಪವನ್ನಾಚರಿಸಿದ ಸನ್ಯಾಸಿಯು (ವಿಶ್ವಾಮಿತ್ರ) ಮಹಾ ಯೋಗೀಶ್ವರರಾದ ಮುನಿಗಳು (ಪರಾಶರರು) ಸ್ತ್ರೀ ಮಹಾ ಮೋಹದಲ್ಲಿ ಸಿಕ್ಕು ಬಿದ್ದಿರುವಾಗ ಎರಡನೆಯವರ ಪಾಡೇನು ?

೫೧೪. ಅರಸನಿಲ್ಲದ ನಾಡು | ವರುಷವಿಲ್ಲದ ಬೆಳೆಯು |
ಹರುಷವಿಲ್ಲದಳ ಮನೆವಾರ್ತೆ, ಅರನಾರಿ |
ಪುರುಷನಂತಕ್ಕು ಸರ್ವಜ್ಞ ||

ಅರಸನಿಲ್ಲದ ದೇಶ, ಮಳೆಯಿಲ್ಲದ ಬೆಳೆ, ನಗುಮಾತು ( ಅಥವಾ ಮೊಗ ) ಇಲ್ಲದ ಹೆಂಡತಿಯಿದ್ದರೆ ಅವನು ಷಂಡನಿದ್ದರೆ (ಅರ್ಧಾಂಗವಾಯು ಬಂದವನಂತೆ) ಅವನ ಬಾಳು ಎಂದು ತಿಳಿಯಬೇಕು.

೫೧೫. ತೊಗೆಯಿಲ್ಲದೂಟ ಸಂ | ಪಿಗೆಯಿಲ್ಲದೆಲೆದೋಟ |
ನಗೆಯಿಲ್ಲದವಳ ಒಡನಾಟ, ಬೆರಣಿಯ |
ಹೊಗೆಯ ಕುಡಿದಂತೆ ಸರ್ವಜ್ಞ ||

ತೋವೆಯಿಲ್ಲದ ಊಟ, ಸಂಪಿಗೆ ಹೂವಿನ ಗಿಡಗಳಿಲ್ಲದ ( ಬಾಳೆ ಎಲೆಯ ) ತೋಟ ಮತ್ತು ನಗುವನ್ನರಿಯದವಳೊಡನೆ ಸಂಸಾರವು ಕುಳ್ಳಿನ ಹೊಗೆಯು ಗಂಟಲಲ್ಲಿ ಹೊಕ್ಕಂತೆ.

೫೧೬. ತೋವೆಯಿಲ್ಲದ ಊಟ | ಲೋವೆಯಿಲ್ಲದ ಮನೆಯು |
ನೋವನರಿಯದವಳ ಮನೆವಾರ್ತೆ ಸಿಹಿಯರಸಿ |
ಬೇವು ತಿಂದಂತೆ ಸರ್ವಜ್ಞ ||

ತೋವೆಯಿಲ್ಲದ ಊಟ, ಪಡಸಾಲೆಯಿಲ್ಲದ ಮನೆ ಮತ್ತು ಸುಖ ದುಃಖ ಗಳನ್ನು ಅರಿಯದವಳೊಡನೆ ಸಂಸಾರ ಮಾಡುವದೆಂದರೆ ಸಿಹಿ (ಪದಾರ್ಥ ವನ್ನು) ಆಶಿಸಿ ಬಂದು ಬೇವಿನತೊಪ್ಪಲವನ್ನು ತಿಂದಂತೆ ದುಃಖವಾಗುವದು.

೫೧೭. ಅಳಿಯಾಸೆ ಹೆಪ್ಪಿಂಗೆ | ಮಳೆಯಾಸೆ ಸಕಲರಿಗೆ |
ಬಲೆಯಾಸೆ ಮೀನ ಹಿಡಿವಂಗೆ, ಹಾದರಕೆ |
ಸುಳಿದಾಟದಾಶೆ ಸರ್ವಜ್ಞ ||

(ಹಾಲು) ಹೆಪ್ಪು ಹಾಕಲು ಮಜ್ಜಿಗೆಯು ಅವಶ್ಯಕವು. ಮಳೆಯು ಎಲ್ಲರಿಗೂ ಬೇಕಾದದ್ದು. ಮೀನುಗಾರನಿಗೆ ಬಲೆಯು ಬೇಕೇಬೇಕು. ಅದರಂತೆ ಸೂಳೆತನ ಮಾಡಲು ಅತ್ತಿತ್ತ ತಿರುಗಾಡುವದು ಅವಶ್ಯವಾಗಿರುವದು.

೫೧೮. ಪಡಿಯಾಸೆ ಹರದಂಗೆ | ಮಡಿಯಾಸೆ ವೇಶ್ಯೆಗೆ |
ಜಡೆಯಾಸೆ ಬೂದಿಗೊರವಂಗೆ, ಹಾದರಕೆ |
ಎಡೆಯಾಟದಾಸೆ ಸರ್ವಜ್ಞ ||

ವ್ಯಾಪಾರಸ್ಥನಿಗೆ (ಪಡಿ) ಅಳತೆಯು ಬೇಕು. ವೇಶ್ಯೆಗೆ ಸ್ವಚ್ಛವಾದ ವಸ್ತ್ರಗಳು ಬೇಕು. ಬೂದಿಬಡಕ ಭಿಕ್ಷುಕನಿಗೆ ಜಟಾ ಬೇಕು. ಹಾದರ ಮಾಡಲು ಸುಳಿದಾಟವು ಅವಶ್ಯವು.

೫೧೯. ಕಟ್ಟಾಶೆ ಅರಮನೆಗೆ | ಮೆಟ್ಟಾಶೆ ಕಾಲಿಂಗೆ |
ಪಟ್ಟಣದಾಶೆ ಹರದಂಗೆ, ಹಾದರಕೆ |
ಮುಟ್ಟಾಟದಾಶೆ ಸರ್ವಜ್ಞ ||

ಅರಮನೆಗೆ ಕಾಯಲು ಬಲಿಷ್ಠರಾದವರು ಬೇಕು. ಕಾಲಿಗೆ ಚಪ್ಪಲಿಯು ಅವಶ್ಯ. ವ್ಯಾಪಾರಸ್ಥನಿಗೆ ಪಟ್ಟಣದ ಆಶೆ ಇರುವದು. ಸೂಳೆತನಕ್ಕೆ ಒನಪು ವೈಯ್ಯಾರವು ಅವಶ್ಯವು.

೫೨೦. ನಾರುಬೇರಿಕ್ಕಿದರೆ | ನಾರಿಯರು ಒಲೆಯುವರೇ ? |
ನಾರಿಯರು, ಜಗವು ಒಲಿಯುವರೇ ಹೊನ್ನಿನ |
ಬೇರನಿಕ್ಕೆಂದ ಸರ್ವಜ್ಞ ||

(ಮಂತ್ರ ಮಾಡಿಸಿ) ಬಜಿಯನ್ನಿಟ್ಟರೆ ಸ್ತ್ರೀಯರು ಒಲಿದು ಬರುವರೇ ? (ಇಲ್ಲ) ಆದುದರಿಂದ ಸ್ತ್ರೀ ಮತ್ತು ಜಗತ್ತನ್ನು ಒಲಸಿಕೊಳ್ಳಬೇಕಾದರೆ ಬಂಗಾರದ ಬೇರನ್ನು ಎದುರಿಗೆ ಇಡು. (ಕೂಡಲೇ ಒಲಿದು ಬರುವರು. )

೩೨೧. ಆಕೆಯುನು ಕಂಡು ಮನೆ | ಯಾಕೆಯನು ಮರೆದಿಹರೆ |
ಹಾಕಿದ ಉಂಕೆ ಹರಿದಂತೆ, ಮನೆಯೊಳಿ |
ಪ್ಪಾಕೆ ತಾ ಕೆಡಗು ಸರ್ವಜ್ಞ ||

ಪರಸ್ತ್ರೀಯನ್ನು ಕಂಡು ಮನೆ ಹೆಂಡತಿಯನ್ನು ಮರೆಯಬಹುದೇ ? ಹಾಗೆ ಮರೆತದ್ದೇ ಆದರೆ ನೂಲು ಹೊಸೆಯುವ ಒಂಕಿಯು ಮುರಿದು ಲುಕ್ಸಾನವಾಗುವಂತೆ ಹೆಂಡತಿಯ ಸಿಟ್ಟಿನಿಂದ ಮನೆತನ ಕೆಡುವದು.

೩೨೨. ಕಚ್ಚಿದರೆ ಕಚ್ಚುವದು | ಕಿಚ್ಚಲ್ಲ ಚೇಳಲ್ಲ |
ಅಚ್ಚರ್ಯವಲ್ಲ ಅರಿದಲ್ಲಿ, ಈ ಮಾತು |
ನಿಶ್ಚಯವೆಂದ ಸರ್ವಜ್ಞ ||

(ನಾವು ಬಾಯಿಯಿಂದ) ಕಚ್ಚಿದರೆ ಅದೂ ಸಹ ಕಚ್ಚುವದು. ಆದರೆ ಅದು ಚೇಳಲ್ಲ, ಬೆಂಕಿಯೂ ಅಲ್ಲ. ತಿಳಿದರೆ ಆಶ್ಚರ್ಯವೂ ಅಲ್ಲ. ಈ ಮಾತು ಸತ್ಯ, ಅದಾವುದು ? (ಮೆಣಸು)

೩೨೩. ಹತ್ತು ಸಾವಿರ ಕಣ್ಣು | ನೆತ್ತಿಲಾದರೂ ಬಾಲ |
ಹತ್ತಿನಹುಳವ ಹಿಡಿಯುವದು ಕವಿ ಜನರ |
ವೊತ್ತವಿದ ಪೇಳಿ ಸರ್ವಜ್ಞ ||

ಹತ್ತು ಸಾವಿರ ಕಣ್ಣುಗಳು (ಬಾಲದಲ್ಲಿ) ಇವೆ. ತಲೆಯ ಮೇಲೊಂದು ತುರಾಯಿ. ಹುಳಗಳನ್ನು ತಿಂದು ಜೀವಿಸುವದು. ಅದಾವುದು? (ನವಿಲು)

೩೨೪. ಹಲ್ಲು ನಾಯಿಗೆಯಿಲ್ಲ | ಸೊಲ್ಲು ಸೋಜಿಗವಲ್ಲ |
ಕೊಲ್ಲದೇ ಮೃಗವ ಹಿಡಿಯುವದು, ಲೋಕದೊಳ |
ಗೆಲ್ಲ ಠಾವಿಸೊಳು ಸರ್ವಜ್ಞ ||

ಇಡೀ ಜಗತ್ತಿನ ಎಲ್ಲ ಸ್ಥಳದಲ್ಲಿಯೂ ಇದು, ಹಲ್ಲು ಮತ್ತು ನಾಲಿಗೆ ಇಲ್ಲದೇ ಕ್ರೂರ ಪ್ರಾಣಿಗಳನ್ನು ಕೊಲ್ಲದೇ ಹಿಡಿಯುವದು. ಈ ಮಾತು ಆಶ್ಚರ್ಯವೇನಲ್ಲ. ಹಾಗಾದರೆ ಇದಾವುದು ? (ಬಲೆ)

೫೨೫. ಆಸನದಲುಂಬುವದು । ಸೂಸುವದು ಬಾಯಲ್ಲಿ ।
ಬೇಸರದ ಹೊತ್ತು ಕಳೆಯುವದು ಕವಿಗಳಲಿ ।
ಸಾಹಸಿಗಳು ಪೇಳಿ ಸರ್ವಜ್ಞ ॥

ಗುದಸ್ಥಾನದಿಂದ ತುಂಬಿಕೊಳ್ಳುವದು, ಬಾಯಿಂದ ಸೂಸಿಬಿಟ್ಟು ಬಿಡುವದು, ಜನರ ಬೇಸರವನ್ನು ಕಳೆಯುವದು' ಇದಾವುದು ? ಸಾಹಸಿಗಳು ಹೇಳಿರಿ (ಬಂದೂಕು)

೫೨೬. ಹಲವು ಮಕ್ಕಳ ತಂದೆ । ತಲೆಯಲ್ಲಿ ಜುಟ್ಟವಗೆ ।
ಸಲೆಗಳಿಗೆ ಜಾವವರಿವನ ಹೆಂಡತಿಗೆ ।
ಮೊಲೆಯಿಲ್ಲ ಸರ್ವಜ್ಞ ॥

ಇವನು ಅನೇಕ ಮಕ್ಕಳ ತಂದೆಯು, ತಲೆಯ ಮೇಲೊಂದು ಜುಟ್ಟು ಇದೆ, ಸೂರ್ಯೋದಯವನ್ನು ಒಂದು ಗಳಿಗೆ ಕಾಲ ಮೊದಲೇ ತಿಳಿದುಕೊಳ್ಳುವಂಥವನು, ಆದರೆ ಇವನ ಹೆಂಡತಿಗೆ ಸ್ತನಗಳೇ ಇಲ್ಲ ಇವನಾರು? (ಹುಂಜ)

೫೨೭. ಮಣಿಯ ಮಾಡಿದನೊಬ್ಬ । ಹೆಣೆದು ಕಟ್ಟಿದನೊಬ್ಬ ।
ಕುಣಿದಾಡಿ ಸತ್ತವನೊಬ್ಬ ಸಂತೆಯೊಳು ।
ಹೆಣನ ಮಾರಿದನು ಸರ್ವಜ್ಞ ॥

ಒಬ್ಬನು ಮಣಿಯನ್ನು ಮಾಡಿದನು, ಇನ್ನೊಬ್ಬನು ಅವುಗಳನ್ನೆಲ್ಲ ಪೋಣಿಸಿ ಹೆಣೆದು ಕಟ್ಟಿದನು, ಮಗದೊಬ್ಬನು ಕುಣಿದಾಡಿ ಸತ್ತನು, ಇನ್ನೊಬ್ಬನು ಆ ಹೆಣವನ್ನು ಸಂತೆಯಲ್ಲಿ ಮಾರಿಬಂದನು ಅದಾವುದು (ಖಣ ಜವುಳಿ)

೫೨೮. ನೆತ್ತಿಯಲಿ ಉಂಬುವದು । ಸುತ್ತಲೂ ಸುರಿಸುವದು ।
ಎತ್ತಿದರೆ ಎರಡು ಹೋಳಹುದು, ಕವಿಗಳಿದ ।
ರುತ್ತರವ ಪೇಳಿ ಸರ್ವಜ್ಞ ॥

(ಇದು) ನೆತ್ತಿಯಿಂದ ಆಹಾರವನ್ನು ಸ್ವೀಕರಿಸುವದು, ಕೂಡಲೇ ತನ್ನ ಸುತ್ತಲೂ ಅದನ್ನು ಸುರಿಸಿಬಿಡುವದು, ಒಂದು ವೇಳೆ ಅದನ್ನು ಎತ್ತಿದರೆ ಅದು ಎರಡು ಹೋಳಾಗಿ ಬಿಡುವದು, ಕವಿಗಳು ಇದಾವುದೆಂಬುದನ್ನು ಹೇಳಿರಿ. (ಬೀಸುವ ಕಲ್ಲು.)

೫೨೯. ಕೋಡಗನು ಕುದುರೆಯಲಿ | ನೋಡ ನೋಡುತ ಹುಟ್ಟಿ |
ಕಾಡಾನೆಗೆರಡು ಗರಿಮೂಡಿ ಗಗನದಿರಿ |
ದಾಡುವದ ಕಂಡೆ ಸರ್ವಜ್ಞ ||

ನೋಡ ನೋಡುತ್ತಲೇ ಕುದುರೆಯಲ್ಲಿ ಮಂಗವು ಜನಿಸಿತು, ಕಾಡಾನೆಗೆ ಎರಡು ಗರಿಗಳು ಮೂಡಿದವು, ಅವು ಆಕಾಶದಲ್ಲಿ ಕಾದಾಡತೊಡಗಿದ್ದನ್ನು ನೋಡಿದೆನು. (ವೋಡ.)

೫೩೦. ಧರೆಯಲ್ಲಿ ಹುಟ್ಟಿ ಅಂ | ತರದಲ್ಲಿ ತಿರುಗುವುದು |
ಮೊರೆದೇರಿ ಕಿಡಿಯನುಗುಳುವುದು ಕವಿಗಳಲಿ |
ಅರಿದರಿದ ಪೇಳಿ ಸರ್ವಜ್ಞ ||

ಭೂಮಿಯ ಮೇಲೆ ಹುಟ್ಟುವದು, ಆಕಾಶದಲ್ಲಿ ತಿರುಗಾಡುವದು, ಒದರಾಡುತ್ತ ಬೆಂಕಿಯನ್ನು ಕಾರುವದು, ಇದೇನೆಂಬುದನ್ನು ಕವಿಗಳು ಹೇಳಲಿ. (ಬಾಣ.)

೫೩೧. ಕಾಡುಂಟು ನಡೆಯದದು | ಮೂಲೆಯಲಿ ಕಟ್ಟಿಹುದು |
ಬಾಲಕರ ಸೊಮ್ಮು ಹೊರುತಿಹುದು ಕವಿಗಳಲಿ |
ಬಾಲರಿದ ಪೇಳಿ ಸರ್ವಜ್ಞ ||

(ಇದಕ್ಕೆ) ಕಾಲುಗಳಿವೆ, ಆದರೆ ನಡೆಯಲಾರದು, ( ಇದನ್ನು ) ಮೂಲೆಯಲ್ಲಿ ಕಟ್ಟಿರುತ್ತಾರೆ, ಇದು ಬಾಲಕರ ಸೊತ್ತಾಗಿ ಅವರನ್ನು ಹೊತ್ತುಕೊಳ್ಳುವದು, ಇದಾವುದೆಂಬುದನ್ನು ಬಾಲಕವಿಗಳು ತಿಳಿದು ಹೇಳಲಿ. (ತೂಗುವ ತೊಟ್ಟಿಲು.)

೫೩೨. ಹರನಿಷ್ಠೆಗಲ್ಲದಲೆ | ಹರಿದುಹೋಗದು ಪಾಪ |
ಹರನಿಷ್ಠೆಯುಳ್ಳ ಗುರುವರನು ಓರ್ವನೆ |
ನರದೈವವೆಂಬೆ ಸರ್ವಜ್ಞ ||

ನಿಷ್ಠಾವಂತ ಶಿವಭಕ್ತಗೇ ಪಾಪಗಳೆಲ್ಲವೂ ಹರಿದು ಹೋಗುವವು. ಅಂಥ ನಿಷ್ಠಾವಂತ ಶಿವಭಕ್ತನು-ಗುರು-ಎಲ್ಲರಿಗೆ ದೇವರು (ಅವನಿಂದ ಜನರ ಪಾಪ ತೊಳೆಯಲು ಸಹಾಯವಾಗುವದು.)

೫೩೩. ಜೀಯ ಸದ್ಗುರುನಾಥ | ಕಾಯಪುಸಿಯೆನೆ ತೋರಿ |
ಮಾಯೆ ಪಾಶವನು | ಹರಿಸುತ್ತ ಶಿಷ್ಯಂಗೆ |
ತಾಯಿಯಂತಾದ ಸರ್ವಜ್ಞ ||

ಪೂಜ್ಯ ಸದ್ಗುರುನಾಥನು ದೇಹದ ಮಿಥ್ಯವನ್ನು ತೋರಿಸುತ್ತ ಸಂಸಾರದ ಮಾಯಾ ಪಾಶಗಳನ್ನು ಕತ್ತರಿಸುತ್ತ ತನ್ನ ಶಿಷ್ಯರನ್ನು (ತಾಯಿ.ಮಕ್ಕಳನ್ನು ಕಾಪಾಡುವಂತೆ) ಕಾಪಾಡುವನು.

೫೩೪. ಗುರುವಿಂಗೆ ದೈವಕ್ಕೆ | ಹಿರಿದು ಅಂತರವುಂಟು |
ಗುರುತೋರ್ವ ದೈವಡೆಡೆಯನು ದೈವ ತಾ |
ಗುರುವ ತೋರುವದೇ ಸರ್ವಜ್ಞ ||

ಗುರುವಿಗೂ ದೇವರಿಗೂ ಒಹಳ ಅಂತರವುಂಟು. ದೇವರ ಸನ್ನಿಧಾನವನ್ನು ಗುರುವು ತೋರುವನು. ಆದರೆ ದೇವರು ಗುರುವನ್ನು ತೋರುವನೇ ? (ಇಲ್ಲ) ಆದ್ದರಿಂದ ದೇವರಿಗಿಂತ ಒಂದು ರೀತಿಯಲ್ಲಿ ಗುರುವೇ ಶ್ರೇಷ್ಠ.

೫೩೫. ದರುಶನಗಳಾರರಿಂ | ಪುರುಷರು ಮೂವರಿಂ |
ಪರತತ್ವದಿರವು ಬೇರೆಂದು ತೋರಿದ |
ಗುರು ತಾನೇ ಹರನು ಸರ್ವಜ್ಞ ||

ಆರು ದರ್ಶನಗಳಿಂದಲೂ ಮೂರು ಪುರುಷರಿಗಿಂತಲೂ ಸಾಕ್ಷಾತ್ಕಾರ ತತ್ವಗಳ ರೀತಿಯು ಬೇರೆ ಇದೆ ಎಂದು ಹೇಳಿ ಅದನ್ನು ತೋರಿಸಿಕೊಟ್ಟ ಗುರುವೇ ಹರನು.

೫೩೬. ನಂಬುವದು ನಿನಗೇಕೆ | ಹಂಬಲವು ಪರಶಿವನ ? |
ನಂಬಿ ಗುರುದೈವವನಗಸ್ತ್ಯ ಮುನಿಯು ತಾ |
ನಂಬುಧಿಯ ಸವಿದ ಸರ್ವಜ್ಞ ||

ಪರಶಿವನ ದರ್ಶನದ ಆಶೆಯೇಕೆ ? ಸುಮ್ಮನೆ ಗುರುವನ್ನು ನಂಬಿಬಿಡಬೇಕು. ಹಾಗೆ ಮಾಡಿದ ಅಗಸ್ತ್ಯಮುನಿಯು ಇಡೀ ಸಮುದ್ರ ಕುಡಿದು ಬಿಡುವ ಸಾಮರ್ಥ್ಯವನ್ನು ದೊಸಕಿಸಿಬಿಟ್ಟನು.

೫೩೭. ಪರಮನಾ ರೂಪದಲಿ। ನೆರವೀಯಲರಿಯದೆ।
ನರನಾಗಿ ಬಂದು ವರವೀವ ಗುರುವಿಂಗೆ।
ಸರಿಯಾರ ಕಾಣ ಸರ್ವಜ್ಞ॥

ಪರಬ್ರಹ್ಮ ರೂಪದಲ್ಲಿ ಬಂದು ಜನರಿಗೆಲ್ಲ ಸಹಾಯ ನೀಡುವದು ಸರಿಯಲ್ಲವೆಂದು ದೇವರೇ ಮನುಷ್ಯನಾಗಿ ಬಂದು ಗುರುವಾಗಿ ವರಗಳನ್ನಿತ್ತು ಸಲಹುವನು. ಆದ್ದರಿಂದ ಇವನಿಗೆ ಈ ಲೋಕದಲ್ಲಿ ಯಾರು ಸರಿ ?

೫೩೮. ಸುರತರುವು ಮರವಲ್ಲ। ಸುರಭಿಯೊಂದಾದವಲ್ಲ।
ಪುರುಷ ಪಾಷಾಣದೊಳಗಲ್ಲ ಗುರುರಾಯ।
ನರರೊಳಗಲ್ಲ ಸರ್ವಜ್ಞ॥

ಪಾರಿಜಾತ ವೃಕ್ಷವು ಗಿಡವಲ್ಲ. ಕಾಮಧೇನು ಬರಿ ಆಕಳಲ್ಲ. ಮನುಜನು ಕಲ್ಲು ಮೂರ್ತಿಗಳಲ್ಲ. ಅದರಂತೆ ಗುರುವು ಮನುಷ್ಯನೇ ಅಲ್ಲವೆಂದು ಅರಿಯಬೇಕು (ಅವನೇ ದೇವರೆಂದು ತಿಳಿಯಬೇಕು.)

೫೩೯. ಹಿರಿಯನಾನೇನಬೇಡ। ಗುರುವ ನಿಂದಿಸಬೇಡ।
ಬರೆವರ ಕೂಡ ಹಗೆಬೇಡ ಬಂಗಾರ।
ದೆರವು ಬೇಡೆಂದ ಸರ್ವಜ್ಞ॥

(ನಾನು) ದೊಡ್ಡ ಮನುಷ್ಯನೆಂಬ ಸೊಕ್ಕು ಬೇಡ. ಗುರುವನ್ನು ನಿಂದಿಸಬಾರದು. (ಊರ) ಕುಲಕರ್ಣಿಯೊಡನೆ ವೈಮನಸ್ಸು ಮಾಡಬಾರದು. ಬಂಗಾರವನ್ನು ಒತ್ತಿ ಇಡಬಾರದು.

೫೪೦. ಒಂದೂರೊಳಿರಲು ಗುರು। ವಂದನೆಯ ಮಾಡದಲೆ।
ಸಂದಿಸಿ ಕೂಳನುಣುತಿಪ್ಪವನ ಬದುಕು।
ಹಂದಿಯಂತೆಂದ ಸರ್ವಜ್ಞ॥

ಗುರುಗಳು ಅದೇ ಸ್ಥಾನದಲ್ಲಿದ್ದಾಗ (ಶಿಷ್ಯನು) ಅವರಿಗೆ ದಿನಾಲೂ ನಮಸ್ಕಾರಗಳನ್ನು ಅರ್ಪಿಸದೇ ಸೊಗಸಾಗಿ ಊಟ ಮಾಡಿ ಬಾಳಿದರೆ ಅವನ ಬಾಳು ಹಂದಿಯ ಬಾಳಿನಂತೆ ಎಂದು ತಿಳಿಯಬೇಕು.

೫೪೧. ಉರಿಯುಡಕ ಮಾರುತವು । ಉರಗ ಹರಿನಾಗರವು ।
ಗುರುವಾಜ್ಞೆಗಂಜಿ, ನಿಲುವವು, ಒದನು ನರ ।
ರರಿಯದಲೆ ಕೆಡಗು ಸರ್ವಜ್ಞ ॥

ಗುರುವು ಆಜ್ಞೆ ಮಾಡಿದರೆ ಕುದಿಯುತ್ತಿರುವ ನೀರು ತಣ್ಣಗಾಗುವದು, ಬಿರುಗಾಳಿಯು ನಿಲ್ಲುವದು, ಹರಿಯುತ್ತಿರುವ ಘಟಸರ್ಪವು ನಿಂತುಬಿಡುವದು, ಇಂಥ ಮಹಾತ್ಮನನ್ನರಿಯದೇ ಜನರು ಕೆಟ್ಟುಹೋಗುತ್ತಾರೆ.

೫೪೨. ರುದ್ರಾಕ್ಷಿ ಭಸಿತವನು । ಹೊದ್ದಿರಲು ದೇಹದೊಳ ।
ಗಿದ್ದ ಪಾಪಗಳು ಬಯಲಾಗಿ ಶಿವನು ತಾ ।
ನಿದ್ದಲ್ಲಿ ಬರುವ ಸರ್ವಜ್ಞ ॥

ದೇಹದಲ್ಲಿ ರುದ್ರಾಕ್ಷಧಾರಣ ಮಾಡಿ ಭಸ್ಮಭೂಷಿತನಾದರೆ ಮಾಡಿದ ಸಕಲ ಪಾಪಗಳು ನಾಶವಾಗುವವು; ಮತ್ತು ಶಿವನು ತಾನಾಗಿಯೇ ಒಲಿದು ಇವನೆಡೆಗೆ ಬರುವನು.

೫೪೩. ಶಿವಪೂಜೆ ಮಾಡಿದರೆ । ಶಿವನ ಕೊಂಡಾಡಿದಡೆ ।
ಶಿವನಲ್ಲಿ ನೆನಹು ನೆಲೆಸಿರ್ದಡಾತಂಗೆ ।
ಶಿವಲೋಕದಿರವು ಸರ್ವಜ್ಞ ॥

(ನಿತ್ಯವೂ) ಶಿವಪೂಜೆಯನ್ನು ಮಾಡುತ್ತಿದ್ದರೆ, ಶಿವನ ಸ್ತೋತ್ರವನ್ನು ಸದಾ ಮಾಡುತ್ತಿದ್ದರೆ, ಯಾವಾಗಲೂ ಶಿವನ ಧ್ಯಾನದಲ್ಲಿಯೇ ನಿರತನಾಗಿದ್ದರೆ ಅವನು ನಿಶ್ಚಯವಾಗಿಯೂ ಶಿವಲೋಕಕ್ಕೆ ತೆರಳುವನು. (ಅಂತ್ಯದಲ್ಲಿ.)

೫೪೪. ಗುರುಲಿಂಗ ಜಂಗಮವು । ಹರನೊಲಿದ ರೂಪೆಂದು ।
ಅರಿದು ನಿಶ್ಚಯಿಸಿ ನಡೆಯುವ ಭಕ್ತಂಗೆ ।
ಪರಮಪದವಹುದು ಸರ್ವಜ್ಞ ॥

ಗುರುಗಳು, ಲಿಂಗ, ಜಂಗಮ (ಅಯ್ಯನವರು) ಇವರು ಶಿವನ ಅವತಾರವೆಂದು ನಿಶ್ಚಯವಾಗಿಯೂ ನಂಬಿ ಭಕ್ತಿಯಿಂದ ನಡೆಯುವಂಥವನಿಗೆ (ಪರಮ ಪದ) ಶಿವಸಾಯುಜ್ಯವು ದೊರೆಯುವದು.

೫೪೫. ಲಿಂಗದ ಮನವಾಗಿ । ಲಿಂಗದಲಿ ನೆನಹಾಗಿ ।
ಲಿಂಗದಲಿ ನೋಟ ನುಡಿ ಕೂಟವಾದವನು ।
ಲಿಂಗವೇ ಅಕ್ಕು ಸರ್ವಜ್ಞ ॥

ಸದಾ (ಲಿಂಗ) ದೇವರನ್ನು ನೆನೆಸುತ್ತಲಿದ್ದು, ಅವನ ಧ್ಯಾನದಲ್ಲಿಯೇ ನಿರತನಾಗಿ, (ಸಕಲರಲ್ಲಿಯೂ) ಅವನನ್ನೇ ನೋಡುತ್ತ (ಆಡಿದರೆ) ದೇವರ ಮಹಿಮೆಯ ಬಗ್ಗೆಯೇ ಮಾತಾಡುತ್ತ ಸದಾ ದೇವರ ಸನ್ನಿಧಾನದಲ್ಲಿಯೇ ಇರುವಂಥವನು ಕೊನೆಗೆ ದೇವರೇ ಆಗಿಬಿಡುತ್ತಾನೆ.

೫೪೬. ಇಷ್ಮೆ ಇದ್ದಡೆ ಶಿವನು । ಗಟ್ಟಿಕೊಂಡೊಳಗಿಪ್ಪ ।
ನಿಷ್ಮೆ ಇಲ್ಲದಲೆ ಭಜಿಸಿದೊಡೆ ಶಿವನವನ ।
ಬಿಟ್ಟು ಬಯಲಪ್ಪ ಸರ್ವಜ್ಞ ॥

ಭಕ್ತಿ ವಿಶ್ವಾಸಗಳಿದ್ದರೆ ಶಿವನು (ಇಂಥವನಲ್ಲಿ) ಸ್ಥಿರವಾಗಿ ನೆಲೆಸುವನು, ಇವುಗಳಿಲ್ಲದೇ ಭಜಿಸಿದರೆ ಇವನನ್ನು ದೇವರು ಬಿಟ್ಟು ಹೋಗಿ ಬಿಡುವನು,

೫೪೭. ಸೋಕಿದಾ ಸುಖಗಳ । ನೇಕವನು ಶಿವಗಿತ್ತು ।
ತಾ ಕಿಂಕರತೆಯ ಕೈಕೊಂಡ ಬಂಟನೆ ।
ಲೋಕೇಶ ಶರಣ ಸರ್ವಜ್ಞ ॥

ಜೀವನದಲ್ಲಿ ಪಡೆದ ಸುಖ-ದುಃಖಗಳನ್ನೆಲ್ಲವನ್ನೂ ಶಿವನ ಪಾದಗಳಿಗಿಟ್ಟು 'ನಾನು ನಿನ್ನ ಸೇವಕ' ಎಂದು ಕೈಕಟ್ಟಿಕೊಂಡು ನಿಂತಂಥ ಬಂಟನೇ ಲೋಕೇಶನಾಗುವನು. (ದೇವನಾಗುವನು.)

೫೪೮. ಸಿರಿಯು ಬಂದರೆ ಲೇಸು । ತಿರದಜವ್ವನ ಲೇಸು ।
ಮರಣವಿಲ್ಲದ ಮಗಲೇಸು, ಲಿಂಗಕ್ಕೆ ।
ಶರಣವೇ ಲೇಸು ಸರ್ವಜ್ಞ ॥

ಸಿರಿವಂತಿಕೆ ಬಂದರೆ ಬಹಳ ಒಳ್ಳೇದು, ಶಾಶ್ವತವಾದ ತಾರುಣ್ಯವಿದ್ದರೆ ಸಂತೋಷ, ಚಿರಂಜೀವಿಯಾದ ಮಗನಿದ್ದರೆ ಬಹಳ ಆನಂದ, ಅದರಂತೆ (ಲಿಂಗಕ್ಕೆ) ದೇವರಿಗೆ ನಮಸ್ಕಾರಗಳನ್ನು ಅರ್ಪಿಸುತ್ತಿರುವದು ಬಹಳ ಒಳ್ಳೇದು.

೩೪೯. ಈಶಪ್ರಸಾದವನು | ಸೂಸದಲೆ ತಾ ಕೊಳ್ಳೆ |
ಶಾಶ್ವತವಪ್ಪ ಪದವಕ್ಕು ಜಗಕೆಲ್ಲ |
ಈಶ್ವರನಕ್ಕು ಸರ್ವಜ್ಞ ||

ದೇವರ ಪ್ರಸಾದವನ್ನು ತಾತ್ಸಾರಮಾಡದೆ ಭಕ್ತಿಪೂರ್ವಕವಾಗಿ ಸ್ವೀಕರಿಸುವಂಥವನು ಪರಲೋಕದಲ್ಲಿ ಶಾಶ್ವತವಾದ ಸುಖವನ್ನು ಪಡೆಯುತ್ತಾನೆ. ಈ ಲೋಕದಲ್ಲಿ ಈಶ್ವರ (ನಂತೆ) ನೇ ಆಗಿ ಸುಖಿಸುತ್ತಾನೆ.

೩೫೦. ಭೋಗಿಸುವ ವಸ್ತುಗಳ | ಭೋಗಿಸುತ ಶಿವಗಿತ್ತು |
ರಾಗದಿ ಸತ್ಯವೆರಸಿಹ ಪ್ರಸಾದಿಯು |
ಶ್ರೀಗುರುವೆಂಬೆ ಸರ್ವಜ್ಞ ||

ಜೀವನದಲ್ಲಿ ದೊರಕಿದ ಸಕಲವನ್ನು ಭೋಗಿಸುತ್ತ "ಇದೆಲ್ಲವೂ ನಿನಗೇ ಅರ್ಪಿತವಪ್ಪಾ" ಎಂದು ಶಿವನಿಗೆ ಅತ್ಯಂತ ಪ್ರೀತಿಯಿಂದಲೂ, ಸ್ನೇಹದಿಂದಲೂ ಅರ್ಪಿಸಿದ ಮಹಾ ವೈರಾಗ್ಯಶಾಲಿಯೇ ಶ್ರೇಷ್ಠನಾದ ಗುರುವೆಂದು ತಿಳಿಯಬೇಕು.

೩೫೧. ಲಿಂಗವಿರಹಿತನಾಗಿ | ನುಂಗದಿರು ಏನುವನು |
ತಿಂಗಳಲಿಸತ್ತ ಹಳೆನಾಯಿ ಮಾಂಸವನು |
ನುಂಗಿದಂತಕ್ಕು ಸರ್ವಜ್ಞ ||

ಲಿಂಗಧಾರಣ ಮಾಡಿಕೊಳ್ಳದೇ (ಅಥವಾ ದೇವರಿಗೆ ನೈವೇದ್ಯ ತೋರಿಸದೇ (ಏನನೂ ತಿನ್ನಬೇಡ, ಹಾಗೆ ತಿಂದರೆ ಒಂದು ತಿಂಗಳ ಹಿಂದೆ ಸತ್ತಂಥ ನಾಯಿಯ ಮಾಂಸವನ್ನು ಈ ದಿನ ತಿಂದಷ್ಟು (ಹೇಸಿ) ಪಾಪವು ಬರುವದು.

೩೫೨. ಕಾಯ ಕಮಲವೇ ಸಜ್ಜೆ | ಜೀವರತುನವೇ ಲಿಂಗ |
ಭಾವಪುಷ್ಪದಿ ಶಿವಪೂಜೆ ಮಾಡುವವನ |
ದೇವನೆಂದೆಂಬ ಸರ್ವಜ್ಞ ||

ದೇಹವೆಂಬ ಕಮಲವೇ ಲಿಂಗವನ್ನಿಡುವ ಕರಡಿಗೆಯೆಂದೂ ಜೀವ ರತ್ನವೇ ಲಿಂಗವೆಂದೂ ಗ್ರಹಿಸಿ ಭಕ್ತಿಭಾವಗಳಿಂದ ಪೂಜಿಸಿದರೆ (ಮನಸ್ಸಿನಲ್ಲಿ) ಅವನು ದೇವರ ಸಮಾನನೆಂದು ತಿಳಿಯಬೇಕು.

೫೫೩. ಆತುಮದಲಿಂಗವನು | ಪ್ರೀತಿಯಲಿ ಅರಿದಂಗೆ |
ಸೂತಕಗಳಿಲ್ಲ ಭವವಿಲ್ಲ, ಪಂಚಮಾ |
ಪಾತಕಗಳಿಲ್ಲ ಸರ್ವಜ್ಞ ||

ಭಕ್ತಿ (ಪ್ರೀತಿ) ಪೂರ್ವಕವಾಗಿ ಆತ್ಮಲಿಂಗದ ಜ್ಞಾನಮಾಡಿಕೊಂಡವನು ಸದಾ (ಮೈಲಿಗೆ ಇಲ್ಲ) ಪವಿತ್ರವಾಗಿರುವನು, (ಭವ) ಸಂಸಾರ ಜಾಲದಿಂದ ದೂರವಿರುವನು, ಪಂಚಮಹಾಪಾತಕಗಳು ಇವನಿಗೆ ತಗಲಲಾರವು.

೫೫೪. ಲಿಂಗವನು ಅರಿದವನ | ಅಂಗ ಹಿಂಗಿರಬೇಕು |
ತೆಂಗಾಯಿಯೊಳಗೆ ಪರಿಪೂರ್ಣ ಜಲಬಲಿದು |
ಹಿಂಗದಿಪ್ಪಂತೆ ಸರ್ವಜ್ಞ ||

ತೆಂಗಿನಕಾಯಿಯು ಸಂಪೂರ್ಣ ಬಲಿತರು ಕೂಡ (ಕೊಬ್ರಿ ನೀರು ಕೂಡಿಕೊಂಡಿದ್ದಂತೆ) ಲಿಂಗಜ್ಞಾನವುಳ್ಳವನು ಸಂಸಾರದಲ್ಲಿದ್ದರೂ ಬೇರೆಯಾಗಿಯೇ ಇರುತ್ತಾನೆ.

೫೫೫. ಒಮ್ಮನದ ಶಿವಪೂಜೆ | ಗಮ್ಮನೇ ಮಾಡುವದು |
ಇಮ್ಮನವ ಹಿಡಿದು ಕೆಡಬೇಡ, ವಿಧಿವಶವು |
ಸುಮ್ಮನೇ ಕೆಡಗು ಸರ್ವಜ್ಞ ||

ಏಕಮನಸ್ಸಿನಿಂದಲೂ, ನಿಷ್ಠೆಯಿಂದಲೂ ಶಿವಪೂಜೆಯನ್ನು ಮಾಡು, (ಎರಡು ಮನಸ್ಸು ಮಾಡಬೇಡ) ಚಂಚಲಚಿತ್ತನಾಗಬೇಡ, ವಿಧಿವಶಕ್ಕೆ ಒಳಗಾದರೆ ನಿನಗೆ ಕೆಡುಕೇ ಆಗುವದು.

೫೫೬. ಅಷ್ಟವಿಧದರ್ಚನೆಯು | ನೆಷ್ಟುಮಾಡಿದಡೇನು |
ನಿಷ್ಠೆ ನೆಲೆಗೊಳದೆ ಭಜಿಸುವ ಪೂಜೆಯದು |
ನಷ್ಟ ಕಾಣಯ್ಯ ಸರ್ವಜ್ಞ ||

ಎಂಟು ವಿಧದಿಂದ (ಶಿವ) ಪೂಜೆಯನ್ನು ಎಷ್ಟು ಸಲ ಮಾಡಿದರೇನು? ಏಕಾಗ್ರ ಮನದ ಭಕ್ತಿಯು, ಸ್ಥಿರವಾಗಿ ನೆಲಿಸದೇ ಭಜಿಸುತ್ತ ಮಾಡಿದ ಈ ಪೂಜೆಯು ವ್ಯರ್ಥವೇ ಸರಿ.

೫೫೭. ಎಷ್ಟು ಬಗೆಯೊಾರತಿಯ | ನೊಟ್ಟೆಯಿಸ್ಸಿ ಫಲವೇನು |
ನಿಷ್ಠೆಯಿಲ್ಲದವನ ಶಿವಪೂಜೆ ಹಾಳೂರ |
ಕೊಟ್ಟಗುರಿದಂತೆ ಸರ್ವಜ್ಞ ||

ದೇವರಿಗೆ ನಾನಾಬಗೆಯ ಆರತಿಗಳನ್ನೆತ್ತಿ ಬೆಳಗಿದರೂ ವ್ಯರ್ಥ, ಭಕ್ತಿ ವಿಶ್ವಾಸಗಳಿಲ್ಲದ ಶಿವಪೂಜೆಯು ಹಾಳುಬಿದ್ದ ಊರಲ್ಲಿಯ ಕೊಟ್ಟಿಗೆ (ದನ ಮೇವು ತಿನ್ನುವ ಸ್ಥಳ) ಯಲ್ಲಿಯ ದಂಟು ಉರಿದಂತೆ ನಿಷ್ಪ್ರಯೋಜಕ.

೫೫೮. ಎಣಿಸುತಿರ್ಪುದು ಬಾಯಿ | ಪೊಣರುತಿರ್ಪುದು ಬೆರಳು |
ಕ್ಷಣಕೊಮ್ಮೆ ಒಂದನೆಣಸುವನ ಜಪಕೊಂದು |
ಹಣಿಕೆಯುಂಟೆಂದ ಸರ್ವಜ್ಞ ||

ಒಂದೇಸವನೇ ಒಟಗುಟ್ಟುವಂಥ ಬಾಯಿ, ಜಗಳವಾಡುತ್ತಿರುವವೋ ಎಂಬಂತೆ ಕಾಣುವ ಕೈಬೆರಳ ಎಣಿಕೆಯು, ನಿಮಿನಿಮಿಷಕ್ಕೆ ಜಪಮಣಿಯನ್ನು ಸರಿಸು (ಮಾಡುವ ಜಪವು) ತ್ತಲಿರುವದು, ಒಂದೊಂದು ಮಣಿ ಸರಿದಂತೆ ಅವನ ಬಾಳ್ವೆಗೆ ಒಂದೊಂದು ಕಗ್ಗಂಟು ಬೀಳುತ್ತಿರುವದೆಂದೇ ತಿಳಿಯಬೇಕು.

೫೫೯. ಬತ್ತಿಹೆತ್ತುಪ್ಪವನು | ಹೊತ್ತಿಸಿದ ಫಲವೇನು |
ಮತ್ತೊಂದು ದೈವಕೆರಗುವನ ಶಿವಪೂಜೆ |
ಹತ್ತಿಗೇಡೆಂದ ಸರ್ವಜ್ಞ ||

(ಶಿವನ ಬಿಟ್ಟು) ಬೇರೊಂದು ದೇವರನ್ನು ಪೂಜೆಮಾಡಲೋಸುಗ ತುಪ್ಪದ ದೀಪವನ್ನು ಹಚ್ಚಿಟ್ಟರೆ ಫಲವೇನು ? ( ಹತ್ತಿ ತುಪ್ಪ ವ್ಯರ್ಥವಾಗಿ ಸುಟ್ಟುಹೋಗುವದೇ ವಿನಃ) ಯಾವ ಫಲವೂ ಬರಲಾರದು.

೫೬೦. ಎಣಿಸುತಿರ್ಪುದು ಬೆರಳು | ಗುಣಿಸುತಿರ್ಪುದು ಜಿಹ್ವೆ |
ಮನಹೋಗಿ ಹಲವ ನೆನೆದರದು ಹಾಳೂರ |
ಶುನಕನಂತಕ್ಕು ಸರ್ವಜ್ಞ ||

ಕೈಬೆರಳಿನಿಂದ (ಜಪವನ್ನು ಎಣಿಸುತ್ತಲೂ, ಬಾಯಿಯಿಂದ ಒಟಗುಟ್ಟಲೂ ಇರುವಾಗ ಮನಸ್ಸು ಮಾತ್ರ (ಒಂದೇ ಕಡೆಗೆ ನಿಲ್ಲದೆ) ಅನೇಕಾನೇಕ ಕಡೆಗಳಲ್ಲಿ ಹರಿದಾಡುತ್ತಿರುವಾಗ ಮಾಡಿದ ಶಿವಪೂಜೆಯು ಹಾಳಾದ ಊರಲ್ಲಿ ನಾಯಿಯ ವಾಸದಂತೆ (ಅಥವಾ ಬೊಗಳುವಿಕೆಯಂತೆ) ನಿರರ್ಥಕ.

೫೬೧. ಕೊಲುವ ಕೈಯೊಳು | ಸೆಲುವ ಬಾಯೊಳು ಮಂತ್ರ |
ಸಲೆಪಾಪವೆರದ ಮನದೊಳಗೆ ಪೂಜಿಪನು |
ಹೊಲೆಯು ಕಾಣಯ್ಯ ಸರ್ವಜ್ಞ ||

(ಕೊಲ್ಲುವವ) ಸಕಲ ನೀಚಕೃತಿ ಮಾಡಿದ ಕೈಯಿಂದಲೂ, ಸಿಕ್ಕದ್ದು ತಿಂದ ಬಾಯಿಂದ ಮಂತ್ರ ಹೇಳುವದೂ, ಮಹಾಪಾಪಗಳ ವಿಚಾರದಿಂದ ತುಂಬಿದ ಮನಸ್ಸುಳ್ಳವನಾಗಿ ಶಿವಪೂಜೆ ಮಾಡುವವನೂ ಹೊಲೆಯನು. (ಅವನ ಪೂಜೆಯನ್ನು ದೇವರು ಸ್ವೀಕರಿಸುವದಿಲ್ಲವೆಂದರ್ಥ. )

೫೬೨. ಪ್ರಾಣನೂ ಪರಮನೂ | ಕಾಣದಲೆ ಒಳಗಿರಲು |
ಮಾಣದೆ ಸಿಲೆಯು ಹಿಡಿದದಕೆ ಮೂರ್ಖ ತಾ |
ಪ್ರಾಣಾತ್ಮನೆಂಬ ಸರ್ವಜ್ಞ ||

ಪ್ರಾಣನೂ (ದೇವನೂ) ಪರಮಾತ್ಮನೂ ಪ್ರತಿಯೊಬ್ಬರ ಹೃದಯ ದಲ್ಲಿದ್ದರೂ (ಅದನ್ನು ತಿಳಿಯದೇ) ಕರದಲ್ಲಿ ಹಿಡಿದಿರುವ ಕಲ್ಲಿಗೆ ಪ್ರಾಣಾತ್ಮ ನೆಂದು ನೆನೆಯುತ್ತ ಪೂಜಿಸುವವನು ಮೂರ್ಖನೇ ಸರಿ.

೫೬೩. ನಂಬುತಿರು ನಂಬದಿರು | ಎಂಬುವರು ಮಾನವರು |
ಸಂಬಾರವತೆವ ಬಲುಕಲ್ಲ ಹರನೆಂದು |
ನಂಬುವವರಾರು ಸರ್ವಜ್ಞ ||

ಅದೇನು ಕೇವಲ ಕಲ್ಲು (ದೇವರಲ್ಲ) 'ಅದನ್ನು ನಂಬದಿರು' ಎನ್ನುವರು ಕೆಲವರು, 'ನಂಬು' ಎಂದೆನ್ನುವರು ಕೆಲವರು, ಆದರೆ ಸಕಲ ಸಾಮಗ್ರಿಗ ಳನ್ನು ನೀಡುವ ಸುಂದರವಾದ ಲಿಂಗ (ಕಲ್ಲು) ವನ್ನು ದೇವರೆಂದು ಯಾರು ನಂಬುತ್ತಾರೆ ?

೫೬೪. ಗುಡಿಯೂ ಬೇದಿಗೆ ಕಲ್ಲು | ನಡುರಂಗ ತಾ ಕಲ್ಲು |
ಕಟ್ಟೆನೂಲೆ ಸೆರಗು ತಾ ಕಲ್ಲು ವರವನು |
ಕೊಡುವಾತ ಬೇರೆ ಸರ್ವಜ್ಞ ||

ಗುಡಿಯ ಕಂಬದ ಮೇಲಿನ ಗುಂಡುಕಲ್ಲು, ರಂಗಮಂಟಪದ ಮಧ್ಯದಲ್ಲಿ ದ್ದುದು ಅದು ಕಲ್ಲೆ, ಕಡೆಗೆ ಗುಡಿಯ ಅಂಚಿನ ಮೂಲೆಯಲ್ಲಿದ್ದುದೂ ಸಹ ಕಲ್ಲು, ಆದರೆ ವರವನ್ನು ಕೊಡುವಂಥವನು (ಇವೆಲ್ಲವುಗಳಲ್ಲದೇ) ಬೇರೆಯೇ ಇದ್ದಾನೆ.

೫೬೫. ಉತ್ಪತ್ತಿಗೆ ಬೊಮ್ಮಗಡ | ಸ್ಥಿತಿಗೆ ತಾ ವಿಷ್ಣುಗಡ |
ಹತವಗ್ಗೈವುಹಕೆ ರುದ್ರಗಡನಿವರುಗಳ |
ಸ್ಥಿತಿಯನರಿಯೆಂದ ಸರ್ವಜ್ಞ ||

(ಎಲ್ಲರನ್ನೂ) ಹುಟ್ಟಿಸುವ ಬ್ರಹ್ಮನು, ಸಂರಕ್ಷಿಸುವನು ವಿಷ್ಣು, ಸಂಹಾರಕರ್ತನು ರುದ್ರದೇವರು, ಇದನ್ನು ತಿಳಿದು ಈ ಮೂವರ ಮಹಾತ್ಮೆಯನ್ನು ಅರಿತುಕೊಳ್ಳಬೇಕು.

೫೬೬. ಬೊಮ್ಮ ನಿರ್ಮಿಪನೆಂಬ | ದುರ್ಮತಿಯೇ ನೀ ಕೇಳು |
ಬೊಮ್ಮನ ಸತಿಗೆ ಮೂಗಿಲ್ಲವಾ ಮೂಗ |
ನಿರ್ಮಿಸನದೇಕೆ ? ಸರ್ವಜ್ಞ ||

ಎಲೈ ದುಷ್ಟ (ಮಂದ) ಮನಸ್ಸಿನವನೇ, ಕೇಳ ! ಬ್ರಹ್ಮನೇ ನಮ್ಮನೆಲ್ಲ ಹುಟ್ಟಿಸಿದವನೆಂಬ ಭ್ರಮೆ ಬೇಡ. (ಆ ಯೋಗ್ಯತೆ ತನ್ನಲ್ಲಿದ್ದರೆ) ತನ್ನ ಸ್ವತಃಪತ್ನಿಗೆ ಮೂಗೆ ಇಲ್ಲ. ಅವಳಿಗೊಂದು ಮೂಗನ್ನು ನಿರ್ಮಿಸಿ ನೀಡಬೇಕಾಗಿತ್ತು. ? ಹಾಗೇಕೆ ಮಾಡಲಿಲ್ಲ ?

೫೬೭. ಹುಟ್ಟಿಸುವನಜನೆಂಬ | ಕಷ್ಟದ ನುಡಿಬೇಡ |
ಹುಟ್ಟಿಪನು ತನ್ನ ಶಿರಹರಿಯೆ ಮತ್ತೊಂದ |
ಹುಟ್ಟಿಸನದೇಕೆ ? ಸರ್ವಜ್ಞ ||

ಬ್ರಹ್ಮದೇವರೇ ಸಕಲರನ್ನು ಹುಟ್ಟಿಸಿದನೆಂಬ ಕಷ್ಟ (ಹಟ)ದ ಮಾತು ಬೇಡ. ಹರನು ಅವನ (ಬ್ರಹ್ಮನ) ನಾಲ್ಕರಲ್ಲೊಂದು ಶಿರಚ್ಛೇದನ ಮಾಡಿದರೆ ಮತ್ತೊಂದು ಹುಟ್ಟಿಸಿಕೊಳಲಿಲ್ಲವೇಕೆ ?

೫೬೮. ಹತ್ತು ಭವನವನು ಎತ್ತಿ | ಎತ್ತು ಎಮ್ಮೆಯ ಕಾದು |
ಮತ್ತೆ ಪಾಂಡವರಿಗಾಳಾದ ಹರಿಯು ತಾ |
ನೆತ್ತಣಡ ದೈವ ಸರ್ವಜ್ಞ ||

ಹತ್ತು ಲೋಕವನ್ನು ಎತ್ತಿ ಹಿಡಿದಂಥವನೂ, ಎತ್ತು ಎಮ್ಮೆಗಳನ್ನು ಕಾಯ್ದಂಥವನೂ, ಪಾಂಡವರಿಗೆ ಆಳಾಗಿ ದುಡಿದಂಥವನೂ ಆದ ಆ ಹರಿಯು ಯಾವ ದೇವರಪ್ಪಾ ?

೩೬೯. ಹರಿಬೊಮ್ಮರೆಂಬುವರು । ಹರನಿಂದಲಾದವರು ।
ಅರಸಿಂಗೆ ಆಳುಸರಿಯುಹನೇ ? ಶಿವನಿಂದ ।
ಮೆರೆವರಿನ್ನಾರು ಸರ್ವಜ್ಞ ॥

ಹರಿಬ್ರಹ್ಮರು ಹರನಿಂದಲೇ ಸೃಷ್ಟಿಸಲ್ಪಟ್ಟವರು. ಆಳುಗಳು ಅರಸನಿಗೆ ಹೇಗೆ ಸರಿಯಾಗಲಾರರೋ (ಹಾಗೆಯೇ ಇವರು ಶಿವನಿಗೆ ಸರಿಯಾಗಲಾರರು. ಆದುದರಿಂದ) ಶಿವನೇ ಸರ್ವೋತ್ತಮನೆಂದು ತಿಳಿಯಬೇಕು.

೩೭೦. ಧರೆಯುತೇರನುಮಾಡಿ । ಅಜನಸಾರಥಿ ಮಾಡಿ ।
ಹರಿಯು ಶರಮಾಡಿ ತ್ರಿಪುರವನು ಅಳಿದಂಗೆ ।
ಸರಿಯಾರು ಹೇಳಿ ಸರ್ವಜ್ಞ ॥

ಇಡೀ ಜಗತ್ತನ್ನೇ ರಥವನ್ನಾಗಿ ಮಾಡಿ ಅದಕ್ಕೆ ಬ್ರಹ್ಮನನ್ನು ಸಾರಥಿಯನ್ನಾಗಿ ಮಾಡಿ ಶ್ರೀಹರಿಯನ್ನು ಬಿಲ್ಲು ಬಾಣಗಳನ್ನಾಗಿ ಮಾರ್ಪಡಿಸಿ ಶಿವನು ತ್ರಿಪುರಾಂತಕವನ್ನು ಸಂಹರಿಸಿದ ಮೇಲೆ ಇವನಿಗೆ (ಶಿವನಿಗೆ) ಸರಿಯಾರು ?

೩೭೧. ಉಂಬಳಿಯುು ಇದ್ದವರು । ಕಂಬಳಿಯ ಹೊದೆಯುುವರೇ ?।
ಶಂಭುವಿದ್ದಂತೆ ಮತ್ತೊಂದು ದೈವವ ।
ನಂಬುವನೇ ಹೆಡ್ಡ ಸರ್ವಜ್ಞ ॥

ಹೊಲ-ಮನೆ ಇದ್ದವರು (ಶಿರಿವಂತರು ಬಡವರಂತೆ) ಕಂಬಳಿಯನ್ನು ಹೊದ್ದುಕೊಳ್ಳುವರೇ ? ಬೇಕಾದ್ದನ್ನು ಕೊಡುವಂಥ ಶಿವನಿರಲು ಬೇರೆ ದೇವರನ್ನು ನಂಬುವದು ವಿಹಿತವೇ ? (ಅವರು ಏನೂ ಕೊಡಲಾರರು ಎಂದರ್ಥ. )

೩೭೨. ಆಗುಹೋಗುಗಳು ನೆರೆ । ರಾಗ ಭೋಗಗಳು ಸ ।
ರಾಗವಾಗಿಕ್ಕು ಶಿವನೊಲಿದಡಲ್ಲದಿರೆ ।
ಹೋಗಿಕ್ಕು ಸರ್ವಜ್ಞ ॥

ಸುಪ್ರಸಂಗಗಳ ಪ್ರಾಪ್ತಿ, ಅಭ್ಯುದಯಗಳು, ಹೆಚ್ಚಾದ ಸಂತೋಷ ಸಂಸಾರ ಭೋಗಾದಿಗಳು ಯಥಾಪ್ರಕಾರವಾಗಿ ಬರುತ್ತಿರುವದು ಶಿವನ ಒಲುಮೆಯಿಂದಲೆ. ಅದು ತಪ್ಪಿದರೆ ಎಲ್ಲವೂ ಅಳಿದು ಹೋಗುವವು.

೫೭೩. ಮದ್ದು, ಮಂತ್ರವು, ಪಾದ | ತಿದ್ದುವವು ಕುತ್ತುಗಳ |
ತಿದ್ದಿಯುಂ ತಿದ್ದಲರಿಯುವು ಶಿವನೊಲಿಯು |
ದಿದ್ದರೆ ಕಾಣೋ ಸರ್ವಜ್ಞ ||

ಮಾಟ, ಮಂತ್ರ, ಯಂತ್ರ ಮೊದಲಾದವುಗಳಿಂದ ಬಂದ ಆಪತ್ತುಗಳು ಪರಿಹಾರವಾಗಬಹುದು, ಆದರೆ ಶಿವನೊಲುಮೆಯಿಲ್ಲದಿದ್ದರೆ ಪ್ರಾರಬ್ಧವನ್ನು ಮಾತ್ರ ಯಾತರಿಂದಲೂ ತಿದ್ದಲು ಸಾಧ್ಯವಿಲ್ಲ.

೫೭೪. ಕೊಟ್ಟಲ್ಲಿ ಬಾರದದು | ಇಟ್ಟಲ್ಲಿ ಹೋಗುವದು |
ಮುಟ್ಟೆ ಕೈಯಲ್ಲಿ ನಿಲ್ಲದದು, ಜಗದೀಶ |
ಕೊಟ್ಟಲ್ಲದಿಲ್ಲ ಸರ್ವಜ್ಞ ||

ದೇವರು ಅನುಗ್ರಹಮಾಡಿ ನೀಡದಿದ್ದರೆ (ಸಾಲ ಮೊದಲಾದ ಹೊರಗೆ) ಕೊಟ್ಟದ್ದು ಮುಳುಗಿಪೋಗುವದು, ( ಸುರಕ್ಷಿತವಾಗಿರಲೆಂದು ) ಇಟ್ಟದ್ದು ಇಟ್ಟಲ್ಲಿಯೇ ನಾಶವಾಗುವದು, ( ತನ್ನ ಸ್ವಾಧೀನದಲ್ಲಿಯೇ ಇರಲೆಂದು ) ಕೈಯಲ್ಲಿಟ್ಟುಕೊಂಡರೆ ಹೇಗೋ ಅದು ಹೋಗಿಬಿಡುವದು.

೫೭೫. ಜ್ವರಬಂದ ಮನುಜಂಗೆ | ನೆರೆಪಾಲು ಕಹಿಯಕ್ಕು |
ನರಕದ ಬೀಳ್ವ ಅಧಮಂಗೆ ಶಿವಭಕ್ತಿ |
ಹಿರಿದು ಕಹಿಯಕ್ಕು ಸರ್ವಜ್ಞ ||

ಜ್ವರ ಬಂದ ಮನುಷ್ಯನಿಗೆ (ಇದೇ ಈಗ ಕರೆದ) ಹಾಲು ಸಹ ಕಹಿ ಎಂದೆನಿಸುವದು, ಆದರಂತೆಯೇ ತಮೋ ಅಯೋಗ್ಯನಾದ ಪಾಪಿಗೆ ಶಿವಭಕ್ತಿ ಮಾಡುವದು ಅತ್ಯಂತ ವಿಷವಾಗಿ ತೋರುವದು.

೫೭೬. ಹರಿನಾಮ ಕರೆಯದಲೆ | ಪರಶಿವನ ನೆನೆಯದಲೆ |
ಸ್ಮರಹರನ ಕರುಣವಿಲ್ಲದಲೆ ಜಗದೊಳಗೆ |
ಇರುವದೆ ಕಷ್ಟ ಸರ್ವಜ್ಞ ||

ಹರಿನಾಮಸ್ಮರಣೆಯನ್ನು ಮಾಡದೇ ಪರಶಿವನನ್ನು ಮನದಲ್ಲಿ ನೆನೆಯದೇ ಶಿವನ ಕರುಣೆಯನ್ನು ದೊರಕಿಸದೇ ಈ ಜಗತ್ತಿನಲ್ಲಿ ಬಾಳುವದೇ ಕಷ್ಟ.

೫೭೭. ಎಲ್ಲರೂ ಶಿವನೆಂಡ | ರಿಲ್ಲಿಯೇ ಹಾಳಕ್ಕು |
ಎಲ್ಲರೂ ಶಿವನ ಮರೆದರೆ, ಕೈಲಾಸ |
ದಲ್ಲಿ ಹಾಳಕ್ಕು ಸರ್ವಜ್ಞ ||

ಸಮಸ್ತ ಪ್ರಾಣಿಗಳು 'ಶಿವಶಿವಾ' ಎಂದು ಧ್ಯಾನಮಾಡುತ್ತಲಿದ್ದರೆ ಭೂಲೋಕವು ಒಂದಾಗಿ (ಹಾಳಾಗಿ) ಹೋಗಿ ಎಲ್ಲರೂ ಕೈಲಾಸ ಸೇರುವರು. ಶಿವನನ್ನು ಸಂಪೂರ್ಣವಾಗಿ ಮರೆತುಬಿಟ್ಟರೆ ಕೈಲಾಸವು ಹಾಳು ಬಿದ್ದು ಬಿಡುವದು (ಯಾರಿಗೂ ಶಿವಸಾಯುಜ್ಯ ಸುಖ ಸಿಗುವದಿಲ್ಲ ಎಂದರ್ಥ.)

೫೭೮. ಆಪಕಾಲವು ವನದಿ | ಜೀವಕಾಲವು ಕಳೆದು |
ಜೀವಜಯದಲ್ಲಿ ದಯವಿಲ್ಲದಿರುವವನ |
ಕಾವನೇ ಶಿವನು ? ಸರ್ವಜ್ಞ ||

ಸದಾಕಾಲ ಪ್ರಸ್ಥಾಶ್ರಮದಲ್ಲಿದ್ದರೂ ಜೀವಕೋಟಿಯ ಮೇಲೆ ದಯೆ ಇಲ್ಲದಿದ್ದರೆ (ಭೂತದಯೆ) ಅಂಥವನನ್ನು ಶಿವನು ಕಾಯುವನೇ ? ಇಲ್ಲ.

೫೭೯. ಅಡವಿಯಲಿ ಮೌನದಲಿ | ದೃಢತಪದೊಳಿದ್ದರೂ |
ನಡೆಯಲಿ ಶಿವನ ಮರೆದಡೆ ಗುಣವಿಲ್ಲ |
ಪಡಿಗೆಯುಂಡಂತೆ ಸರ್ವಜ್ಞ ||

ಮೌನವ್ರತಧಾರಣ ಮಾಡಿಕೊಂಡು ಅಡವಿಯಲ್ಲಿ ಘೋರವಾದ ತಪವನ್ನಾಚರಿಸಿಯೂ ಶಿವನನ್ನು ನಡೆನುಡಿಗಳಲ್ಲಿ ನೆನೆಸದಿದ್ದರೆ ಸಿಹಿಯಿಲ್ಲದ ಸಪ್ಪಗಿನ ಊಟವನ್ನುಂಡಂತೆ (ನಿಸ್ಸಾರ) ಆಗುವದು.

೫೮೦. ಕಡುಭಕ್ತನಾದರೂ | ಜಡೆಧಾರಿಯಾದರೂ |
ನಡೆವ ವೃತ್ತಿಯಲಿ ನಡೆಯದಿರಲಾ ಭಕ್ತಿ |
ಹೊಡೆವ ಶಂಖದಂದ ಸರ್ವಜ್ಞ ||

ಜಟಾಜೂಟಧಾರಿಯಾಗಿ ಅತ್ಯಂತ (ದೇವರಲ್ಲಿ) ಭಕ್ತಿಯುಳ್ಳವನಾಗಿದ್ದರೂ (ವರ್ಣಾಶ್ರಮ ಧರ್ಮದಂತೆ) ನೀತಿ ಸದಾಚಾರಗಳನ್ನಿಟ್ಟುಕೊಳ್ಳದಂಥ ಮನುಜನ ಬಾಳು ಬೊಬ್ಬೆ ಕುಟ್ಟಿದಂತೆ (ಕೇವಲ ನಿರರ್ಥಕ ಆಗುವದು.

೫೪೧. ಗುರಿಯು ತಾಗದ ಕೋಲ । ನೂರಾರ ನೆಸೆದೇನು ? ।
ಬರಡಿಗೆ ಭಕ್ತಿ ಭಜಿಸಿದೊಡೆ ಅದು ತಾನು ।
ಇರಲರಿಯುದಯ್ಯ ಸರ್ವಜ್ಞ ॥

ನೂರಾರು ಬಾಣಗಳನ್ನು ಬಿಟ್ಟರೂ ಗುರಿ ತಾಗದಿದ್ದರೆ ವ್ಯರ್ಥವು. ಅದರಂತೆಯೇ ಭಕ್ತಿಯ ಸೋಗು ಹಾಕಿ ದೇವರನ್ನು ಭಜಿಸಿದರೆ ಅದು ದೇವರಿಗೆ ಮುಟ್ಟಲಾರದು.

೫೪೨. ಒಂದರ ಮೊದಲೊಳಗೆ । ಬಂದಿಹುದು ಜಗವೆಲ್ಲ ।
ಒಂದರ ಮೊದಲನರಿದರೆ ಜಗಕಣ್ಣ ।
ಮುಂದೆ ಬಂದಿಹುದು ಸರ್ವಜ್ಞ ॥

ಇಡೀ ವಿಶ್ವವೆಲ್ಲ ಎಲ್ಲಕ್ಕೂ ಮೊದಲು ಒಂದರಿದ (ಸರ್ವಶಕ್ತನಾದ ದೇವರಿಂದ) ನಿರ್ಮಿತವಾಗಿರುವದು. ಇಂಥ ಒಂದರ ಜ್ಞಾನವನ್ನು ಚನ್ನಾಗಿ ಮಾಡಿಕೊಂಡು ಬಿಟ್ಟರೆ ಇಡೀ ಜಗತ್ತೇ ನಮ್ಮ ಕಣ್ಣುಮುಂದೆ ಇದ್ದಂತೆ

೫೪೩. ವನಧಿಯೊಳಡಗಿ ತೆರೆ । ವನಧಿಯೊಳಗೆಸೆವಂತೆ ।
ಚಿನುಮಯನಿಪ್ಪ ನಿಜದೊಳಗೆ ತ್ರೈಜಗದ ।
ಜನನ ತಾನೆಂದ ಸರ್ವಜ್ಞ ॥

(ಸಮುದ್ರದ) ತೆರೆಯು ಸಮುದ್ರದಲ್ಲಿಯೇ ಇದ್ದು ಅದರಿಂದೆದ್ದು ಅದನ್ನೇ ಅಪ್ಪಳಿಸುವಂತೆ ದೇವರು ಪ್ರತಿಯೊಬ್ಬರಲ್ಲಿದ್ದು ಅವರಿಂದಲೇ ಕೆಲಸ ಮಾಡಿಸಿ ಅವರಲ್ಲಿಯೇ ಹುಟ್ಟಿ ತೋರಿಸಿಕೊಳ್ಳುತ್ತಾನೆ.

೫೪೪. ಕನಕ ತಾ ಕಂಕಣದ । ಜನಕನೆಂದೆನಿಸಿಹುದು ।
ಕ್ಷಣಿಕವದುರೂಪು ಎಂದರಿಯುದಾ ಮನುಜ ।
ಶುನಕನೆಲೆದಂತೆ ಸರ್ವಜ್ಞ ॥

ಬಂಗಾರದಿಂದ ಮಾಡಿದ ಕಡಗವನ್ನು ಕಡಗವಾಗಿದ್ದರೂ ಮೂಲವು ಬಂಗಾರವೇ ಸರಿ. ಏಕೆಂದರೆ ಈ ರೂಪವನ್ನು ಕೆಡಿಸಿದ ಕ್ಷಣಕ್ಕೆ ಅದು (ಮೂಲ ರೂಪ ಸೇರುವದು) ಬಂಗಾರವಾಗುವದು. ಅದರಂತೆ 'ಮನುಜನು' ಎಂದು ತಿಳಿಯಬೇಕು. ಹಾಗೆ ತಿಳಿಯುದವನು ನಾಯಿಯಿದ್ದಂತೆಯೇ ಸರಿ.

೩೮೫. ಭಿತ್ತಿಯ ಚಿತ್ರದಲಿ | ತತ್ವ ತಾ ನೆರೆದಿಹುದೆ? |
ಚಿತ್ರತ್ವ ತನ್ನ ನಿಜದೊಳಗೆ ತ್ರೈಜಗದ |
ತತ್ವತಾನೆಂದ ಸರ್ವಜ್ಞ ||

ಗೋಡೆಯ ಮೇಲಿನ ಚಿತ್ರದಲ್ಲಿ ತತ್ವಗಳು ಬಂದಿರುವವೇ? ಇಲ್ಲ. ಆದರೆ ಮೂರು ಲೋಕಗಳಲ್ಲಿ ಅಡಗಿರುವ ತತ್ವಗಳೇ ಚಿತ್ರ ರೂಪದಲ್ಲಿ ಗೋಡೆಯ ಮೇಲೆ ಕಾಣಿಸಿಕೊಂಡಿರುವವೆಂದು ತಿಳಿಯಬೇಕು.

೩೮೬. ಓಂಕಾರ ಮುಖವಲ್ಲ | ಆಕಾರವದಕಿಲ್ಲ |
ಆಕಾಶದಂತೆ ಅಡಗಿಹುದು ಪರಬೊಮ್ಮ |
ತಾ ಕಾಣದಯ್ಯ ಸರ್ವಜ್ಞ ||

ಓಂಕಾರಕ್ಕೆ ಮೋರೆಯಿಲ್ಲ, ಅದಕ್ಕೆ ಆಕಾರವಿಲ್ಲ. ಅಂದರೆ ಆಕಾಶದಂತೆ ಅದು ಸರ್ವವ್ಯಾಪಿಯಾಗಿಹುದು. ಇದೇ ಪರಬ್ರಹ್ಮನು. ಆದುದರಿಂದಲೇ ನಮಗೆ ಅವನು ಕಾಣಿಸನು.

೩೮೭. ಕ್ಷೀರದಲ್ಲಿ ಘೃತ, ವಿಮಲ | ನೀರಿನೊಳು ಶಿಖಿಯಿರ್ದು |
ಆರಿಗೂ ತೋರದದರಂತೆ ಎನ್ನೊಳಗೆ |
ಸಾರಿಹನು ಶಿವನು ಸರ್ವಜ್ಞ ||

ಹಾಲಿನಲ್ಲಿ ತುಪ್ಪವಿರುವದೂ (ಮೊಸರು ಮಾಡಿ ಕಡೆದು ಬೆಣ್ಣೆ ತೆಗೆದರೆ) ಪವಿತ್ರವಾದ ನೀರಿನಲ್ಲಿ ಬೆಂಕಿಯಿರುವದೂ (ವಡವಾಗ್ನಿ) ಯಾರಿಗೂ ಕಾಣಿಸುವದಿಲ್ಲ. ಅದರಂತೆಯೇ ಮಾನವನಲ್ಲಿ ಶಿವನು ಬಂದು ನೆಲಿಸಿರುತ್ತಾನೆಂದು ತಿಳಿಯಬೇಕು.

೩೮೮. ಕಲ್ಲುಕಾಷ್ಟದೊಳಿರುವ | ಮುಳ್ಳು ಕೊನೆಯಲ್ಲಿರುವ |
ಸುಳ್ಳು ಈ ಮಾತು ಎನಬೇಡ, ಪರಮಾತ್ಮ |
ನೆಲ್ಲೆಲ್ಲು ಇರುವ ಸರ್ವಜ್ಞ ||

ಕಲ್ಲಿನಲ್ಲಿ ಕಟ್ಟಿಗೆಯಲ್ಲಿ, ಮುಳ್ಳಿನ ಅತಿ ತೀಕ್ಷ್ಣವಾದ ಕೊನೆಯಲ್ಲಿ ಪರಮಾತ್ಮನಿರುವನು. ಈ ಮಾತು ಸುಳ್ಳು ಎಂದೆನಬೇಡ ಅವನು ಸರ್ವದಲ್ಲಿಯೂ ಇರುವನು.

೫೮೯. ಕಲ್ಲಿನಲಿ ಮಣ್ಣಿನಲಿ | ಮುಳ್ಳಿನಾ ಮೊನೆಯಲ್ಲಿ |
ಎಲ್ಲಿ ನೆನೆದಲ್ಲಿ ಶಿವನಿರ್ಪ ಅವ ನೀನಿ |
ದ್ದಲ್ಲಿಯೇ ಇರುವ ಸರ್ವಜ್ಞ ||

ಕಲ್ಲಿನಲ್ಲಿ ಮಣ್ಣಿನಲ್ಲಿ, ಮುಳ್ಳಿನ ತುದಿಯಲ್ಲಿ ನೀನು ನೋಡಿದಲ್ಲಿ ಶಿವನು ಇರುವನು. ಬಹಳವೇಕೆ? ಅವನು ನೀನೆಲ್ಲಿರುವಿಯೋ ಅಲ್ಲಿಯೇ ಇರುವನೆಂದು ತಿಳಿ.

೫೯೦. ಕಲ್ಲುಕಾಷ್ಟವು ಚಿತ್ರ | ದಲ್ಲಿ ಇರುವನೆ ಶಿವನು ? |
ಎಲ್ಲಿಯುಮಾತು ತೆಗೆ, ಬೇಡ ನಿಷ್ಠೆಯಿ |
ದ್ದಲ್ಲಿಪ್ಪನಭವ ಸರ್ವಜ್ಞ ||

ಕಲ್ಲಿನಲ್ಲಿ, ಕಟ್ಟಿಗೆಯಲ್ಲಿ, ಚಿತ್ರದಲ್ಲಿ, ಶಿವನಿರುವನೇ? ಈ ಮಾತು ಸುಳ್ಳು ಎಂದೆನಬೇಡ. ಆ ಸರ್ವವ್ಯಾಪ್ತನು ಭಕ್ತಿ ವಿಶ್ವಾಸಗಳು ಎಲ್ಲಿರುವವೋ ಅಲ್ಲಿಯೇ ಗೋಚರಿಸುವನು.

೫೯೧. ಅಲ್ಲಿಪ್ಪ ನಿಲ್ಲಿಪ್ಪ | ನೆಲ್ಲಿಪ್ಪ ನೆನಬೇಡ |
ಕಲ್ಲಿನಂತಿಪ್ಪ ಮಾನವನ ಮನ ಕರಗೆ |
ಅಲ್ಲಿಪ್ಪ ನೋಡ ಸರ್ವಜ್ಞ ||

(ದೇವರು) ಎಲ್ಲಿರುವನು? ಅಲ್ಲಿರುವನೇ? ಇಲ್ಲಿರುವನೇ? (ಎಂದು ಹುಡುಕಾಡುವದು ವ್ಯರ್ಥ) ಕಲ್ಲಿನಂಥ ಮನಸ್ಸನ್ನು ಕರಗಿಸಿ ಭಕ್ತಿಭಾವದಿಂದ ನೆನೆದರೆ ಮಾನವನ ಹೃದಯದಲ್ಲಿಯೇ ಅವನಿದ್ದುದು ಕಂಡು ಬರುವದು.

೫೯೨. ದಾಸಿಯು ಕೊಡದಂತೆ | ಸೂಸದಿಪ್ಪುದೆ ಯೋಗ |
ದಾಸಿ ಸಾಸಿರದ ನುಡಿ ಹಾಡುತಾ ಕೊಡನೊ |
ಳಾಸೆ ಇಪ್ಪಂತೆ ಸರ್ವಜ್ಞ ||

ದಾಸಿ-(ಸೇವಕಿ ಅಥವಾ ಭಿಕ್ಷುಕಿ)ಯ ಸೋರಕ ಕೊಡದಂತೆ ಸತತವಾಗಿ ಹೊರಸೂಸುತ್ತಿದ್ದಂತೆ ಯೋಗವಲ್ಲ. (ಅದು ದೃಢವಾಗಿ ಗಟ್ಟಿಯಾಗಿರುವದು) ದಾಸಿಯು ಕೊಡುಗೈಗೆ ಆಶೆಯನಿಟ್ಟು ಬಿಟ್ಟೂಬಿಡದೆ ದಾಸಿಯು ಸಾವಿರ ಶಬ್ದಗಳ ಹಾಡು ಹಾಡಿದಂತೆಯೂ ಅಲ್ಲ. (ಅದು ಹೃದಯದ ಏಕಾಗ್ರತೆಗೆ ಕೂಡಿಕೊಂಡಿರಬೇಕು.)

೫೯೩. ಅಷ್ಟದಳ ಕಮಲದಲಿ । ಕಟ್ಟಿ ತಿರಗುವ ಹಂಸ ।
ಮೆಟ್ಟುವಪಳಿವ ನಡುವಿನಲಿ ಇರುವವನು ।
ಮುಟ್ಟುವನೇ ಯೋಗಿ ಸರ್ವಜ್ಞ ॥

ಹೃದಯದಲ್ಲಿಯ ಎಂಟು ದಳಗಳ ಕಮಲದ ದಳಗಳ ಮೇಲೆ ಕಾಮ ಕ್ರೋಧ ಮೊದಲಾದ ಅರಿಷಡ್ವರ್ಗಗಳು ಯಾವಾಗಲೂ (ಹಂಸದಂತೆ) ಹೆಜ್ಜೆಯನ್ನಿಟ್ಟು ಓಡಾಡುತ್ತಿರುವವು. ನಟ್ಟನಡುವೆ ಅಂತರಾತ್ಮಕ ಪರಮಾತ್ಮನಿರುವನು. ಆವನಲ್ಲಿ ಮನಸ್ಸಿಡಬಲ್ಲವನೇ ಯೋಗಿ.

೫೯೪. ಬೆರಳು ನಾಲ್ಕರ ನಡುವೆ । ವಿರಳವಾಡುವ ಹಂಸ ।
ಕೊರಳ ನಾಳದಲಿ ಕಾಣುವದೆ ಯೋಗದ ।
ತಿರುಳು ನೋಡೆಂದ ಸರ್ವಜ್ಞ ॥

(ಹಂಸನಾಮಕ) ಪರಮಾತ್ಮನನ್ನು ನಾಲ್ಕು ಕೈಬೆರಳಿನಿಂದ ಎಣಿಸುವಾಗ ಕಂಠವು ಆವನನ್ನು ತಪ್ಪದೇ ನೆನೆಸುತ್ತಿದ್ದರೆ ಅದೇ ಯೋಗ್ಯ ಯೋಗಸಾಧನೆಯ ಗುಟ್ಟು.

೫೯೫. ತನ್ನ ನಾಭಿಯ ಒಳಗೆ । ವಹ್ನಿ ಮಂಡಲವುಂಟು ।
ವಹ್ನಿಮಂಡಲದ ಒಳಗಣ ನಾಡಿಯಲಿ ।
ತನ್ನ ಕಾಣೆಂದ ಸರ್ವಜ್ಞ

ಮಾನವನ ಹೊಕ್ಕಳದ ಒಳಗೆ ಜಠರಾಗ್ನಿ ಮಂಡಲವುಂಟು. ಆದರ ನಡುವೆ (ಸುಷುಮ್ನಾ ನಾಡಿ) ಪರಮಾತ್ಮನು ನೆಲೆಸಿದ್ದಾನೆ. ಅತ್ತ ಮನವನ್ನು ಸ್ಥಿರೀಕರಿಸಿ ಧ್ಯಾನಿಸು.

೫೯೬. ನಾದದ ಬಳಿವಿಡಿದು । ಅಯ್ದಿಸುವ ಪರಮನ ।
ಹಾದಿಯನು ಅರಿದು ಸುಖಿಯಾಗು ಜನುಮದ ।
ಹಾದಿಗೊಳಬೇಡ ಸರ್ವಜ್ಞ ॥

ಗಾನರೂಪದಲ್ಲಿ ಸ್ತೋತ್ರ ಮಾಡಿದರೆ ಬರುವಂಥ ಪರಮಾತ್ಮನ ಸಾಕ್ಷಾತ್ಕಾರದ ಮಾರ್ಗವನ್ನು ಕಂಡು ಸುಖಿಯಾಗಿ ಬಾಳಬೇಕು. ಲೌಕಿಕದ ಸುಖದ ಬೆನ್ನುಹತ್ತಿ ಮಿಡುಕುವದು ಬೇಡ.

೫೯೭. ಕೋಪಕ್ಕೆ ಯಮರಾಜ । ಪಾಪಕ್ಕೆ ಜವರಾಜ ।
ಕೋಪ ಪಾಪಗಳ ಅಳಿದಂತೆ ಯಮನು ತಾ ।
ಕೂಪನಾಗಿಹನು ಸರ್ವಜ್ಞ ॥

ಕ್ರೋಧ ಮೊದಲಾದವುಗಳಿಂದ ಪಾಪ ( ಕೃತಿಗಳು ಘಟಿಸಿ ) ಉಂಟಾಗುವವು. ಆದ್ದರಿಂದ ಕೋಪ ಪಾಪಗಳಿದ್ದವರನ್ನು ಯಮ ಬೆನ್ನಟ್ಟಿ ಬಂದೇ ಬಿಡುವನು. ಇವೆರಡನ್ನೂ ಗೆದ್ದರೆ ಯಮನು ಶರಣಾಗತನಾಗುವನು.

೫೯೮. ಕೋಪವೆಂಬುದು ತಾನು । ಪಾಪದ ನೆಲೆಗಟ್ಟು ।
ಆಪತ್ತು ಸುಖವು ಸರಿಯೆಂದು ಪೋಪಗೆ ।
ಪಾಪವೆಲ್ಲಿಹುದು ಸರ್ವಜ್ಞ ॥

ಸಿಟ್ಟು ಪಾಪ ಘಟನೆಯ ಅಡಿಗಲ್ಲು. ಆದುದರಿಂದ ಕಷ್ಟ ಸುಖಗಳನ್ನು ಸಮವಾಗಿ ಕಂಡು ಬಾಳುವವನಿಗೆ ಪಾಪವೇ ಘಟಿಸುವದಿಲ್ಲ. ಅವನು ದೇವರ ಸಾನ್ನಿಧ್ಯ ಪಡೆಯುತ್ತಾನೆ.

೫೯೯. ಕ್ರೋಧದಿಂದಲೇ ಯೋಗಿ । ಬಾಧೆಗೊಳಗಾಗಿಹನು ।
ಸಾಧಿಸುತ ವ್ರತವ ಪಿಡಿದಿಹರೆ ನಿಜವರಿದು ।
ಭೇದಗುಣವಳಿದ ಸರ್ವಜ್ಞ ॥

ಯೋಗಿಯಾಗಿದ್ದರೂ ಕೂಡ ಸಿಟ್ಟಿಗೊಳಗಾದರೆ (ಲೌಕಿಕ) ಕಷ್ಟಗಳಲ್ಲಿ ಬಿದ್ದು ಬಿಡುವನು. ಆದ್ದರಿಂದ ದೃಢ ಮನಸ್ಸಿನಿಂದ ಯೋಗವ್ರತವನ್ನು ಸಾಧಿಸಿದರೆ ( ಅವನು ) ನಿಜವಾದ ತತ್ವಗಳನ್ನು ತಿಳಿದು ಭೇದಾಭೇದಗಳು ತ್ಯಜಿಸುವ ಸಾಮರ್ಥ್ಯವನ್ನು ದೊರಕಿಸುವನು.

೬೦೦. ಆಶೆಯಾಬಾವುಗನ । ರೋಷದುರುಗನ ಕಳೆದದು ।
ಮಾಸಿದುದ ಮಡಿಯ ಮಾಡಿದ ಶಿವಯೋಗಿ ।
ಶಾಶ್ವತನಕ್ಕು ಸರ್ವಜ್ಞ ॥

ಯಾವನು ಆಶೆಯೆಂಬುವ ಗಂಡು ಬೆಕ್ಕನ್ನೂ, ಸಿಟ್ಟು ಎಂಬುವ ಹಾವನ್ನೂ ತೊರೆದು ಬಿಡುವನೋ ಆವನು ಪಾಪಿಗಳನ್ನು ಕೂಡ ಪಾವನರನ್ನಾಗಿ ಮಾಡುವನು. ಅಂಥವನೇ ನಿಜವಾದ ಶಿವಯೋಗಿಯು.

೬೦೧. ರಾಗವಿದ್ದರೆ ಭೋಗ | ಭೋಗವಿದ್ದರೆ ರಾಗ |
ರಾಗದಿ ಸಕಲ ಸಂಪದವು ಜಗದಿವಿ |
ರಾಗವೇ ಯೋಗ ಸರ್ವಜ್ಞ ||

ಪ್ರೀತಿಯಿದ್ದಲ್ಲಿ ಉಪಭೋಗಿಸಬಹುದು. ಉಪಭೋಗವೆಲ್ಲಿದೆಯೋ ಅಲ್ಲಿ ಪ್ರೀತಿ ಇದ್ದೇ ಇರುವದು. ಪ್ರಣಯ ಮತ್ತು ಭೋಗವೆರಡೂ ಇದ್ದರೆ (ಲೌಕಿಕ) ಸಕಲ ಸಂಪತ್ತು ಇದ್ದಂತೆ, ಇವೆಲ್ಲವನ್ನೂ ತೊರೆದರೆ ಅದೇ ಯೋಗವೆನಿಸುವದು. ( ಅದೇ ವೈರಾಗ್ಯ. )

೬೦೨. ಕಲ್ಲಿನೊಳಗಿನ ಕಪ್ಪೆ | ಗೆಲ್ಲಿಹರು ತಾಯ್ತಂದೆ ? |
ಅಲ್ಲಿಯೇ ಮರಣಪಡೆವಂದ ಹಂಸ ತಾ |
ನೆಲ್ಲಿರ್ದಡೇನು ಸರ್ವಜ್ಞ ||

ಕಲ್ಲಿನೊಳಗೆ ಹುಟ್ಟಿ ಅಲ್ಲಿಯೇ ಸಾಯುವ ಕಪ್ಪೆಗೆ ತಾಯಿ-ತಂದೆಯರು ಯಾರೂ ಇಲ್ಲ. ಆದರೆ ಹಂಸ ಪಕ್ಷಿಯು ಎಲ್ಲಿದ್ದರೂ ಅದು ಪವಿತ್ರವೆಂದೇ ಎಣಿಸಲ್ಪಡುವದು.

೬೦೩. ಅಂತ್ಯಜಾತಿಯೊಳಿರ್ಪ | ಮುಂತೆ ತೀರ್ಥದೊಳಿರ್ಪ |
ದಂತಿಯೇರಿರ್ಪ ತಿರಿದುಂಬ ಶಿವಯೋಗಿ |
ಎಂತಿರ್ದಡೇನು ಸರ್ವಜ್ಞ ||

ನಿಜವಾದ ಶಿವಯೋಗಿಯು ಅಂತ್ಯ ಜಾತಿಯಲ್ಲಿಯೂ ಇರಬಹುದು. ಆಚೆಯ ಹೊಂಡದಲ್ಲಿ ಮೀಯಲೂಬಹುದು. ಆನೆಯ ಮೇಲೇರಿ ಮೆರೆಯಲೂ ಬಹುದು. ತಿರಿದು ಉಣ್ಣಬಹುದು. ಅವನು ಹೇಗಿದ್ದರೇನು ?

೬೦೪. ಅಂತಿರ್ದ ಇಂತಿರ್ದ | ಎಂತಿರ್ದನೆನಬೇಡ |
ಕಂತೆಯನು ಹೊದ್ದು ತಿಂದುಂಬ ಶಿವಯೋಗಿ |
ಎಂತಿರ್ದಡೇನು ಸರ್ವಜ್ಞ ||

ಕೌದಿಯನ್ನು ಹೊದೆದುಕೊಂಡು ತಿರಿದು ಉಣ್ಣುವ ಶಿವಯೋಗಿಯು 'ಹಾಗೆ ಇದ್ದವನು, ಹೀಗೆ ಇದ್ದವನು, ಅವನೆಂಥವನು' ಎಂದು ನುಡಿಯಬೇಡ, ಅವನು ಹೇಗಿದ್ದರೂ ಸರಿಯೇ.

೨೦೫. ಅತ್ತಿತ್ತ ಹೋದಡಂ । ಮತ್ತೆತ್ತರಿರ್ದೊಡಂ ।
ಸುತ್ತುವ ಮನವ ಕಟ್ಟಿದ ಶಿವಯೋಗಿ ।
ಎತ್ತಲಿದ್ದೇನು ? ಸರ್ವಜ್ಞ ॥

ಚಾಂಚಲ್ಯದಿಂದ ಸುತ್ತಾಡುತ್ತಿರುವ ಮನಸ್ಸು ಸ್ವಾಧೀನದಲ್ಲಿ ಇಟ್ಟು ಕೊಂಡಂಥ ಶಿವಯೋಗಿಯು ಎಲ್ಲಿ ಬೇಕಾದಲ್ಲಿ ವಾಸಿಸಿದರೇನು; ಅವನು ಎಲ್ಲಿದ್ದರೂ ಪೂಜ್ಯನೇ ಸರಿ.

೨೦೬. ಜೋಗಯ್ಯನೆನಬೇಡ । ತ್ಯಾಗಿ ನಿಂದಿಸಬೇಡ ।
ನಾಗಭೂಷಣನ ಹಳಿದ ದಕ್ಷನ ತಲೆಯು ।
ಹೋಗಿಹುದು ನೋಡ ಸರ್ವಜ್ಞ ॥

ಯೋಗಿಯನ್ನು ನಿಂದಿಸಬೇಡ. ಅವನಿಗೆ 'ಜೋಗಯ್ಯ' ಎಂದು ಚೇಷ್ಟೆ ಮಾಡಬೇಡ. ಹಾಗೆ ದಕ್ಷನು ಶಿವನನ್ನು ನಿಂದಿಸಿದ್ದರಿಂದಲೇ ತನ್ನ ತಲೆಯನ್ನು ಕಳೆದುಕೊಳ್ಳಬೇಕಾಯಿತು. (ಅವನಿಗೆ ಹೋತಿನ ತಲೆ ಬಂದಿತು.)

೨೦೭. ಜಡೆಯುಳ್ಳ ಹಿರಿಯರಿಗೆ । ಹೆಡೆಯುಳ್ಳ ಸರ್ಪನಿಗೆ ।
ನಡುಗುತ್ತ ನಮಿಸಿ ನಂಬುದಿಂದ ಎಚ್ಚರನು ।
ಬಿಡದೆ ಕೊಡೆ, ಭಕ್ತಿ ! ಸರ್ವಜ್ಞ ॥

ಜಟಾಧಾರಿಗಳಾದ ದೊಡ್ಡವರಿಗೂ ನಾಗರಹಾವಿಗೂ ಭಯ-ನಯಗಳಿಂದ ನಮಸ್ಕರಿಸು. (ಅಂದರೆ ಆತ್ಮಜ್ಞಾನವನ್ನೂ ಭಕ್ತಿಯನ್ನೂ (ದೇವರು) ನಿನಗೆ ಕೊಡುವನು.

೨೦೮. ಕೋಪವೆಂಬುದು ಕೇಳಿ । ಪಾಪದ ನೆಲೆಗಟ್ಟು ।
ಕೂಪದೊಳು ನೇಣು ಹರಿದಂತೆ ನರಕದೊಳು ।
ಕೋಪಿ ತಾನಿಳಿವ ಸರ್ವಜ್ಞ ॥

ಸಿಟ್ಟು ಎಂಬುವದು ಸಕಲ ಪಾಪಗಳ ಅಡಿಗಲ್ಲು ಇದ್ದಂತೆ, ಭಾವಿಯಲ್ಲಿ ಹಗ್ಗದ ಆಸರದಿಂದ ಇಳಿಯುವಾಗ ಅದು ಹರಿದರೆ ಅವನು ಹೇಗೆ ಬೀಳುವನೋ ಹಾಗೆಯೇ ಕೋಪಿಷ್ಟನು ನರಕದಲ್ಲಿ ಬಿದ್ದು ಬಿಡುವನು.

೬೦೯. ಜಡೆಯಕಟ್ಟಲುಬಹುದು । ಕಡವಸವನುಡಬಹುದು ।
ಬಿಡದೆ ದೇಗುಲದೊಳಿರಬಹುದು, ಕರಣಗಳ ।
ತಡೆಯುವದೇ ಕಷ್ಟ ಸರ್ವಜ್ಞ ॥

ಜಟಾ ಬಿಟ್ಟುಕೊಂಡಿರಬಹುದು. ಸನ್ಯಾಸಿಯಂತೆ ಚರ್ಮವನ್ನು ಉಟ್ಟುಕೊಳ್ಳಲೂಬಹುದು. ಸದಾಕಾಲ ದೇವಾಲಯದಲ್ಲಿಯೇ ವಾಸ ಮಾಡಬಹುದು. ಆದರೆ ಕಾಮುವನ್ನು ಸ್ವಾಧೀನದಲ್ಲಿಟ್ಟುಕೊಳ್ಳುವದು ಮಹಾ ಕಷ್ಟದ ಕೆಲಸವು.

೬೧೦. ಅಡವಿಯನು ಹೊಗಬಹುದು । ಮಡದಿಯನು ಬಿಡಬಹುದು ।
ಬಿಡದೆ ಧ್ಯಾನದೊಳಿರಬಹುದು, ವಾಸನೆಯ ।
ಕೊಡಹಲಳವಲ್ಲ ಸರ್ವಜ್ಞ ॥

ಅಡವಿಗೆ ಹೋಗಿ ವಾನಪ್ರಸ್ಥಾಶ್ರಮಿಯಾಗಬಹುದು. ಹೆಂಡತಿಯನ್ನು ಬಿಟ್ಟಿರಬಹುದು. ಸತತವಾಗಿ ತಪಸ್ಸು ಮಾಡಬಹುದು. ಆದರೆ ಕಾಮದ ವಾಸನೆಯನ್ನು ಕಿತ್ತೊಗೆಯುವದು ಸಾಧ್ಯವಲ್ಲದ ಮಾತು.

೬೧೧. ತಪವ ಮಾಡುವೆನೆಂದು । ಗೊಪೆಯ ಹೊಕ್ಕಿರಬೇಡ ।
ತಪದಲ್ಲಿ ಕುಪಿತ ಬಿಡದಿರಲು ಆ ತಪವು ।
ತಪತಾಪಕಂಡ್ಯೆ ಸರ್ವಜ್ಞ ॥

ತಪಶ್ಚರ್ಯ ಮಾಡುತ್ತೇನೆಂದು ಗುಹೆಯನ್ನು ಹೊಕ್ಕು ಕುಳಿತು ಕೊಳ್ಳಬೇಡ. ತಪಶ್ಚರ್ಯಕ್ಕೆ ಮೊದಲು ಸಿಟ್ಟನ್ನು ಸಂಪೂರ್ಣವಾಗಿ ಬಿಟ್ಟುಬಿಡಬೇಕು. ಇಲ್ಲದಿದ್ದರೆ ಆ ತಪವೇ ಬೆಂಕಿಯ ರೂಪ ತಾಳಿ ಸುಟ್ಟು ಬಿಡುವದು.

೬೧೨. ದಾನದ ಫಲದಿಂದ । ಭೂನಾಥನಾಗುವನು ।
ಭಾನುಮಂಡಲವನೊಡೆದಮಳ ಸ್ವರ್ಗಕ್ಕೆ ।
ತಾನೊಡೆಯನಹನು ಸರ್ವಜ್ಞ ॥

(ಸದಾಕಾಲ ದಾನಮಾಡುತ್ತಿದ್ದರೆ) ಆ ದಾನದ ಪುಣ್ಯ ಫಲದಿಂದ ಈ ಭೂಮಿಗೆ ಒಡೆಯನಾಗುವನು. ಇಷ್ಟೇ ಅಲ್ಲ. ಆಕಾಶ ಮಂಡಲವನ್ನು ಭೇದಿಸಿ ಸ್ವರ್ಗಕ್ಕೆ ಹೋಗಿ ಅಲ್ಲಿಯೂ ಒಡೆಯನಾಗುವನು.

೭೧೩. ಹರಕೊಟ್ಟ ಕಾಲಕ್ಕೆ | ಹರನ ರೂಪಿಗೆ ನೀಡು |
ಹರದೆಯುರು ಸುತರು ನೆರೆಸವಿದು ಸುಖಿಸುತಲಿ |
ಹರವಹರಸುವರು ಸರ್ವಜ್ಞ ||

ದೇವರ ಕೊಟ್ಟ (ಸಿರಿವಂತಿಕೆ ಬಂದಾಗ) ಕಾಲಕ್ಕೆ ದೇವರ ರೂಪಗಳೇ ಆದ ಸಕಲ (ಬಡವರಿಗೆ) ಕೊಡು. ಅಂದರೆ ನಿನ್ನ ಹೆಂಡರು–ಮಕ್ಕಳು ಮುಂದೆ ಸುಖದಿಂದ ಬಾಳಿ ಜೀವನ ಸಾಗರದಲ್ಲಿ ತೇಲಾಡುವರು.

೭೧೪. ಸಿರಿಬಂದ ಕಾಲಕ್ಕೆ | ಕರೆದು ದಾನವ ಮಾಡು |
ಪರಿಣಾಮುವಕ್ಕು ! ಪದವಕ್ಕು, ಕೈಲಾಸ |
ನೆರೆಮನೆಯುು ಅಕ್ಕು ಸರ್ವಜ್ಞ ||

ಸಿರಿವಂತಿಕೆ ಬಂದಾಗ (ಬಡವರನ್ನು)ಕರೆದು ದಾನ ಮಾಡು. ಆದರಿಂದ ಒಳ್ಳೇ ಪರಿಣಾಮವಾಗುವದು ಪುಣ್ಯ ಲಭಿಸುವದು. ಕೈಲಾಸವು ನೆರೆಮನೆಯಷ್ಟು ಸನಿಯದಲ್ಲಿ ಬಂದುಬಿಡುವದು.

೭೧೫. ಸತ್ತಿಗೆಯು ನೆಳಲಡಿಯು | ಸುತ್ತಿ ಬರುವನ ಕಂಡು |
ಎತ್ತಣದು ಪುಣ್ಯವೆನಬೇಡ ಅದು ಮುುನ್ನಿ |
ನುತ್ತಮದ ಫಲವು ಸರ್ವಜ್ಞ ||

ಛತ್ರದ ನೆರಳಿನಲ್ಲಿ ಬರುತ್ತಿರುವವರನ್ನು ನೋಡಿ "ಅಹಾ, ಏನು ಪುಣ್ಯವಂತನಪ್ಪ ಇವನು" ಎಂದೆನಬೇಡ. ಅದು ಹಿಂದೆ ಮಾಡಿದ ಅಗಾಧವಾದ ಪುಣ್ಯದ ಫಲವು.

೭೧೬. ಹುಟ್ಟುವಾಗಳೆ ಧನವ | ಮೊಟ್ಟೆಗಟ್ಟಿಳಿದಿಹನೆ ? |
ಕಟ್ಟಕಡೆಯಲಿ ಕೊಂಡೊಯ್ಯನಿದನರಿದು |
ಕೊಟ್ಟುಂಬದಾನಿ ಸರ್ವಜ್ಞ ||

ಹುಟ್ಟುವಾಗಲೇ ದುಡ್ಡನ್ನು ಗಂಟುಕಟ್ಟಿಕೊಂಡೇ ಭೂಮಿಗಿಳಿಯುವನೇ ? ಅಥವಾ (ಜೀವನದಲ್ಲಿ ವಿಪುಲ ಧನವನ್ನು ಗಳಿಸಿದರೂ ಕೂಡ) ಅದನ್ನು ತಾನು ಹೋಗುವಾಗ ತನ್ನ ಸಂಗಡ ಒಯ್ಯುವನೇ ? ಇದನ್ನರಿತು ಇದ್ದಾಗಲೆಲ್ಲ ದಾನಮಾಡಿ ಉಣ್ಣಬೇಕು.

೬೧೭. ಬೆಂದುದನು ಬಿತ್ತಿ ಬೆಳೆ । ವಂದಿರನು ನಾ ಕಾಣೆ ।
ಬೆಂದುದನು ಬಿತ್ತಿ ಬೆಳೆದುಂಬ ದಾಸೋಹಿ ।
ಇಂದುಧರನಕ್ಕು ಸರ್ವಜ್ಞ ॥

ಬೇಯಿಸಿದ ಕಾಳು-ಕಡಿಗಳನ್ನು ಭೂಮಿಯಲ್ಲಿ ಬಿತ್ತಿ ಪೈರು ತೆಗೆದುಕೊಂಡವನು ನೋಡಲು ಸಿಗುವದಿಲ್ಲ. ಆದರೆ ಬೇಯಿಸಿದ್ದ (ಅನ್ನವ)ನ್ನು ಪರರಿಗಿತ್ತು ಉಂಡು ಬೆಳೆವ ದಾನಿಯು ಪ್ರತ್ಯಕ್ಷ ಸಿವನೇ ಆಗಿಬಿಡುವನು.

೬೧೮. ನೋಡಿದರೆ ನಾಡೊಳಗೆ । ಬೇಡುವದು ಕಡುಪಾಪ ।
ಬೇಡಿದರೆ ಈಯುದದು ಪಾಪ, ಕೊಡುವವರ ।
ತಡವುದೇ ಪಾಪ ಸರ್ವಜ್ಞ ॥

ವಿಚಾರಮಾಡಿ ನೋಡಲಾಗಿ ಈ ಜಗತ್ತಿನಲ್ಲಿ ಭಿಕ್ಷೆಬೇಡಿ ತಿನ್ನುವದು ಪಾಪ, ನಿಜ. ಆದರೆ ಬೇಡಿದರೆ ಕೊಡದೇ ಇರುವದು ಅದಕ್ಕಿಂತಲೂ ಪಾಪ ಕಾರಕವು. ಇದಕ್ಕಿಂತ ಕೊಡಲು ಹೊದವರಿಗೆ 'ಕೊಡಬೇಡ'ವೆಂದು ಹೇಳಿ ತಡೆಯುವದು ಅತ್ಯಂತ ಪಾಪದ ಕೃತಿಯು.

೬೧೯. ಬೇಡುವಾತನ ಮೀಸೆ । ಕಾಡಿಗೆಯು ಬಡಿದಿಕ್ಕು ।
ಬೇಡಲೀಯುದನ ಮೋರೆ ಉರಿಕೆಂಡವನು ।
ನೋಡಿದಂತಕ್ಕು ಸರ್ವಜ್ಞ ॥

ಭಿಕ್ಷೆ ಬೇಡುವವನ ಮೀಸೆಗೆ ಕಪ್ಪು ಬಡೆದಂತೆ (ಅಪಮಾನಕಾರಕವು) ನಿಜ. ಆದರೆ ಬೇಡಿದರೂ ಕೂಡ ಕೊಡದೇ ಇದ್ದವನ ಮುಖವು ಉರಿಯುತ್ತಿರುವ ಕೆಂಡವನ್ನು ಕಂಡಂತೆ. (ಅಂದರೆ ಅದೆಷ್ಟು ಕ್ರೂರ, ಭಯಂಕರ ವಾದದ್ದು ಎಂದರ್ಥ.)

೬೨೦. ಏನ ಬೇಡಿದಡೊಬ್ಬ । ದಾನಿಯನು ಬೇಡುವದು ।
ಹೇನನ್ನು ತಿಂಬ ಹೀನನ ಬೇಡಲವ ।
ನೇನ ತಾ ಕೊಡುವ ? ಸರ್ವಜ್ಞ ॥

ಭಿಕ್ಷೆ ಬೇಡಿದರೂ ಅಡ್ಡಿಯಿಲ್ಲ. ದಾನಶೂರನೂ, ಉದಾರಿಯೂ ಆದವನನ್ನು ಬೇಡಬೇಕು. ಕ್ಷುಲ್ಲಕ ಮನಸ್ಸಿನ ತಾನೇ ತಿನ್ನಲಾರದವನನ್ನು ಕೇಳಿದ್ದರೆ ಅವನೇನು ಕೊಟ್ಟಾನು ? ಏನೂ ಕೊಡಲಾರನು ಎಂದರ್ಥ.

೬೨೧. ದೊರೆತನವ ಮಾಡುವರು | ಕರೆದನ್ನ ನೀಡುವರು |
ಊರಭೂಷಣನ ನೆನೆವವರು ಧರೆಯೊಳಗೆ |
ನರರಲ್ಲ ನೋಡ ಸರ್ವಜ್ಞ ||

ನಿಜವಾದ ರಾಜ್ಯ ಪರಿಪಾಲನ ಮಾಡತಕ್ಕವರೂ, ( ಹರಸಿದವರನ್ನು ) ಕರೆದು ಊಟಕ್ಕೆ ಹಾಕುವಂಥವರೂ (ಯಾವಾಗಲೂ) ಶಿವಧ್ಯಾನ ತತ್ಪರರೂ ಈ ಜಗತ್ತಿನಲ್ಲಿ ಮನುಷ್ಯರಲ್ಲ; ದೇವತೆಗಳೆಂದು ತಿಳಿಯಬೇಕು.

೬೨೨. ಮಂದಿಯಿಲ್ಲದ ರಾಜ್ಯ | ಕಂದನಿಲ್ಲದ ಭಾಗ್ಯ |
ಬಂಧುವಿಲ್ಲದ ಬಾಳುವೆಯು, ಜಗದೊಳಗೆ |
ಚಂದವಿಲ್ಲೆಂದ ಸರ್ವಜ್ಞ ||

ಪ್ರಜೆಗಳೇ ಇಲ್ಲದ ರಾಜ್ಯ, ಮಕ್ಕಳಿಲ್ಲದವನಲ್ಲಿ ಸಿರಿವಂತಿಕೆ ಮತ್ತು ಬಂಧುಬಳಗದವರಿಲ್ಲದೇ ಜೀವನ ಸಾಗಿಸುವದು ಇವು ಜಗತ್ತಿನಲ್ಲಿ ಶೋಭಿಸುವದೇ ಇಲ್ಲ.

೬೨೩. ಊರಿಗೆ ದೊರೆರೂಪು | ನಾರಿಂಗೆ ಗುಣರೂಪು |
ಚಾರುಕೋಕಿಲೆಗೆ ಸ್ವರರೂಪು, ರಾಜಂಗೆ |
ಧೀರತ್ವರೂಪು ಸರ್ವಜ್ಞ ||

ದೊರೆ (ಯಜಮಾನ, ಹಿರಿಯ, ಮುಂದಾಳು)ಯೆಂಬುವವನೊಬ್ಬ ಊರಿಗೆ ಇದ್ದರೆ ಭೂಷಣವು. ಸ್ತ್ರೀಯರಿಗೆ ಸದ್ಗುಣಗಳೇ ಭೂಷಣಗಳು. ರಮಣೀಯವಾದ ಕೋಕಿಲೆಗೆ ಮಧುರ ಸ್ವರವೇ ಭೂಷಣ. ಅದರಂತೆ ರಾಜನೆಂದೆನಿಸಿಕೊಳ್ಳುವವನಿಗೆ ಶೂರತ್ವವೇ ಭೂಷಣವು.

೬೨೪. ಕಟುಕಗಂಜಿಕೆಯೇಕೆ ? | ದಿಟಕೆ ಮೂದಲೆಯೇಕೆ ? |
ಮಠಗಂಡಸತಿಯಗೊಡವೇಕೆ ? ಕಲಿಗೆ ಸಂ |
ಕಟಗಳಿಸಲೇಕೆ ? ಸರ್ವಜ್ಞ ||

ಕಟುಕರವನಿಗೆ ಯಾವ ಪ್ರಾಣಿಯ ಅಂಜಿಕೆಯೂ ಇರುವದಿಲ್ಲ. ಸತ್ಯಕ್ಕೆ ಹಾಸ್ಯದ ಅಥವಾ ನಿಂದೆಯ ಹೆದರಿಕೆಯಿಲ್ಲ. ಮಠಪತಿ (ಸನ್ಯಾಸಿ) ಯಾದವನಿಗೆ ಹೆಂಡತಿಯ ಆಶೆಯಿಲ್ಲ. ಅದರಂತೆ ಶೂರನಿಗೆ ಸಂಕಟಗಳೆಂಬುವೇ ಬಾರವು.

೬೨೫. ಹರಗೆ ನಂದಿಯು ಲೇಸು | ಮರಣ ಭೂತಕೆ ಲೇಸು |
ವರಯುದ್ಧ ಲೇಸು ಸುಭಟಂಗೆ, ರಾಜಂಗೆ |
ಕರಧೈರ್ಯ ಲೇಸು ಸರ್ವಜ್ಞ ||

ಶಿವನಿಗೆ ನಂದಿವಾಹನವು ಅವಶ್ಯವು. ಮರಣ ಹೊಂದದ ವಿನಃ ದೆವ್ವವಾಗಲು ಸಾಧ್ಯವಿಲ್ಲವಾದುದರಿಂದ ಅದು ಅವಶ್ಯ, ವೀರಾಧಿವೀರನಿಗೆ ಘನಘೋರವಾದ ಯುದ್ಧವು ಪ್ರಿಯವಾದುದು. ಅದರಂತೆ ರಾಜನಿಗೆ ಖಡ್ಗವು ಅವಶ್ಯವಾದುದು.

೬೨೬. ಜಾತಿವೀರರು ಸಾವ | ಭೀತಿಗಂಜುಳಿವರೇ ? |
"ಜಾತಸ್ಯಮರಣಂ ಧ್ರುವ" ವೆಂದು ಇರುತಿರಲು |
ಏತಕಂಜುವದು ? ಸರ್ವಜ್ಞ ||

ಹುಟ್ಟಾ ಕ್ಷತ್ರಿಯರಾದವರು ಸಾವಿಗಂಜಿ ಮನೆಯಲ್ಲಿ ಉಳಿಯುವರೇ ? (ಇಲ್ಲ, ಅವರು ರಣರಂಗಕ್ಕೆ ಹೊರಟೇಬಿಡುವರು.) 'ಹುಟ್ಟಿದವನಿಗೆ ಸಾವು ತಪ್ಪದು' ಎಂಬುದು ಗೊತ್ತಿದ್ದವರು ಏತಕ್ಕಾಗಿ ಅಂಜುವರು ?

೬೨೭. ಬಲೆಯು ಹರಿದರೆ ಹೊಲ್ಲ | ಮೊಲೆಯು ಬಿದ್ದರೆ ಹೊಲ್ಲ |
ತಲೆಹೊಲ್ಲ ಮೂಗು ಹರಿದರೆ, ಶಲಿಗೆ ಮೂ |
ದಲೆಯು ನುಡಿಹೊಲ್ಲ ಸರ್ವಜ್ಞ ||

ಬಲೆಯು ಹರಿದಿದ್ದರೆ (ಸಿಕ್ಕ ಬೇಟೆಯು ಪಾರಾಗಿ ಹೋಗುವದು.) ನಿರುಪಯೋಗಿ, ಜೋತುಬಿದ್ದ ಸ್ತನಗಳು ಶೃಂಗಾರ ತರುಣನಿಗೆ ನಿಸ್ಸಾರವು. ಮೂಗು ಹರಿದರೆ ಮಿದುಳು ಸರಿಯಾಗಿ ಕೆಲಸ ಮಾಡದು. ಅದರಂತೆ ಶೂರನನ್ನು ನಿಂದಿಸಿದರೆ, ಟೀಕೆಯ ಮಾತನ್ನಾಡಿದರೆ ಪಾರಾಗಿ ಬರಲಾರನು. (ಹೊಡೆತ ತಿನ್ನುವನು.)

೬೨೮. ಬಿಲ್ಲಿಲ್ಲದಾತೆಯ್ದು | ಹುಲ್ಲಿಂದ ಕಡುಕಷ್ಟ |
ಬಿಲ್ಲಿಲರ್ಜುನನು ರಘುರಾಮರೀ ಜಗದಿ |
ಎಲ್ಲ ಗೆಲಿಹರು ಸರ್ವಜ್ಞ ||

ಧನುರ್ಬಾಣಗಳನ್ನು ಧರಿಸದೇ ಇದ್ದ ವೀರನು ಹುಲ್ಲಿಗಿಂತ ಕೀಳೆಂದು ಭಾವಿಸಬೇಕು. ಅರ್ಜುನ ಮತ್ತು ಶ್ರೀರಾಮಚಂದ್ರರು ಬಿಲ್ಲುಬಾಣಗಳನ್ನು ಧರಿಸಿ ಈ ಜಗತ್ತಿನಲ್ಲಿ ಎಲ್ಲರನ್ನೂ ಗೆದ್ದುಬಿಟ್ಟರು.

೬೨೯. ಚೂರಿಯನು ಬಾಳನ್ನು | ಶೂರತ್ವದಿಂ ಪಿಡಿದು |
ಸಾರಿ ರಣದೊಳಗೆ ಸಾಗಲಾ ಚೂರಿಯು |
ಸೂರೆನೋಡೆಂದ ಸರ್ವಜ್ಞ ||

ಚೂರಿಯನ್ನು ಖಡ್ಗವನ್ನು ಧರಿಸಿಕೊಂಡು ಶೂರತನದಿಂದ ಧೈರ್ಯದಿಂದ ರಣರಂಗದಲ್ಲಿ ಸಾಗಿದಾಗ ಚೂರಿಯ ಸುಲಿಗೆಯನ್ನು ಅಂದರೆ ಚೂರಿ ಹಿಡಿಧವರನ್ನು ಖಡ್ಗಧಾರಿಗಳು ಸೋಲಿಸಿ ಓಡಿಸುವ ರೀತಿಯನ್ನು ನೋಡಬೇಕು.

೬೩೦. ಕತ್ತಿಯನು ಪಿಡಿಯುವಡೆ | ಶಕ್ತಿ ತುಂಬಿರಬೇಕು |
ಶತ್ರುತಾಸುತ್ತ ಮುತ್ತಿ ಬರುತಿರಲು ಕತ್ತಿಯಿಂ |
ನೆತ್ತಿಹೊಯ್ಯೆಂದ ಸರ್ವಜ್ಞ ||

ಖಡ್ಗಧಾರಣಮಾಡಿ ರಣಕ್ಕೆ ಸಾಗುವವನು ತುಂಬಾ ಶಕ್ತಿವಂತನಾಗಿರಬೇಕು. ಏಕೆಂದರೆ ಶತ್ರುಗಳು ಇವನನ್ನು ಸುತ್ತುವರಿದು ಬಂದು ಮುತ್ತಿದರೆ ಆ ಖಡ್ಗದಿಂದ ಅವನ ಶಿರವನ್ನೇ ಕತ್ತರಿಸಿ ಒಗೆಯಬೇಕಾಗುವದು.

೬೩೧. ಕುದಿಯದ ಕೂಳಿಂದ | ಹದುಳದಂಬಲಿ ಲೇಸು |
ಹೃದಯಶೂನ್ಯರುಗಳೊಲವಿಂದ ಅರಿದಿರಲಿ |
ಕದನವೇ ಲೇಸು ಸರ್ವಜ್ಞ ||

ಚನ್ನಾಗಿ ಬೇಯಿಸದೇ ಇರುವ ಅಡಿಗೆಗಿಂತ ಹಳಸಿದ ಅಂಬಲಿಯನ್ನು ಉಣ್ಣುವದು ಒಳ್ಳೆಯದು. ಅದರಂತೆ ಅಂತಃಕರುಣೆಯಿಲ್ಲದವರೊಡನೆ ಪ್ರೀತಿಯ ಮಾತುಗಳನ್ನಾಡುವದಕ್ಕಿಂತ ಸಜ್ಜನರೊಡನೆ ಜಗಳಾಡುವದೇ ಒಳ್ಳೆಯದು.

೬೩೨. ಡೊಂಕುಹಣ್ಣುಗಳಲ್ಲಿ | ಡೊಂಕು ಬಾಳೇಹಣ್ಣು |
ಡೊಂಕುಂಟು ಒಳಗೆ ರುಚಿಯುಂಟು, ಸಜ್ಜನರ |
ಡೊಂಕು ಲೇಸೆಂದ ಸರ್ವಜ್ಞ ||

ಡೊಂಕು ಡೊಂಕಾಗಿರುವ ಹಣ್ಣುಗಳಲ್ಲಿ ಬಾಳೇ ಹಣ್ಣು ಡೊಂಕಾದುದೆಂಬುದು ಪ್ರಸಿದ್ಧ. ಹೊರತ ನೋಡಲು ಅಂದಗೇಡಿ (ಡೊಂಕಾಗಿ) ಯಾಗಿದ್ದರೂ ಒಳಗೆ ರುಚಿಕರವಾದದ್ದಿದೆ. ಸಜ್ಜನರ ಬಾಹ್ಯ ಮತ್ತು ಅಂತರಂಗ ರೂಪ ಕೂಡ ಹೀಗೆಯೇ ಇರುವದು.

೬೩೩. ಅರಿಕೆಹೀನರ ಕೂಡಿ। ನೆರೆದಾಡುವವರಿಂದ।
ಅರಿಕೆಯುಳ್ಳವರ ಒಡನಾಡಿ ಅವಗಂ।
ಸೊರಗಿಹುದೆ ಲೇಸು ಸರ್ವಜ್ಞ॥

ದುರ್ಜನರನ್ನು ಕೂಡಿಕೊಂಡು ಸದಾಕಾಲ ಅವರೊಡನೆ ಮೆರೆದಾಡುತ್ತಿರುವದಕ್ಕಿಂತ ಸಜ್ಜನರ ಸಹವಾಸವು ಆಯುಷ್ಯದಲ್ಲಿ ಅತಿಸ್ವಲ್ಪಕಾಲ ಲಭಿಸಿದರೂ ಒಳ್ಳೇದು.

೬೩೪. ಅರಿಯದವರೊಡನಾಡಿ। ಸಿರಿಯಾಳುವದಕಿಂತ।
ಅರಕೆಯುಳ್ಳವರ ಒಡನಾಡಿ ಅಗಲು।
ಸೆರೆಯಿಹುದೇ ಲೇಸು ಸರ್ವಜ್ಞ॥

ದುರ್ಜನರ ಸಹವಾಸ ಮಾಡಿಕೊಂಡು ಐಶ್ವರ್ಯದಲ್ಲಿ ಲೋಲಾಡುವದಕ್ಕಿಂತ (ಅರಿಕೆಯುಳ್ಳವರು ಅಂದರೆ ಜ್ಞಾನಿಗಳು) ಸಜ್ಜನರ ಸಂಗದಲ್ಲಿ ಸೆರೆಮನೆಯಲ್ಲಿದ್ದು ಕಷ್ಟಪಟ್ಟರೂ ಒಳ್ಳೇದು.

೬೩೫. ನಿಂದೆಯನು ನುಡಿದರೂ। ಸಂದಸಜ್ಜನ ಲೇಸು।
ಹೊಂದಿಸಾಸಿರವ ಕೊಟ್ಟರೂ ದುರ್ಜನರ।
ದಂದುಗನೇ ಬೇಡ ಸರ್ವಜ್ಞ॥

(ನಿಂದೆ) ಬೈದರೂ ಅಡ್ಡಿಯಿಲ್ಲ. ಯೋಗ್ಯರಾದ ಸಜ್ಜನರ ಸಹವಾಸವೇ ಒಳ್ಳೇದು. ಆದರೆ ದುರ್ಜನನು (ನಾವಿದ್ದಲ್ಲಿಗೆ) ಬಂದು ಒಂದು ಸಾವಿರ ನಾಣ್ಯಗಳನ್ನು ಕೊಟ್ಟರೂ ಸಹ ಅವನ ಸಹವಾಸವೇ ಬೇಡ.

೬೩೬. ಅಗಡೆತ್ತು ಕೊಳಹೊಲ್ಲ। ನೆಗಡಿ ಮೂಗಿಗೆ ಹೊಲ್ಲ।
ಪಗಡೆಯಾಡುವನ ಕೆಳೆಹೊಲ್ಲ, ಸಜ್ಜನರ।
ಅಗಲಿರಲು ಹೊಲ್ಲ ಸರ್ವಜ್ಞ॥

(ಅಗಡ) ಇರುಕಳೆತ್ತು ಒದೆಯುವಂಥ ಎತ್ತನ್ನು ಕೊಂಡುಕೊಳ್ಳುವದು ಅಯೋಗ್ಯವಾದದ್ದು. ನೆಗಡಿ ಬಂದರೆ ಮೂಗಿಗೆ ಬಹಳ ತ್ರಾಸು. ಪಗಡೆ (ಲೆತ್ತ) ಯಾಡುವವನ ಗೆಳೆತನವು ಸದಾ ಹಾನಿಕಾರಕವಾದುದು. ಅದರಂತೆ ಸಜ್ಜನರನ್ನು ಅಗಲಿರುವದು ಅತ್ಯಂತ ಅಯೋಗ್ಯವಾದುದು.

೬೩೭. ತ್ರಿಕರ್ಣ ಶುದ್ಧರೊಳು | ಪ್ರಕೃತಿ ವಿರಹಿತರೊಳು |
ಮುಕುತಿಗೆಳೆಯಿಸುವ ಜನರೊಳು ಆವಗಂ |
ಸಖತನವೇ ಲೇಸು ಸರ್ವಜ್ಞ ||

( ತ್ರಿಕರ್ಣ ) ಕಾಯಾ, ವಾಚಾ, ಮನಸಾ ಪವಿತ್ರವಾದವರೊಡನೇ, (ಪ್ರಕೃತಿ) ಸ್ತ್ರೀಯರನ್ನು ತ್ಯಜಿಸಿದ (ಎಲ್ಲ ಸ್ತ್ರೀಯರೂ ತಾಯಿಯ ಸಮಾನ ರೆಂದು ತಿಳಿದವ) ರೊಡನೆ ಮತ್ತು ಮುಕ್ತಿಮಾರ್ಗವನ್ನು ತೋರಿಸುವಂಥ ಯೋಗಿಗಳೊಡನೆ ಯಾವಾಗಲೂ ಗೆಳೆತನ ಮಾಡುವದು ಶ್ರೇಷ್ಠವಾದದ್ದು.

೬೩೮. ಸಜ್ಜನರ ಸಂಗವದು | ಹೆಜ್ಜೇನು ಸವಿದಂತೆ |
ದುರ್ಜನರ ಸಂಗದೊಡನಾಟ ಬಚ್ಚಲಿನ |
ರೊಚ್ಚಿನಂತಿಹುದು ಸರ್ವಜ್ಞ ||

ಸಜ್ಜನರ ಸಹವಾಸವು ಜೇನುತುಪ್ಪದ ಕೊಡವನ್ನು ಸ್ವಾಧೀನದಲ್ಲಿಟ್ಟುಕೊಂಡಷ್ಟು ಸಂತೋಷದಾಯಕವು. ಆದರೆ ದುರ್ಜನರ ಸಹವಾಸ ಮಾಡಿ ಅವರೊಂದಿಗೆ ಗೆಳೆತನ ಬೆಳೆಸಿದರೆ ಬಚ್ಚಲ ನೀರು ಹರಿದು ಸಂಚಯಿಸಲು ಮಾಡಿದ (ಹಿತ್ತಲಲ್ಲಿಯ) ಗುಂಡಿಯು ಕೊಳೆತು ನಾರುವ ನೀರಿನಂತೆ ಪರಿಣಮಿಸುವದು.

೬೩೯. ಬಲ್ಲವರ ಒಡನಾಡ | ಬೆಲ್ಲವನು ಮೆದ್ದಂತೆ |
ಅಲ್ಲದಹುದೆಂಬ ಅಜ್ಞಾನಿಯೊಡನಾಟ |
ಕಲ್ಲುಹಾದಂತೆ ಸರ್ವಜ್ಞ ||

ಜ್ಞಾನಿಗಳೊಡಗೂಡಿ ವಾದಿಸುವದೆಂದರೆ ಬೆಲ್ಲವನ್ನು ತಿನ್ನುತ್ತಿದ್ದಂತೆ ( ಅಷ್ಟು ಸಂತೋಷಪ್ರದವಾದುದು. ) ಇತ್ತಂಡವಾದಿಯಾದ ( ಅಜ್ಞಾನಿ ) ಮೂರ್ಖನೊಡನೆಯ ವಾದವು ಬಂಡೆಗಲ್ಲನ್ನು ಹಾಯ್ದಂತೆ ( ವ್ಯರ್ಥವೂ ಮೈಕೈ ನೋಯಿಸಿಕೊಳ್ಳುವಂಥದೂ ) ಇರುವದು.

೬೪೦. ಸತ್ಯರ ಒಡನಾಟ | ಮತ್ತೆ ಸಕ್ಕರಿ ತುಪ್ಪ |
ಸತ್ಯವಿಲ್ಲದರ ಒಡನಾಟ | ಬೇಲಿಯ |
ಒತ್ತಿಯಂತಿಹುದು ಸರ್ವಜ್ಞ ||

ಸತ್ಯ ಮಾತಾಡುವವರ ಸಂಗ ಮಾಡಿ ವಾದಿಸುವದೆಂದರೆ ಸಕ್ಕರಿಯನ್ನು ತುಪ್ಪದಲ್ಲಿ ಕಲೆಸಿ ತಿಂದಂತೆ, ಅಸತ್ಯರೊಡನಿರುವ ಸಹವಾಸವು ಬೇಲಿಯಲ್ಲಿರುವ ಒತ್ತೀಕಾಟದಂತೆ ಎಂದು ತಿಳಿಯಬೇಕು,

೬೪೧. ಸೀತೆ ನೊಯ್ದುದುದು ಭಂಗ | ಸೇತುಕಟ್ಟಿದು ಭಂಗ |
ಮಾತಿನಭಂಗ ರಾಮಂಗೆ, ರಾವಣನಿ |
ಗೇತರದು ಭಂಗ ಸರ್ವಜ್ಞ ||

ಸೀತಾದೇವಿಯನ್ನು ಎತ್ತಿಕೊಂಡು ಹೋದದ್ದು ಅತ್ಯಂತ ನಾಚಿಕೆಗೇಡಿತನ ಕೆಲಸವು. (ಸಮುದ್ರದಲ್ಲಿ) ಸೇತುವೆಯನ್ನು ಕಟ್ಟಿದ್ದು ಬಹಳ ಕಷ್ಟದಾಯಕ ಕೆಲಸ. ಶ್ರೀರಾಮ ವಚನ ಪಾಲಿಸುವ ವ್ರತವು ಶ್ರಮವುಳ್ಳದ್ದು. ಆದರೆ ರಾವಣನಿಗೆ ಯಾವುದು ಅವಮಾನ? ಯಾವುದು ಕಷ್ಟ? ಯಾವುದು ನಷ್ಟ ?

೬೪೨. ಅಂಬುತಾಗಿದ ಎರಳೆ | ಕೊಂಬೂರಿ ಬೀಳ್ವಂತೆ |
ಇಂಬರಿವ ಸೀತೆಯನಗಲಿದಾ ರಾಮನ |
ಅಂಬುಮುರಿದಿತ್ತೆ ಸರ್ವಜ್ಞ ||

ಬಾಣ ನಟ್ಟಂಥ ಚಿಗರೆಯು ತಲೆಯನ್ನೂರಿ ಬಿದ್ದು ಬಿಡುವಂತೆ ಅರ್ಧಾಂಗಿಯಾದ ಸೀತೆಯು ಕಣ್ಮರೆಯಾದದ್ದರಿಂದ ಶ್ರೀರಾಮನು ಬಿದ್ದು ಶೋಕಿಸಿದನು. ಅವನ ಕೈಯಲ್ಲಿಯ ಬಾಣವು ಆಗ ಮುರಿದಿದ್ದಿತೇ ? (ರಾವಣನ ಬೆಂಬತ್ತ ಬೇಕಾಗಿತ್ತು ?)

೬೪೩. ಅಂಬುತಾಗಿದ ಹುಲ್ಲೆ | ಇಂಬಿಲ್ಲದಲೆವಂತೆ |
ನಂಬಿರ್ದಸೀತೆಯು ತಾನಾಗಲಿ ಶ್ರೀರಾಮ |
ಕುಂಭಿನಿಯೊಳಲೆದ ಸರ್ವಜ್ಞ ||

ಬಾಣ ನಟ್ಟಂಥ ಚಿಗರೆಯು ಸಂಕಟಪಡುತ್ತ ಸಿಕ್ಕಸಿಕ್ಕಲ್ಲಿ ಓಡಿ ಹೋಗುವಂತೆ ನಂಬಿಕೊಂಡಿದ್ದ ಸೀತಾದೇವಿಯನ್ನಗಲಿದ ಶ್ರೀರಾಮನು ಇಡೀ ದೇಶವನ್ನೇ ಸುತ್ತಾಡಿದನು.

೬೪೪. ಹಾಗಿದ್ದೆ ಹೀಗಿದ್ದೆ | ಹೇಗಿದ್ದೆನೆನಬೇಡ |
ಹೋಗಿರಲು ಸೀತೆ ಸೆರೆಯಾಗಿ, ಮಿಕ್ಕವರು |
ಹೇಗಿದ್ದರೇನು ಸರ್ವಜ್ಞ ||

(ನಾನು) ಆ ಪ್ರಕಾರವಾಗಿ ಸುಖವಾಗಿದ್ದೆನು. ಈ ಪ್ರಕಾರ ಐಷ ಆರಾಮದಲ್ಲಿದ್ದೆನು. ನಾನು ಹೇಗಿದ್ದೆನೆಂದು ತಿಳಿದೀರಿ ! ನಿಮಗೆ ಕಲ್ಪನೆಯಿಲ್ಲ, ಅಷ್ಟು ಸುಖದಿಂದಿದ್ದೆನು ಎಂದು ಮಾತಾಡಬೇಡ. ಸೀತಾದೇವಿಯು ಸೆರೆಹಿಡಿಯಲ್ಪಟ್ಟಿರುವಾಗ ಉಳಿದವರು ಹೇಗಿದ್ದರೇನು ?

೭೪೫. ಅಕ್ಕರವ ತೊಡೆದಿಹುದು। ಮುಕ್ಕಣ್ಣಗಳವಲ್ಲ।
ರಕ್ಕಸನು ಸೀತೆ ಒಯ್ವಾಗ ಆರಾರು।
ದಿಕ್ಕಾಗಲಿಲ್ಲ ಸರ್ವಜ್ಞ ॥

ಪ್ರಾರಬ್ಧವನ್ನು ಅಳಿಸುವಂಥಹದು ಸಾಕ್ಷಾತ್ ಮುಕ್ಕಣ್ಣನಾದ ಮಹದೇವನಿಗೂ ಸಾಧ್ಯವಿಲ್ಲ. ನೀಚನು (ರಾವಣನು) ಸೀತಾದೇವಿಯನ್ನು ಅಪಹರಿಸಿಕೊಂಡು ಒಯ್ಯುವಾಗ ಅವಳನ್ನು ಬಿಡಿಸಲು ಯಾರೂ ಬರಲಿಲ್ಲ.

೭೪೬. ಸೇತುವನು ದಾಟಿಯುವ। ಸೀತಿಯನು ಒಯ್ದರೂ।
ಸೋತವಗೆ ಭಂಗವಲ್ಲದೇ ಸೀತೆಗೆದು।
ಏತರದು ಭಂಗ ಸರ್ವಜ್ಞ ॥

ಸೀತಾದೇವಿಯನ್ನು ಕದ್ದುಕೊಂಡು ಸಮುದ್ರವನ್ನು ದಾಟ ತೆಗೆದು ಕೊಂಡು ಹೋಗಿ ಯುದ್ಧದಲ್ಲಿ ಸೋತದ್ದರಿಂದ ಅವನಿಗೆ (ರಾವಣನಿಗೆ) ಅವಮಾನವಾಯಿತಲ್ಲದೇ ಸೀತಾದೇವಿಗೆ ಅಪಮಾನವೂ ಅಲ್ಲ, ತೊಂದರೆಯೂ ಇಲ್ಲ.

೭೪೭. ಅಂಕದರ್ಜುನ ಹೇಡಿ। ಶಂಕರತಿನುರಿದುಂಡ।
ಪಂಕಜನಾಭ ದನಕಾಯ್ದನುಳಿದವರ।
ಬಿಂಕವೇನೆಂದ ಸರ್ವಜ್ಞ ॥

ರಣಶೂರನೆಂದು ಪ್ರಖ್ಯಾತನಾದ ಅರ್ಜುನನು ಹೇಡಿಯಾದನು. (ಷಂಢನಾಗಿ ಬ್ರಹನ್ನಳಿಯಾದ) ಶಂಕರನು ಭಿಕ್ಷಾಪಾತ್ರೆಯನ್ನು ಹಿಡಿದು ಜೀವಿಸಿದನು. ನಾಭಿಕಮಲದಲ್ಲಿ ಬ್ರಹ್ಮನನ್ನು ಹುಟ್ಟಿಸಿದ ಶ್ರೀಮನ್ನಾರಾಯಣನು ( ಕೃಷ್ಣನು ) ದನ ಕಾಯ್ದನು. ಅಂದಮೇಲೆ ಉಳಿದವರ ಪಾಡೇನು

೭೪೮. ಸಾಗರವದಾಂಟಿ ಹೊ। ನ್ನಾಗರಕೆ ಹಾರಿದ।
ರಾಘವನಬಂಟಿ ಹನುಮಂಗೆ ಕಚ್ಚುಟಿಯು।
ಹೋಗಬೇಕೆಂದ ? ಸರ್ವಜ್ಞ ॥

ಶ್ರೀರಾಮಚಂದ್ರನ ಮಹಾಸೇವಕನಾದ ಹನುಮಂತದೇವರು ಸಮುದ್ರವನ್ನೇ ಹಾರಿ ಲಂಕೆಗೆ ಹೋದಂಥ ಮಹಾ ವೀರಾಧಿವೀರನು. ಇಂಥವನ ಕೌಪೀನವು ಜಾರಿಹೋಗದೇ ಹಾಗೆಯೇ ಉಳಿದದ್ದಾದರೂ ಹೇಗೆ ?

೬೪೯. ಭಂಗವಿಲ್ಲದ ಬದುಕು | ತಿಂಗಳಿದ್ದರೆ ಸಾಕು |
ಅಂಗಜನಳಿದು ಹನುಮನೋಡಿದನೆಂಬ |
ಭಂಗಹಿಂಗುವದೇ ಸರ್ವಜ್ಞ ||

ಯಾವತರದ ಹಂಗು ಅಥವಾ ಅಪಮಾನಗಳಿಲ್ಲದೇ ಸಾಗಿಸುವಂಥ ಬಾಳುವೆಯು ಇಡೀ ಆಯುಷ್ಯದಲ್ಲಿ ಒಂದೇ ತಿಂಗಳಿದ್ದರೂ ಸಾಕು. ಆದರೆ ಕಾಮನು ಧರಿಸಿದ್ದನ್ನು ಹನುಮಂತನು ನೋಡಿದ ಅಪಮಾನವು ಎಂದಿಗಾದರೂ ಸಹನವಾದೀತೇ ? (ಇನ್ನೊಂದರ್ಥ ಕಾಮನನ್ನು ತ್ಯಜಿಸಿ ಬ್ರಹ್ಮಚರ್ಯದಿಂದಿದ್ದರೆ ಜೀವನದಲ್ಲಿ ಅಪಮಾನ ಘಟಿಸೀತೇ ?)

೬೫೦. ಹತ್ತು ತಲೆಗಳು ಅವಗೆ | ಸುತ್ತಲೂ ವಾರಿಧಿಯು |
ಮತ್ತೆ ತ್ರಿಕೂಟ, ಗಿರಿದುರ್ಗ, ರಾವಣನಿ |
ಗೆತ್ತಣದು ಕೇಡು ಸರ್ವಜ್ಞ ||

ಹತ್ತು ತಲೆಗಳನ್ನು ಧರಿಸಿದ ವೀರಾಧಿವೀರನಾದ ರಾವಣನು ನಡು ಗಡ್ಡೆಯಲ್ಲಿದ್ದನು. ಅಲ್ಲಿ ಕೂಡ ತ್ರಿಕೂಟ ಪರ್ವತಗಳೇ ಮೊದಲಾದ ಗಿರಿ ದುರ್ಗಗಳಿಂದ ರಕ್ಷಿಸಲ್ಪಟ್ಟವನಾಗಿದ್ದನು. ಇಂಥವನಿಗೂ ಕಷ್ಟಕಾಲವು (ಹೇಗೆ ಮತ್ತು) ಎಲ್ಲಿಂದ ಬಂದಿತು ?

೬೫೧. ಬೆಂದಮನೆ ಬಾಗಲಿಗೆ | ಮುಂದೆ ತೋರಣವೇಕೆ ?
ಸಂದಶೂದ್ರತಿಯ ಒಡನುಂಬ ಹಾರುವಗೆ |
ಮಿಂದೂಟವೇಕೆ ಸರ್ವಜ್ಞ ||

ಸುಟ್ಟುಹೋದಂಥ ಮನೆಯ ಬಾಗಿಲಿಗೆ ತಳಿರು ತೋರಣಗಳನ್ನು ಕಟ್ಟುವದರಿಂದೇನು ಪ್ರಯೋಜನ ? ಅದರಂತೆ ಶೂದ್ರಳನ್ನು ಕೂಡಿಕೊಂಡು ಅವಳೊಡನೆ ಊಟಮಾಡುವಂಥ ಬ್ರಾಹ್ಮಣನಿಗೆ 'ಸ್ನಾನಮಾಡಿದ ಬಳಿಕವೇ ಊಟ' ಎನ್ನುವ ಮಾತಾದರೂ ಏಕೆ ?

೬೫೨. ಹಂದಿಗಂದಣವೇಕೆ ? | ಮಂದಮತಿಸುತನೇಕೆ ? |
ಕುಂದುಕುಲದವಳ ಹೊಂದಿದ ಹಾರುವಗೆ |
ಗಂಧವೇಲೇಕೆ ಸರ್ವಜ್ಞ ||

ಹಂದಿಗೆ ಪಲ್ಲಕ್ಕಿ ಏರುವ ಆಶೆಯೇಕೆ? ಬುದ್ಧಿಯಿಲ್ಲದ ಸುತನನ್ನು ಪಡೆಯುವದೇಕೆ? ಹೀನ ಕುಲದಲ್ಲಿ ಜನಿಸಿದವಳನ್ನು ಕೂಡಿಕೊಂಡಿರುವ ಬ್ರಾಹ್ಮಣನಿಗೆ (ದೇಹಕ್ಕೆ ಹಚ್ಚಿಕೊಳ್ಳಲು) ಗಂಧವೇತಕ್ಕೆ? ಎಲ್ಲವೂ ವ್ಯರ್ಥ ಎಂದರ್ಥ.

೬೫೩. ಸಂಜೆಯುವಂದನೆಯು | ಅಂಜದಲೆ ಮಾಡುವದು |
ಸಂಜೆಯಂಜಿಕೆಯು ನೋಡಗೂಡಲಾ ಸಂಜೆ |
ಸಂಜೆನಂತಕ್ಕು ಸರ್ವಜ್ಞ ||

ಪ್ರತಿದಿನ ಸಂಜೆಯು ಸಮಯದಲ್ಲಿ ಅಂಜದಲೆ ಸಂಧ್ಯಾವಂದನೆಯನ್ನು ಮಾಡಬೇಕು, ಸಂಜೆಯಲ್ಲಿಯ ಅಂಜಿಕೆಗಳು (ಪಾಪಗಳು) ಕೂಡಿಬಂದು ಅವು ವಿಷದಂತೆ ತೋರುವವು. ಆದ್ದರಿಂದ ವಂದನೆಯನ್ನರ್ಪಿಸಬೇಕು.

೬೫೪. ಅಟ್ಟಟ್ಟ ಮಟ್ಟಿಯನು | ಗಟ್ಟಿಯಾಗಿಯೆ ಬಡಿದು |
ನೆಟ್ಟನೆ ಸ್ವರ್ಗಪಡೆಯುವಡೆ ಗುಡ್ದೇಡಿ |
ಕೆಟ್ಟಕೇಡೇನು ? ಸರ್ವಜ್ಞ ||

(ಮಟ್ಟಿ) ಗೋಪೀಚಂದನವನ್ನು ಗಟ್ಟಿಯಾಗಿ ತೇಯ್ದು ದಪ್ಪನಾಗಿ ಮೈತುಂಬ ಬಡಿದುಕೊಂಡಾಕ್ಷಣ ನೇರವಾಗಿ ಸ್ವರ್ಗಕ್ಕೆ ಹೋಗುವದಾದರೆ ಯಾವಾಗಲೂ ಗುದ್ದಿನಲ್ಲಿ ಇರುವ ಏಡಿಯು ಮಾಡಿದ ಕರ್ಮವಾದರೂ ಏನು ? ಅದೇಕೆ ಸ್ವರ್ಗಕ್ಕೆ ಹೋಗಬಾರದು.

೬೫೫. ಮಿಂದು ಪೋಪರೆ ಪಾಪ | ಮಂಡನ ಕೆಸರಲ್ಲ |
ಮಿಂದರೆ ಮೈಯ್ಯಮಲ ಪೋಪುದಾಪಾಪ |
ವೆಂದಿನಂತಿಹುದು ಸರ್ವಜ್ಞ ||

ಕೇವಲ ಸ್ನಾನ ಮಾಡುವದರಿಂದ ಪಾಪ ಹೋಗಲು ಅದೇನು ಮೆತ್ತಿದ ಕೆಸರಲ್ಲ ಸ್ನಾನ ಮಾಡಿದರೆ ದೇಹದ ಮೇಲಿನ ಕೊಳೆಯು ಹೋಗುವದು ನಿಜ. ಆದರೆ ಮಾಡಿದ ಪಾಪಗಳು ಮಾತ್ರ ಶಾಶ್ವತವಾಗಿ ಅಂಟಿಕೊಂಡೇ ಇರುವವು.

೬೫೬. ವೇದಮಂತ್ರವ ಹೇಳಿ | ಕಾದ ತುಪ್ಪದಿ ತೊಳೆಯೇ |
ಹಾದರದ ಪಾಪ ಹೋಯ್ತೆಂಬ ಹಾರುವನ |
ಮೋದದೇ ವಿಧಿಯು ? ಸರ್ವಜ್ಞ ||

ವೇದ ಪಠಿಸಿ ಮಂತ್ರಗಳನ್ನು ಹೇಳಿ ಅದೇ ಬೆಣ್ಣೆ ಕಾಯಿಸಿದ ತುಪ್ಪದ ಊಟವನ್ನು ಯಥೇಷ್ಟವಾಗಿ ಉಂಡರೆ ಪರಸ್ತ್ರೀಗಮನದಿಂದುಂಟಾದ ಪಾಪವು ಹೋಗುವದೆಂದು ಹೇಳುವ ಬ್ರಾಹ್ಮಣನ ಪ್ರಾರಬ್ಧವು ಅಳಿಸಿ ಹೋಗುವದೇ ? (ಸಾಧ್ಯವೇ ಇಲ್ಲವೆಂದರ್ಥ)

೬೫೭. ಯಾಗದ ನೆವದಿಂದ । ಕುರಿತಿಂಬರು ಆಡ ।
ಯಾಗಲಿ ಒಂದು ದಿಟವಿರಲು ಹೋತುಗಳ ।
ನಾಗಲಿಸುವರೇ ? ಸರ್ವಜ್ಞ ॥

ಯಜ್ಞ ಮಾಡುವೆವೆಂಬ ನೆವವನ್ನು ಮುಂದೆ ಮಾಡಿ ಕುರಿಯನ್ನು ಕೊಂದು ತಿನ್ನುವರು. ಯಜ್ಞವನ್ನು ತಿರುಗಿ ಹುಟ್ಟಿಸಬೇಕೆಂಬ ಸತ್ಯದ ಮಾತೊಂದು ಇರುವದು ನಿಜವಾದರೂ (ಇವರು) ಬದುಕಿಸುವರೇ ?

೬೫೮. ಜಪವ ಮಾಡುವ ಜಿಹ್ವೆ । ಉಪಜಿಹ್ವೆಯಾದಂತೆ ।
ಜಪಬೇರೆ ಹಿಂಸೆಯದು ಬೇರೆ, ಅಂತ್ಯದಿ ।
ಜಪವೆತ್ತ ಹೋಯ್ತು ? ಸರ್ವಜ್ಞ ॥

ಜಪತಪಾದಿಗಳನ್ನು ಮಾಡುವ ನಾಲಿಗೆಯು ಎರಡು ಇರುವವು. (ಅಥವಾ ಅದೆಲ್ಲ ಸುಳ್ಳು) ಜಪಮಾಡುವದು ಬೇರೆ ಕೊನೆಗೆ ಹಿಂಸೆ ಮಾಡುವದು. (ಕುರಿಕೊಂದು ಯಜ್ಞ ಮಾಡಿ ತಿನ್ನುವದು ಬೇರೆ) ಕೊನೆಯನ್ನು ಮಾಡುವಾಗ ಜಪವೆಲ್ಲ ಎಲ್ಲಿ ಹೋದವು ? (ಆದ್ದರಿಂದ ಅದು ಸುಳ್ಳು)

೬೫೯. ಆಡತಿಂಬರ್ತಿಯಲಿ । ಮಾಡುವರು ಯಜನವನು ।
ತೀಡಿರಿದು ಹೊಲೆಯರೆನಿಸಿಪ್ಪ ಹಾರುವರ ।
ಕಾಡಲಿಕ್ಕೆಂದ ಸರ್ವಜ್ಞ ॥

ಆಡನ್ನು ತಿನ್ನುವ ಆಶೆಯ ನೆವದಿಂದ ಯಜ್ಞವನ್ನು (ಬ್ರಾಹ್ಮಣರು) ಮಾಡುವರು. ಆಗ ಆ ಆಡನ್ನು ಗುದ್ದಿ ಗುದ್ದಿ ಕೊಲ್ಲುವ ಚಾಂಡಾಲರಾದ ಬ್ರಾಹ್ಮಣರನ್ನು ಅಡವಿಯಪಾಲು ಮಾಡಬೇಕು. (ಹಾಳಾಗಿ ಹೋಗಲಿ ಎಂದು ಸರ್ವಜ್ಞನು ಅನ್ನುವನು.)

೬೬೦. ಕನ್ಯೆಯಾಡನು ತಿಂದು । ಉನ್ನತವನಡರುವಡೆ ।
ಚೆನ್ನಾಗಿ ಹೆಣನಸವಿದಿಪ್ಪ ಶುನಿಯೇಕೆ ।
ಬನ್ನಬಿಡುತಿಹುದು ಸರ್ವಜ್ಞ ॥

ತರುಣ ಆಡನ್ನು ಕೊಂದು ತಿಂದರೆ (ಉನ್ನತವಾದ ಪದವಿ) ಸ್ವರ್ಗಕ್ಕೆ ಹೋಗುವದಾದರೆ ಪ್ರಶಸ್ತವಾಗಿ ಹೆಣವನ್ನು ತಿಂದಂಥ ನಾಯಿಯು ಕಷ್ಟಪಟ್ಟು ತೊಳಲಾಡುತ್ತ ಇಲ್ಲಿಯೇ ಏಕೆ ಬಿದ್ದಿರಬೇಕು ?

೬೬೧. ಉಪ್ಪು ಸಪ್ಪನೆಯಕ್ಕು ಕರ್ಪುರವು ಕರಿದಕ್ಕು ।
ಸರ್ಪನಿಗೆ ಬಾಲವೆರಡಕ್ಕು, ಶ್ರವಣ ತಾ ।
ತಪ್ಪಾಡಿದಂದಕ್ಕು ಸರ್ವಜ್ಞ ॥

ಜೈನನು ಎಂದೂ ಸುಳ್ಳಾಡುವದಿಲ್ಲ. ಒಂದುವೇಳೆ ಅಸತ್ಯ ನುಡಿದರೆ ಉಪ್ಪು (ತನ್ನ ಗುಣವನ್ನು ಕಳೆದುಕೊಂಡು) ಸಪ್ಪಗಾದೀತು. ಕರ್ಪುರದ ಬಣ್ಣ ಕರಿದಾದೀತು. ಹಾವಿಗೆ ಎರಡು ಬಾಲಗಳಾದಾವು. (ಇವು ಹೇಗೆ ಅಶಕ್ಯವೋ ಹಾಗೆಯೇ ಜೈನನು ಸುಳ್ಳಾಡುವದು ಅಶಕ್ಯ.)

೬೬೨. ಮಾತನರಿದ ಸುತನು । ರೀತಿಯರಿದ ಸತಿಯು ।
ನೀತಿಯನು ಅರಿದ ವಿಪ್ರ ತಾ ಜಗದೊಳಗೆ ।
ಜೋತಿಯಿದ್ದಂತೆ ಸರ್ವಜ್ಞ ॥

(ಮಾತನರಿಯದ) ಜಾಣನಾದ ಮಗನು, ರೀತಿ ನಡಾವಳಿಗಳನ್ನು ಬಲ್ಲ ಹೆಂಡತಿಯು, ನೀತಿ, ಶಾಸ್ತ್ರ ಮೊದಲಾದವುಗಳನ್ನರಿತ ಬ್ರಾಹ್ಮಣನು ಈ ಮೂವರೂ ಇಡೀ ಜಗತ್ತಿಗೆ ದಾರಿತೋರುವ ದೀಪವಿದ್ದಂತೆ ಶೋಭಿಸುವರು.

೬೬೩. ಧಾರದಿಂದಲೇ ಮುತ್ತು । ಹಾರವೆಂದೆನಿಸುವದು !
ಆರದಯ್ದು ನಡೆವ ದ್ವಿಜರುಗಳ ಸಂಸರ್ಗ ।
ವಾರಿಂದಲಧಿಕ ಸರ್ವಜ್ಞ ॥

ದಾರದ ಸಹಾಯದಿಂದ ಮುತ್ತುಗಳೆಲ್ಲವೂ ಒಂದೆಡೆ ಸೇರಿ ಹಾರವೆಂದೆನಿಸಿ ( ಅಲಂಕಾರವಾಗುವದು ) ಅದರಂತೆ ಜ್ಞಾನಿಯಾಗಿ ತಿಳಿದು ಜೀವನ ಸಾಗಿಸುತ್ತಿರುವ ಬ್ರಾಹ್ಮಣರುಗಳ ಸಹವಾಸವು ಎಲ್ಲದಕ್ಕೂ ಹೆಚ್ಚಿನದು.

೬೬೪. ವಿಪ್ರರಿಂದಲೆ ವಿದ್ಯೆ । ವಿಪ್ರರಿಂದಲೆ ಬುದ್ಧಿ ।
ವಿಪ್ರ, ನಿಜವಿಪ್ರರಿಲ್ಲದಿರೆ ಈ ಜಗವು ।
ಕ್ಷಿಪ್ರದಲಿ ಕೆಡಗು ಸರ್ವಜ್ಞ ॥

ಬ್ರಾಹ್ಮಣರೇ ವಿದ್ಯಾಭ್ಯಾಸ ಮಾಡಿಸಲು ಸಮರ್ಥರು. ಬ್ರಾಹ್ಮಣರೇ ಬುದ್ಧಿ ಮಾರ್ಗ ಪ್ರದರ್ಶಕರು. ನಿಜವಾದ ಬ್ರಾಹ್ಮಣರು ಇಲ್ಲದಿದ್ದರೆ ಈ ಜಗತ್ತು ಕ್ಷಣದಲ್ಲಿ ನಾಶಹೊಂದುವದು.

೬೬೫. ಅರಿತಂಗೆ ಅರವತ್ತು । ಮರೆತಂಗೆ ಮೂವತ್ತು ।
ಬರೆವಂಗೆ ರಾಜ್ಯ ಸರಿಪಾಲು, ಹಾರುವನು ।
ಬರೆಯದೆ ಕೆಟ್ಟ ಸರ್ವಜ್ಞ ॥

ಜ್ಞಾನವಂತರಾದವರಿಗೆ (ನೂರರಲ್ಲಿ) ಅರವತ್ತು ಸ್ಥಾನ ಸಿಗುವದು. (ವಿದ್ಯೆಕಲಿತು) ಮರೆತವನಿಗೆ ಮೂವತ್ತು. ಬರಹವನ್ನು ಬಲ್ಲವನಂತೂ ಅರ್ಧ ರಾಜ್ಯಪದಕ್ಕೆ ಸರಿಯಾದ ಸ್ಥಾನಕ್ಕೆ ಬರಬಲ್ಲನು. ಇಂಥ ಬರಹವನ್ನು ಅರಿಯದಿದ್ದ ಬ್ರಾಹ್ಮಣನೇ ಕೀಳು.

೬೬೬. ದ್ವಿಜನೊಮ್ಮೆ ಜನಿಸಿ ತಾ । ನಜನಂತೆ ಜಿಗಿಯುವನು ।
ದ್ವಿಜನರೆಲ್ಲರಂತೆ ಮುನನಿರೆ, ಋಜುವಿಂದ ।
ದ್ವಿಜನು ತಾನಹನು ಸರ್ವಜ್ಞ ॥

ಒಮ್ಮೆ ಬ್ರಾಹ್ಮಣ ಜನ್ಮತಾಳಿ ಹುಟಿದನೆಂದರೆ ಪ್ರತ್ಯಕ್ಷ ಬ್ರಹ್ಮನೆಂದೇ ತಿಳಿದು ಜಿಗಿದಾಡುವನು. ಆದರೆ ಬ್ರಾಹ್ಮಣರು ಎಲ್ಲರಂತೆ ಸ್ನಾನ ಜಪತಪಾದಿಗಳನ್ನೂ ಜ್ಞಾನಾರ್ಜನೆಯನ್ನೂ ಬಿಟ್ಟನೆಂದರೆ ಎಲ್ಲರಿಗಿಂತಲೂ ಕೀಳಾಗಿಬಿಡುವನು.

೬೬೭. ಹೊರಗೆಳೆದ ಉರಗನ । ಗರಳ ತಾ ತಪ್ಪುವದೆ ? ।
ಪರತತ್ವ ಬೋಧೆನರಿಯದೆ । ಶ್ರವಣ ತಾ ।
ಸಿರಿಯ ತೊರೆದೇನು ಸರ್ವಜ್ಞ ॥

ಹುತ್ತಿನಿಂದ ಹಾವನ್ನು ಹೊರಗೆ ಎಳೆದೊಗೆದಾಕ್ಷಣ ಅದರ ವಿಷವನ್ನು ತೆಗೆದೊಗೆದಂತಾಯಿತೇ ? ಅದರಂತೆ ಪರಮಾತ್ಮನ ಸಂಬಂಧವಾದ ಜ್ಞಾನವನ್ನರಿಯದೇ ಈ ಜೈನರು ಐಶ್ವರ್ಯವನ್ನು ತ್ಯಜಿಸಿದರೇನು ಫಲ ?

೬೬೮. ಆಚಾರವಿಹುದೆಂದು । ಲೋಟಗುಂಡಿಗೆ ವಿಡಿದು ।
ಭೂಚರರದಿ ಸತ್ತ ನವಿಲುಗರಿ ಪಿಡಿಯುವದು ।
ನೀಚವಲ್ಲೇನು ಸರ್ವಜ್ಞ ॥

ತಾವು ಬಹಳ ಆಚಾರವಂತರು ಎಂಬ ಬಿಂಕದಿಂದ ದಂಡ ಕಮಂಡಲಗಳನ್ನು ಧರಿಸಿ (ಜೈನರು) ಈ ಭೂಮಿಯ ಮೇಲಿನ ಸತ್ತ ನವಿಲಿನ ಗರಿಯನ್ನು ಹಿಡಿದುಕೊಂಡು ಓಡಾಡುವದು ಪಾಪಕರವಲ್ಲವೇ ?

೬೬೯. ಕೊಲ್ಲದಿಪ್ಪಾ ಧರ್ಮ | ವೆಲ್ಲರಿಗೆ ಸನುಮತವು |
ಅಲ್ಲದನು ಮೀರಿ ಮಾಡುವನು ನರಕಕ್ಕೆ |
ನಿಲ್ಲದೇ ಹೋದ ಸರ್ವಜ್ಞ ||

ಪರಹಿಂಸಾ ಪ್ರತೀಕಾರಕವಾದ ಧರ್ಮತತ್ವಗಳು ಎಲ್ಲರಿಗೂ ಒಪ್ಪಿಗೆಯಾಗುವಂಥವುಗಳು. ಅನ್ಯಾಯ, ಅನೀತಿ, ನೀಚತನ, ಹಿಂಸಾ ಮೊದಲಾದ ಅಲ್ಲದ ಕಾರ್ಯ ಎಸಗುವವನು ನೇರವಾಗಿ ನರಕಕ್ಕೆ ಹೋಗುವನು. ಅದರಲ್ಲಿ ಸಂಶಯವೇ ಇಲ್ಲ.

೬೭೦. ಹೇನುಕೂರೆಗಳನ್ನು | ತಾನಾಗಿ ಜಿನಕೊಲ್ಲ |
ಸ್ಥಾನಪಲ್ಲಟವ ತಾ ಮಾಡಿ ಆ ಮೇಲೆ |
ಏನಾದುದರಿಯ ಸರ್ವಜ್ಞ ||

(ತಲೆಯನ್ನು ಕಡಿದು ಕಷ್ಟ ಕೊಡುತ್ತಿರುವ) ಹೇನು, ಕೂರೆಗಳನ್ನು ಜೈನರು ತಾವು ಸ್ವತಃ ಒರೆದು ಕೊಲ್ಲುವದಿಲ್ಲ. ಅವುಗಳನ್ನು ತೆಗೆದು ಅತ್ತ ದೂರ ಒಗೆದುಬಿಡುವರು. ಆಗ ಅವುಗಳ ಗತಿ ಏನಾದರೂ ಆಗಲೊಲ್ಲದೇಕೆ, (ಹೆರವರು ಕೊಂದು ಒಗೆದರೂ ಸರಿ. ಬಿಸಿಲಿಗೆ ತಾವಾಗಿಯೇ ಸತ್ತರೂ ಸರಿ) ಅದು ಮಾತ್ರ ಜೈನನು ತಿಳಿಯಲಿಚ್ಛಿಸನು.

೬೭೧. ಚಂದ್ರಸೂರ್ಯರ ಗ್ರಹಣ | ಒಂದೆಮಾಸದಿ ಬಂದು |
ತಂದೆಯನು ಕಂದನಿರಿದಂದು ಲೋಕಕ್ಕೆ |
ಬಂದೀತು ಪ್ರಳಯ ಸರ್ವಜ್ಞ ||

ಒಂದೇ ತಿಂಗಳಲ್ಲಿ ಸೂರ್ಯ ಚಂದ್ರಗಳೆರಡರ ಗ್ರಹಣಗಳೂ ಬಂದಾಗ, ಮಗನು ತಂದೆಯನ್ನು (ಕತ್ತಿಯಿಂದ) ಇರಿದು ಕೊಂದಾಗ ಇಡೀ ಲೋಕಕ್ಕೆ ಪ್ರಳಯಕಾಲ ಬಂದಿತೆಂದು ತಿಳಿಯಬೇಕು,

೬೭೨. ನಂದಿವಾಹನನಲ್ಲಿ | ಸಂದೇಹಪಡಬೇಡ |
ನಂದನದಲೊಂದು ಕುರಿಹುಟ್ಟಿ ಶರಣರು |
ಬಂದುದಕೆ ಕುರುಹು ಸರ್ವಜ್ಞ ||

(ನಂದಿವಾಹನ) ಶಿವನಲ್ಲಿ ಅವಿಶ್ವಾಸವನ್ನು ಮಾಡಬೇಡ. ಒಂದಾನೊಂದು ಕಾಲದಲ್ಲಿ ನಂದನವನದಲ್ಲಿ ಬಂದು ಕುರಿಯು ಜನಿಸುವದು. ಅಂದಿನಿಂದಲೇ ಶಿವಶರಣರು ಬಂದು ಜಗತ್ತನ್ನು ಉದ್ಧರಿಸುವರು.

೬೭೩. ಪಂಚಲೋಹದ ಕಂಬಿ | ಮುಂಚೆ ಭೂಮಿಗೆ ಹಾಸಿ |
ಕಂಚಿನರಥವನಡೆಸುವರು ಅದರೋಟ |
ಮಿಂಚು ಹೊಡೆದಂತೆ ಸರ್ವಜ್ಞ ||

ಕಬ್ಬಿಣದ ಕಂಬಿಗಳನ್ನು ಮೊದಲು ಭೂಮಿಯ ಮೇಲೆ ಹಾಸಿದಂತೆ ಇಟ್ಟು ಅದರ ಮೇಲೆ ಕಂಚಿನ ಬಂಡಿಯನ್ನು ನಡೆಸುವರು. ಅದು ಮಿಂಚಿನ ವೇಗದಿಂದ ಅತಿ ವೇಗವಾಗಿ ಓಡುವದು,

೬೭೪. ಕಾಸುವೆಚ್ಚಕೆ ಲೇಸು | ದೋಸೆ ಹಾಲಿಗೆ ಲೇಸು |
ಕೂಸಿಗೆ ತಾಯಿ ಇರಲೇಸು, ಹರೆಯದಗೆ |
ಮೀಸೆಲೇಸೆಂದ ಸರ್ವಜ್ಞ ||

(ಕ್ಷಣ ಕ್ಷಣದ) ವೆಚ್ಚಕ್ಕಾಗಿ ದುಡ್ಡು ಇರುವದು ಅತ್ಯವಶ್ಯ. ದೋಸೆಯ ಜೊತೆಗೆ (ಆಗಿನ ಕಾಲದಲ್ಲಿ) ಹಾಲು ಇದ್ದರೆ ರುಚಿಕರವು. ಕೂಸಿಗೆ ತಾಯಿ ಇದ್ದರೆ ಮಾತ್ರ ಆರೈಕೆ ಹೊಂದಿ ಅದು ಬೆಳೆಯುವದು. ಅದರಂತೆ ತರುಣನಿಗೆ ಮೀಶೆಯೂ ಭೂಷಣಪ್ರಾಯವು.

೬೭೫. ಗಾಜುನೋಟಕೆ ಲೇಸು | ಮೋಜು ಇರುಳಲಿ ಲೇಸು |
ರಾಜಾಂಗ ವಸ್ತ್ರ ಉಡಲೇಸು ಊಟಕ್ಕೆ |
ರಾಜಾನ್ನಲೇಸು ಸರ್ವಜ್ಞ ||

( ಗಾಜು ) ಕಾಜಿನ ವಸ್ತುಗಳು ಸಂದರವಾದವುಗಳು. ರಾತ್ರಿಯಲ್ಲಿ ( ಮೋಜು ಮಾಡಿ ಅಥವಾ ) ಜಾದುಗಾರಿಕೆಯನ್ನು ನೋಡುವದು ಸುಖಕರವು. ಬೆಲೆಯುಳ್ಳ ಪೋಷಾಕನ್ನು ಧರಿಸುವದು ಭೂಷಣವು. ಅದರಂತೆ ( ರಾಜನ್ನ ರಾಜರು ಉಣ್ಣುವ ಅನ್ನ ಅರ್ಥಾತ್ ) ಮೃಷ್ಟಾನ್ನ ಭೋಜನವು ಬಹಳ ಒಳ್ಳೆಯದು.

೬೭೬. ತುಪ್ಪಓಗರ ಲೇಸು | ಉಪ್ಪರಿಗೆ ಮನೆಲೇಸು |
ಅಪ್ಪಬಾರೆಂಬ ಮಗಲೇಸು, ಊರೊಳಗೆ |
ಚಿಪ್ಪಿಗರು ಲೇಸು ||ಸರ್ವಜ್ಞ ||

ಅನ್ನಕ್ಕೆ ತುಪ್ಪವನ್ನಿತ್ತು ಉಂಡರೆ ರುಚಿಯು. ಅಟ್ಟದ ಮನೆಯು ವಾಸಿಸಲು ಸುಖಕರವಾದುದು. ಕಂಡರೆ ಎತ್ತೆಂಟು ಧಾವಿಸುವ ಮಗನಿದ್ದರೆ ಆನಂದವಾಗುವದು, ಅದರಂತೆ ಊರಿಗೆ ( ಕನಿಷ್ಟ ) ಒಬ್ಬ ಸಿಂಪಿಗನಿದ್ದರೆ ಒಳ್ಳೇದು.

೭೭೭. ಕಂಚಿಯು ಫಲ ಲೇಸು | ಮಿಂಚು ಮುಗಿಲಿಗೆ ಲೇಸು |
ಕೆಂಚನೆಯ ಸತಿಯು ಇರಲೇಸು, ಊರಿಂಗೆ |
ಪಂಚಾಳಲೇಸು ಸರ್ವಜ್ಞ ||

ಕಂಚಿಯು (ಒಂದು ತರದ) ಬಹಳ ರುಚಿಕರವು. ಮುಗುಲಿಗೆ ಮಿಂಚು ಭೂಷಣಪ್ರಾಯವು. ಕೆಂಪನ್ನ ಹೆಂಡತಿ ಇದ್ದರೆ ಬಹಳ ಅಭಿಮಾನಾಸ್ಪದವು. ಅದರಂತೆ ಊರಲ್ಲಿ (ಕನಿಷ್ಟ) ಒಬ್ಬ ಅಕ್ಕಸಾಲಿಗನಿದ್ದರೆ ಒಳಿತು.

೭೭೮. ಎಮ್ಮೆಯ ಹಯನವ್ವು ಲೇಸು | ಕಮ್ಮನಾಮ್ಲವು ಲೇಸು |
ಸುಮ್ಮನೇ ಒಡವೆ ಬರಲೇಸು, ಊರಿಂಗೆ |
ಕಮ್ಮಾರ ಲೇಸು ಸರ್ವಜ್ಞ ||

ಹಾಲನ್ನು ಈಯುತ್ತಿರುವ ಎಮ್ಮೆಯು ಮನೆಯಲ್ಲಿದ್ದರೆ ಒಳಿತು. ಗಮಗಮಿಸುವ ಅಂಬಲಿಯು ಊಟಕ್ಕೆ ಅವಶ್ಯ. ನಿರಾಯಾಸವಾಗಿ ಆಭರಣಗಳು ದೊರಕಿದರೆ ಸಂತೋಷವು. ಅದರಂತೆ ಊರಿಗೆ ಕಮ್ಮಾರನಿದ್ದರೆ ಒಳಿತು.

೭೭೯. ಹಡುಗು ಗಾಳಿಗೆ ಲೇಸು | ಗುಡುಗು ಮಳೆ ಬರೆ ಲೇಸು |
ಒಡಹುಟ್ಟಿದವರು ಇರಲೇಸು, ಊರಿಂಗೆ |
ಬಡಿಗ ಲೇಸೆಂದ ಸರ್ವಜ್ಞ ||

ಹಡಗ ಚಲಿಸಲು ಗಾಳಿಯು ಆವಶ್ಯಕತೆ ಇದೆ. ಮಳೆ ಬರಲು ಗುಡುಗು ಆಗೇತೀರಬೇಕು. (ಪರಸ್ಪರರ) ಸಹಾಯದಿಂದ ಸುಖವಾಗಿರಲು ಅಣ್ಣತಮ್ಮಂದಿರಿದ್ದರೆ ಒಳ್ಳೇದು. ಅದರಂತೆ ಊರಿಗೊಬ್ಬ ಬಡಿಗ ಬೇಕೇ ಬೇಕು.

೭೮೦. ಅಂಬು ಬಿಲ್ಲಿಗೆ ಲೇಸು | ಇಂಬು ಕೋಣೆಗೆ ಲೇಸು |
ಸಂಬಾರ ಲೇಸು ಸಾರಿಗೆ, ಊರಿಂಗೆ |
ಕುಂಬಾರ ಲೇಸು ಸರ್ವಜ್ಞ ||

ಬಿಲ್ಲಿಗೆ ಬಾಣವು ಅತ್ಯವಶ್ಯವು. ಪ್ರಶಸ್ಥವಾದ ಕೋಣೆಯು ವಾಸಿಸಲು ಅವಶ್ಯ. ಮಜ್ಜಿಗೆಯು ಸಾರುಮಾಡಿ ಊಟ ಮಾಡಲು ರುಚಿಕರವು. ಅದರಂತೆ ಊರಿಗೊಬ್ಬ ಕುಂಬಾರನಿರಲೇ ಬೇಕು. (ಪಾತ್ರೆಗಳನ್ನು ಮಾಡಿ ಜೀವನ ಸಾಧನೆಗಳನ್ನು ಒದಗಿಸುವನು.)

೭೮೧. ಪುಣ್ಯತನಗುಳ್ಳನಕ | ಮನ್ನಣೆಯು ಪಿರಿದಕ್ಕು |
ಹಣ್ಣಿದ ಕಾರ್ಯ ಫಲವಕ್ಕು ಮುಟ್ಟಿದ |
ಮಣ್ಣು ಪೊನ್ನಕ್ಕು ಸರ್ವಜ್ಞ ||

ಪುಣ್ಯ ಪ್ರಭಾವವಿರುವವರೆಗೂ ಮನುಷ್ಯನಿಗೆ ಜಗತ್ತಿನ ಎಲ್ಲ ಕಡೆಗೂ ಮಾನ ಮರ್ಯಾದೆಗಳು ಸಿಗುವವು. ಕೈಕೊಂಡ ಕಾರ್ಯಗಳೆಲ್ಲವೂ ಫಲಿಸುವವು. ಅದೇಕೆ ? ಮಣ್ಣನ್ನು ಹಿಡಿದರೂ ಅದು ಅವನ ಪಾಲಿಗೆ ಹೊನ್ನಾಗುವದು.

೭೮೨. ಸತ್ಯನುಡಿದತ್ತರೂ| ಸುತನೊಬ್ಬ ಸತ್ತರೂ |
ಸತ್ಯವನು ಬಿಡದ ಹರಿಚಂದ್ರ ಜಗದೊಳಗೆ |
ಸ್ತುತ್ಯನಾಗಿಹನು ಸರ್ವಜ್ಞ ||

ಸತ್ಯ ಮಾತಾಡಿದ್ದಕ್ಕಾಗಿ ದುಃಖಿಯಾಗಿಯೂ, ಇದ್ದ ಓರ್ವ ಮಗನು ಸತ್ತರೂ ಸರಿ. ಸತ್ಯ (ನಡೆನುಡಿಗಳ)ವನ್ನು ಬಿಡದ ಹರಿಶ್ಚಂದ್ರನು ಇಡೀ ಜಗತ್ತಿನಿಂದಲೇ ಹೊಗಳಲ್ಪಡುತ್ತಾನೆ.

೭೮೩. ಬತ್ತಿ ಎಣ್ಣೆಗಳೆರಡು | ಹೊತ್ತಿಬೆಳಗುವ ತೆರದಿ |
ಸತ್ಯ ನೀತಿಗಳು ಬೆಳಗಿಹವು, ಜೋಡಗಲೆ |
ಕತ್ತಲೀ ಜಗವು ಸರ್ವಜ್ಞ ||

ಬತ್ತಿ ಮತ್ತು ಎಣ್ಣೆ ಇವೆರಡೂ ಕೂಡಿ (ಬತ್ತಿಗೆ ದೀಪವನ್ನು ಹಚ್ಚಿದಾಗ ಅವೆರಡೂ ಸುಡುತ್ತ) ಬೆಳಕನ್ನು ತೋರುವಂತೆ ಸತ್ಯನುಡಿ, ನೀತಿಯ ನಡಾವಳಿಗಳು ಇಡೀ ಜಗತ್ತಿಗೇ (ಬೆಳಕು) ದಾರಿ ತೋರುವವು. ಅವೆರಡನ್ನೂ (ಒಂದೇ ವೇಳೆ) ಅಗಲಿಸಿದರೆ ಜಗತ್ತು ಕತ್ತಲಿನಲ್ಲಿ ಬಿದ್ದು ಬಿಡುವದು. (ಅಧಃಪತನವಾಗುವದು.)

೭೮೪. ಕುಂದನಳಿದವ ದೈವ | ಬಂಧ ಕಳೆದವ ದೈವ |
ನೊಂದು ತಾ ನೋಯಿಸದವ ದೈವ ಹುಸಿಯದನು |
ಇಂದುಧರನೆಂದ ಸರ್ವಜ್ಞ ||

ಸಕಲ ಕುಂದು ಕೊರತೆಗಳನ್ನು ಪರಿಹರಿಸುವವನು ದೇವರು. ಸಂಸಾರ ಬಂಧನವನ್ನು ಕಡಿಯುವವನು ದೇವರು. (ಭಕ್ತರಿಗಾಗಿ) ತಾನು ಕಷ್ಟಪಟ್ಟು ಅವರನ್ನು ಪಾರುಮಾಡುವವ ದೇವರು. ಇದು ಸುಳ್ಳಲ್ಲ ಇದಕ್ಕೆ ಶಿವನೇ ಸಾಕ್ಷಿ.

೭೮೫. ಹುಸಿವನಿಂದೈನೂರು । ಪಶುವ ಕೊಂದವಲೇಸು ।
ಶಿಶುವಧೆಯ ಮಾಡಿದವ ಲೇಸು, ಮರೆಯಲಿ ।
ದ್ದೆಸೆದರೂಲೇಸು ಸರ್ವಜ್ಞ ॥

ಪಶುವಧೆಯನ್ನು ಮಾಡಿದವನು, ಕೂಸನ್ನು ಕೊಂದವನೂ, ಮರೆಯಲ್ಲಿ ನಿಂತು ಮೋಸದಿಂದ ಹೊಡೆದವನು ಸುಳ್ಳು ಮಾತಾಡುವವನಿಗಿಂತ ಐನೂರು ಪಟ್ಟು ಮೇಲು (ಅಂದರೆ ಸುಳ್ಳುಗಾರನು ಇವನಿಗಿಂತ ಐನೂರು ಪಟ್ಟು ಕೀಳು (ಪಾಪಿ) ಎಂದರ್ಥ.)

೭೮೬. ಆಡಿಹುಸಿಯಲು ಹೊಲ್ಲ । ಕೂಡಿತಪ್ಪಲು ಹೊಲ್ಲ ।
ಕಾಡುವ ನೆಂಟ ಬರಹೊಲ್ಲ । ಸಟೆಯುತಾ ।
ನಾಡುವದೇ ಹೊಲ್ಲ ಸರ್ವಜ್ಞ ॥

ಮಾತಾಡಿ ಅದರಂತೆ ನಡೆಯದಿದ್ದವ ನೀಚ, ಕೂಡಿಕೊಂಡಿದ್ದು ಮೋಸ ಮಾಡುವವ ಪಾಪಿ. ಕಾಡುವಂಥ ಬೀಗನು ಬಂದರೆ ಬಹಳ ಕಷ್ಟದಾಯಕವು, ಅದರಂತೆ ಸುಳ್ಳು ಹೇಳುವದಂತೂ ಅತ್ಯಂತ ಹೀನವಾದದ್ದು.

೭೮೭. ದಿಟವೆ ಪುಣ್ಯದ ಪುಂಜ । ಸಟೆಯೆ ಪಾಪದ ಬೀಜ ।
ಕುಟಿಲವಂಚನೆಗೆ ಪೋಗದಿರು, ನಿಜದಿಪಿಡಿ ।
ಘಟವನೆಚ್ಚರದಿ ಸರ್ವಜ್ಞ ॥

ಸತ್ಯ ಮಾತಾಡುವದೇ ಪುಣ್ಯದ ರಾಶಿಯನ್ನು ಕೂಡಿಸಿದಂತೆ. ಸುಳ್ಳು ನುಡಿ ಪಾಪವೃಕ್ಷಕ್ಕೆ ಬೀಜ ಬಿತ್ತಿದಂತೆ. ಕುಯುಕ್ತಿ, ಮೋಸಗಾರಿಕೆ ಮೊದಲಾದವುಗಳನ್ನಂತೂ ಮಾಡಬೇಕೂಡದು. ಸದಾಕಾಲ ಎಚ್ಚರದಿಂದಿದ್ದು ಸತ್ಯಕ್ಕಾಗಿ ಘಟಸರ್ಪವನ್ನು ಹಿಡಿದರೂ ಅಡ್ಡಿಯಿಲ್ಲ ಶ್ರೇಯಸ್ಸಂಟು.

೭೮೮. ಹುಸಿವಾತದೇಗುಲದ । ದೆಸೆಯತ್ತ ಮುಂತಾಗಿ ।
ನೊಸಲೆತ್ತಿ ಕರವಮುಗಿದಿಹರೆ ಅನಿತುದ್ದ ।
ಹುಸಿವನೆಂದರಿಗು ಸರ್ವಜ್ಞ ॥

ಸುಳ್ಳು ಮಾತಾಡುವಂಥವನು ದೇವಾಲಯ ಮೊದಲಾದವುಗಳ ಕಡೆಗೆ ಹೋದಾಗ ಮುಖವನ್ನು ಮೇಲಕ್ಕೆತ್ತಿ ಕರಜೋಡಿಸಿ ನಮಸ್ಕಾರ ಮಾಡಿದರೆ (ನೆಲದಿಂದ) ಅಷ್ಟು ಎತ್ತರದ ವರೆಗೆ ಒಟ್ಟುವಷ್ಟು ಸುಳ್ಳಿನ ಮಾತುಗಳನ್ನು (ದಿನಾಲು) ಆಡುತ್ತಾನೆಂದು ತಿಳಿಯಬೇಕು.

೬೮೬. ಕಷ್ಟಗಳು ಓಡಿಬರ | ಲಿಷ್ಟಕ್ಕೆ ಭಯವೇಕೆ ? |
ಶಿಷ್ಟಂಗೆ ತೊದಲು ನುಡಿಯೇಕೆ ? ಕಳ್ಳಂಗೆ |
ದಟ್ಟಡಿಯದೇಕೆ ? ಸರ್ವಜ್ಞ ||

ಬೇಕಾದಷ್ಟು ಕಷ್ಟಗಳು ಬರಲಿ ಅವುಗಳಿಗೆ ಅಂಜುವದೇಕೆ ? ಸತ್ಯ ನಡೆನುಡಿಗಳುಳ್ಳವರ ಬಾಯಿಯು (ಭಯದಿಂದ) ತೊದಲುವದೇ ? (ಇಲ್ಲ) ಅದರಂತೆ ಕಳ್ಳನು ಸಾವಕಾಶವಾಗಿ ನಡೆಯುವದೇ ಇಲ್ಲ. ಭಯದಿಂದ ಓಡುವನು.

೬೯೦. ಕೆಂಪಿನದಾಸಾಳ | ಕೆಂಪುಂಟು ಕಂಪಿಲ್ಲ |
ಕೆಂಪಿನವರಲ್ಲಿ ಗುಣವಿಲ್ಲ, ಕಳ್ಳ ತಾ |
ಕೆಂಪಿರ್ದಡೇನು ಸರ್ವಜ್ಞ ||

ದಾಸಾಳದ ಹೂವು ಕೆಂಪಗಿರುವದು ನಿಜ. ಆದರೆ ಅದಕ್ಕೆ ಸುವಾಸನೆಯೇ ಇರುವದಿಲ್ಲ. ಅದರಂತೆ ಹೊರಗಿನ ಸೌಂದರ್ಯವುಳ್ಳವರಿಗೆ ಅಂತರಂಗದಲ್ಲಿ ಗುಣವಿರುವದಿಲ್ಲ. ಕಳ್ಳನು ಸುಂದರನಾಗಿ ಕಂಡರೂ ಏನು ಪ್ರಯೋಜನ.

೬೯೧. ಕಾಡೆಲ್ಲ ಕಸುಗಾಯಿ | ನಾಡೆಲ್ಲ ಹೆಗ್ಗಿಡವು |
ಆಡಿದ ಮಾತು ನಿಜವಲ್ಲ, ಮಲೆನಾಡ |
ಕಾಡು ಸಾಕೆಂದು ಸರ್ವಜ್ಞ ||

ಅಡವಿಯಲ್ಲೆಲ್ಲ ನೋಡಿದರೂ ಹಣ್ಣಾಗದೇ ಇದ ಕಸು ಕಾಯಿಗಳಿಂದೊಡಗೂಡಿದ ಗಿಡಗಳೇ ಇವೆ. ಊರಲ್ಲೆಲ್ಲ ದೊಡ್ಡ ದೊಡ್ಡ ಮರಗಳಿವೆ. ಜನರು ಸದಾ ಸುಳ್ಳು ನುಡಿಯುತ್ತಿರುವರು. ಇಂಥ ಮಲೆನಾಡದಲ್ಲಿಯ ವಾಸವು ಸಾಕು. (ಬೇಡ)

೬೯೨. ಸೀತಧಾತುಗಳುಂಟು | ಬಾತಿಹವು ಕುಕ್ಷಿಗಳು |
ಪಾತಕರು ಪುಂಡಿ ತಿರಿದುಂಬ ನಾಡಿಗೆ |
ಏತಕ್ಕೆ ಬಹರು ಸರ್ವಜ್ಞ ||

ಸೀತವಾಗುವ ಆಹಾರ ಪದಾರ್ಥಗಳೇ ಸಿಗುವವು. ಇಲ್ಲಿಯ ಜನರು (ಕೈಕಾಲು ಸಣ್ಣ) ಹೊಟ್ಟೆ ಡುಮ್ಮರು, ಮರ (ಬಿದಿರಿನಿಂದ ಮಾಡಿದ ಸಪಾಟಾದ ಮೂರು ಮಗ್ಗಲಿಗೆ ದಂಡೆಯಿರುವ ಬುಟ್ಟಿ) ವನ್ನು ಹಿಡಿದು ಭಿಕ್ಷೆ ಬೇಡಿ ತಿನ್ನುವ ಪಾತಕಿಗಳು ಇಲ್ಲಿದ್ದರೆ ಇಂಥ ನಾಡಿಗೆ (ಮಲೆನಾಡಿಗೆ) ಬರುವದು ಸರ್ವಥಾ ಬೇಡ.

೬೯೩. ಅಲ್ಲವರಿಷಿಣವುಂಟು | ಬೆಲ್ಲ ಬಿಳಿ ಎಲೆಯುಂಟು |
ಒಳ್ಳೇ ಹಲಸುಂಟು ಮೆಲ್ಲಳ್ಳೆ ಮಲೆನಾಡ |
ವಲ್ಲೆನ್ನಬಹುದೇ ಸರ್ವಜ್ಞ ||

ಮಲೆನಾಡಿನಲ್ಲಿ ಖಾರಗೆಣಸು (ಅಲ್ಲಾ) ಆರಿಷಿಣ, (ಬೆಲ್ಲ ಅಂದರೆ) ಕಬ್ಬು, ವೀಳೆದೆಲಿಗಳ ಬೇಸಾಯುವನ್ನು ಮಾಡಬಹುದು. ಒಳ್ಳೇ ಹಲಸಿನಹಣ್ಣು ತಿನ್ನಲು ಬೇಕಾದಷ್ಟು ಸಿಗುವದು. ಇಂಥ ನಾಡನ್ನು ಒಲ್ಲೆನ್ನಬಹುದೇ ?

೬೯೪. ಕಿಚ್ಚುಂಟು ಕೆಸರುಂಟು | ಬೆಚ್ಚನ ಮನೆಯುಂಟು |
ಇಚ್ಛೆಗೆ ಬರುವ ಸತಿಯುಂಟು ಮಲೆನಾಡ |
ಮೆಚ್ಚಿ ನೋಡೆಂದ ಸರ್ವಜ್ಞ ||

ಇಲ್ಲಿ ಬೆಂಕಿಮಾಡಲು ಬೇಕಾದಷ್ಟು ಕಟ್ಟಿಗೆಗಳು ಸಿಗುವವು. ಮಳೆ ಬಹಳಾಗಿ ಕೆಸರೂ ಇರುವದು ಸಹಜ. ವಾಸಮಾಡಿಕೊಂಡಿರಲು ಮನೆಗಳು ಬೆಚ್ಚಗಾಗಿರುವವು. (ಸಂಸಾರದ ಇಚ್ಛೆಯಾದಾಗ) ಹತ್ತಿರ ಬರುವ ಸ್ವಭಾವದ ಸ್ತ್ರೀಯು (ಹೆಂಡತಿಯಾಗಿ) ಇರಬಲ್ಲಳು. ಆದ್ದರಿಂದ ಇಂಥ ಮಲೆನಾಡಿನಲ್ಲಿ ಒಮ್ಮೆ ಇದ್ದು ನೋಡಬೇಕು.

೬೯೫. ಬೆಲ್ಲಗೆಣಸುಗಳುಂಟು | ಅಲ್ಲಲ್ಲಿ ನೀರುಂಟು |
ನೆಲ್ಲೋಗರುಂಟು, ನೆಳಲುಂಟು ಕೆರೆಕುಂಟೆ |
ಎಲ್ಲೆಲ್ಲು ಉಂಟು ಸರ್ವಜ್ಞ ||

ಇಲ್ಲಿ ಬೆಲ್ಲ, ಗೆಣಸು ತಿನ್ನಲು ಬೇಕಾದಷ್ಟು ಸಿಗುವದು. ಅಲ್ಲಲ್ಲಿಗೆ ಕೊಳಗಳುಂಟು' ( ಬಿಸಿ ಬಿಸಿ ) ಅಕ್ಕಿಯ ಅನ್ನವು ಊಟಕ್ಕಿದೆ. (ದಟ್ಟ ಗಿಡಗಳಿಂದುಂಟಾದ) ನೆರಳು ಎಲ್ಲಕಡೆಗಿದೆ. ಕೆರೆಗಳು ಹೊಂಡಗಳು ಎಲ್ಲಿ ಬೇಕಾದಲ್ಲಿ ಉಂಟು. (ಈ ಮಲೆನಾಡು ಬಲು ಸೊಗಸು.)

೬೯೬. ತನ್ನ ಸಿರಿಯುನು ತಾನು | ಕನ್ನಡಿಯು ಕಾಂಬುದೇ ? |
ತನ್ನ ಸಿರಿಯರವು ಪಕ್ಕದಕೆ, ಕನ್ನಡವು |
ಕನ್ನಡಿಯು ತೆರಸು ಸರ್ವಜ್ಞ ||

ಕನ್ನಡಿಯು ತನ್ನ ಸೊಬಗು ಸೌಂದರ್ಯದ ಇಂಗಿತವನ್ನು ತಾನು ಬಲ್ಲದೇ ? ( ಅದನ್ನು ಹೆರವರು ನೋಡಿ ಆನಂದಿಸುವರು. ) ಅದರಂತೆ ಕನ್ನಡ ಭಾಷಾ ದೇವಿಯು ತನ್ನ ಸೌಂದರ್ಯ ಸೊಬಗು ರಸಲಾಲಿತ್ಯಗಳನ್ನು ತಾನು ಅರಿಯಳು. ( ಹೆರವರು ಅರಿದು ಸ್ವಾದಿಸಬೇಕು. )

೬೯೭. ನಾಲ್ಬೆರಳು ಹಸ್ತಿನಿಗೆ | ಮೂವೆರಳು ಚಿತ್ತಿನಿಗೆ |
ಇರ್ಬೆರಳು ಕುಚಮಧ್ಯ ಶಂಖಿನಿಗೆ, ಪದ್ಮಿನಿಗೆ |
ಒಳ್ಬೆರಳು ನೋಡ ಸರ್ವಜ್ಞ ||

(ದುಂಡಾಗಿಯೂ ಪುಷ್ಟವಾಗಿಯೂ ಇರುವ ಸ್ತನಗಳು ಸ್ತ್ರೀಗೆ ಅಖಂಡ ಸೌಂದರ್ಯವನ್ನೀಯುವವು.) ಇಂಥ ಸ್ತನದ್ವಯಗಳು ಪದ್ಮಿನಿ ಜಾತಿಯ ಸ್ತ್ರೀಗೆ ಒಂದೇ ಬೆರಳು ಅಂತರವಿಟ್ಟು ಪುಷ್ಟಿಗೊಂಡು ದುಂಡಾಗಿರುವವು. ಶಂಖಿನೀ ಜಾತಿ ಸ್ತ್ರೀಗೆ ಎರಡು ಬೆರಳು ಅಂತರವಿರುವದು. ಚಿತ್ತಿನೀ ಜಾತಿಯವಳಿಗೆ ಮೂರು ಬೆರಳು, ಹಸ್ತಿನಿಗೆ ಎರಡು ಸ್ತನಗಳ ನಡುವೆ ನಾಲ್ಕು ಬೆರಳು ಅಂತರವಿರುವದೆಂದು ಸರ್ವಜ್ಞನು ಹೇಳುತ್ತಾನೆ.

೬೯೮. ವೃತ್ತದ ಪೂರವಾರು | ಮತ್ತೆ ಬೇವಿನ ಗಂಧ |
ಹತ್ತಿದ ಕುಚವು ಮದವಾರಿ ಸಂಚಲೆಯು |
ಚಿತ್ತಿನಿಯು ನೋಡ ಸರ್ವಜ್ಞ ||

ಚಿತ್ತಿನೀ ಜಾತಿಯ ಸ್ತ್ರೀಯಳ ನಿತಂಬಗಳು ಪುಷ್ಟವಾಗಿ ಉಬ್ಬಿಕೊಂಡು ದುಂಡಾಗಿರುವವು. ಅವಳ ದೇಹವು ಬೇವಿನಂತೆ ಕಹಿಯಾಗಿ ನಾರುವದು. ಅವಳ ಸ್ತನಗಳು ಸಪಾಟಾಗಿ ಜೋತುಬಿದ್ದಿರುವವು. ಅವಳು ಪ್ರೇಮರಸ ಪೂರಿತಳಿದ್ದು ಕಾಮಿನಿಯಾಗಿರುವಳು. ಸದಾ ಹೊರಗಿನ ಅಲೆದಾಟಕ್ಕೆ ಮೆಚ್ಚಿಕೊಂಡಿರುವಂಥವಳಾಗಿದ್ದಾಳೆ.

೬೯೯. ಎತ್ತಲಾರದ ಕಾಯ | ಮಸ್ತಕವು ಮಧ್ಯವೂ |
ಮತ್ತೆ ಕಕ್ಕಸವು ಕೇಳುವರಿಗಾ ಪುರುಷ |
ಹಸ್ತಿನಿಗೆ ಮೇಳ ಸರ್ವಜ್ಞ ||

ಬಹಳ ಜಡವಾದ ದೇಹ ತಲೆಯುಳ್ಳವನೂ, ವಿಶಾಲ ಹೊಟ್ಟೆಯಿದ್ದು ಕಕ್ಕಸಬಡುವವನಂತೆ ಉಸಿರಾಡಿಸುವಂಥವನೂ ಆದ ಪುರುಷನು ಹಸ್ತಿನೀ ಜಾತಿ ಸ್ತ್ರೀಗೆ ಯೋಗ್ಯನು. (ಅವಳ ಪ್ರಕೃತಿಗೆ ಸರಿಹೊಂದುವ ಸಂಸಾರಿಗನು ಎಂದರ್ಥ.)

೨೦೦. ಅಕ್ಕಲಿಸಿದ ಹೊಟ್ಟೆ | ಬೆಕ್ಕುಗಣ್ಣಿನ ಮೋರೆ |
ಅಕ್ಕುಳಿಯು ತುಂಬ ಕಡುಕೋಪಿ ಪುರುಷನು |
ಚಿತ್ತಿನಿಗೆ ಮೇಳ ಸರ್ವಜ್ಞ ||

ಪಾತಾಳಕ್ಕೆ ಸೇರಿದಂಥ ಹೊಟ್ಟೆಯುಳ್ಳವನೂ, ಬೆಕ್ಕಿನಂಥ (ಕಣ್ಣು ಸಹಿತವಾಗಿ) ಮುಖವುಳ್ಳವನೂ, ಮಹ ಅಂಜುಬುರುಕನೂ ಆದರೆ ಬಹಳ ಸಿಟ್ಟಿನವನೂ ಆದ ಪುರುಷನು ಚಿತ್ತಿನೀ ಜಾತಿಯ ಸ್ತ್ರೀಗೆ ಸಮರಸನಾಗುವನು.

೨೦೧. ಇಂಬಾದ ದೇಹಕ್ಕೆ | ಮುಂಬೆಳಗು ಸಂಭ್ರಮಿಸಿ |
ತುಂಬಿನೇರಾದ ಮಧ್ಯದ ಪುರುಷನು |
ಶಂಖಿನಿಗೆ ಮೇಳ ಸರ್ವಜ್ಞ ||

ತಾರುಣ್ಯದಿಂದ ತುಂಬಿದವನಾಗಿ ಆ ಮಧ್ಯಮ ವಯಸ್ಸಿನ ಪುರುಷನು ಶಂಖಿನೀ ಜಾತಿಯ ಗಡುತರವಾಗಿರುವ ದೇಹಕ್ಕೂ ಒನಪು ವೈಯ್ಯಾರದಿಂದ ಕೂಡಿದವಳಿಗೂ ಯೋಗ್ಯನು.

೨೦೨. ಮದವೆದ್ದ ಮಂದದಜದಗಂದದಿರುತಿರ್ದು |
ವಿಧವಿಧದ ಪ್ರೌಢ ನುಡಿಗಳನು ನುಡಿವವನು |
ಪದ್ಮಿನಿಗೆ ಮೇಳ ಸರ್ವಜ್ಞ ||

ಕಾಮದಿಂದ ಮದವೇರಿದ ಆನೆಯಂತೆ ಸಂಭೋಗ ಕಾಲದಲ್ಲಿ ವ್ಯವಹರಿಸುವಂಥವನೂ, ಪಾಂಡಿತ್ಯದಿಂದಲೂ ಉತ್ತಮ ವಿಚಾರಗಳಿಂದಲೂ ಕೂಡಿದಂಥ ಮಾತುಗಳನ್ನಾಡುವವನೂ ಪದ್ಮಿನೀ ಜಾತಿಯ ಸ್ತ್ರೀಗೆ ಪ್ರಿಯನಾಗುವನು.

೨೦೩. ಹಲವು ಬಂಧನಕೂಟ | ಕಲೆಯು ಭೇದವನರಿದು |
ಸಲೆಯುದನು ಸವಿದು ಬಳಸಿದರೆ ಹಸ್ತಿನಿಯು |
ಒಲಿವಳಾ ಕ್ಷಣದಿ ಸರ್ವಜ್ಞ ||

ಕಾಮಕಲಾ ಶಾಸ್ತ್ರದಲ್ಲಿಯ ಅನೇಕ ಪ್ರಯೋಗ ಪ್ರಕಾರಗಳನ್ನು ಅರಿತುಕೊಂಡು ಅವುಗಳನ್ನು ರತಿಕ್ರೀಡೆಯಲ್ಲಿ ಉಪಯೋಗಿಸಿದರೆ ಹಸ್ತಿನೀ ಜಾತಿಯ ಸ್ತ್ರೀಯು ಆ ಪುರುಷನಿಗೆ ಒಮ್ಮೆಲೇ ಒಲಿದುಬಿಡುವಳು.

೨೦೪. ಹರಿಣಾಕ್ಷಿ ಚಿತ್ತಿನಿಯು ಕರುಣೇಂದ್ರಿಯಂಗಳರಿದು |
ಕರುಣ ರಸವೆಂಬ ಸದ್ಗುಣದಿ ನೆರೆದರೆ |
ಪುರಣತನ ಬಿಡಳು ಸರ್ವಜ್ಞ ||

ಚಿಗರಿ ಕಣ್ಗಳ ಚಲುವೆಯಾದ ಚಿತ್ತಿನೀ ಜಾತಿಯ ಸ್ತ್ರೀಯ ಮನದೊಲವನ್ನು ತಿಳಿದು ಅಂತಃಕರಣದಿಂದ ಮಧುರ ವಚನಗಳನ್ನೇ ಅವಳ ಕಿವಿಯಲ್ಲಿ ಸುರಿಯತೊಡಗಿದರೆ ಅವಳು ಸಾಯುವವರೆಗೆ ಅಂಥ ಪುರುಷನನ್ನು ಬಿಡಲಾರಳು.

೨೦೫. ನೋಟ ಬೇಟಗಳಲ್ಲಿ | ಪಾಟಿಸಿದ ದೈನ್ಯವೂ |
ಕೂಟದಲಿ ಕೋಪ ಕೊಸರಿಸುತ್ತ ಶಂಖಿನಿಯು |
ನಾಟಿಸದೇ ಬಿಡಳು ಸರ್ವಜ್ಞ ||

ಶಂಖಿನೀ ಜಾತಿಯ ಸ್ತ್ರೀಯು ಭೆಟ್ಟಿಯಾದಾಗ, ದೃಷ್ಟಿಬೀರಿದಾಗ, ಅತ್ಯಂತ ಕರುಣೆಯನ್ನು ತೋರಿಸುತ್ತಲೂ ಸಂಭೋಗದಲ್ಲಿದ್ದಾಗ ಕಪಟ ಕ್ರೋಧವನ್ನು ವ್ಯಕ್ತಪಡಿಸುತ್ತಲೂ ಇದ್ದು ಕೊನೆಗೂ ಪುರುಷನನ್ನು ಅಂಟಿಕೊಂಡೇ ಇರುವಳು.

೨೦೬. ಮುಂಗುರುಳು ಪಿಡಿದಾಡಿ | ಭಂಗಿಸುತ ಕವಿಕವಿದು |
ರಂಗು ತುಟಿಗಳು ಕಚ್ಚಿದರೆ ಪದ್ಮಿನಿಯು |
ಸಂಗವನು ಬಿಡಳು ಸರ್ವಜ್ಞ ||

ಲಜ್ಜಾಯುಕ್ತಳಾದ ಪದ್ಮಿನೀ ಜಾತಿಯ ಸ್ತ್ರೀಯನ್ನು ಸುತ್ತುಗಟ್ಟುವಂತೆ ಅಪ್ಪಿಕೊಳ್ಳುತ್ತಲೂ ಅವಳ ಮುಂಗುರುಳನ್ನು ತೀಡುತ್ತಲೂ ಅವಳ ಕೆಂಪು ತುಟಿಗಳಿಗೆ ಚುಂಬನವನ್ನೀಯುತ್ತಲೂ ಇರುವವನ ಸಹವಾಸವನ್ನು ಅವಳು ಎಂದೂ ಬಿಡುವದಿಲ್ಲ.

೨೦೭. ನಲ್ಲೆಯುನು ಒಲ್ಲೆಂಬ | ಸೊಲ್ಲು ನಾಲಿಗೆ ಹೊಲೆಯು |
ಬಲ್ಲಿದನು ಶ್ರವಣ ಸನ್ಯಾನಿ ಇವರುಗಳು |
ಎಲ್ಲಿ ಉದಿಸಿದರು ಸರ್ವಜ್ಞ ||

ಹೆಂಡತಿಯನ್ನು ಒಲ್ಲೆನೆಂದು ಮಾತಾಡುವ ನಾಲಿಗೆಯೇ ಪಾಪಿಯು ಇಂಥ ಮಾತಾಡುವವನೂ ಇದನ್ನರಿತ ಜೈನರು ಭೂಮಿಗೆ ಎಲ್ಲಿಂದ ಬಂದರು. (ಅವರು ಸಹ ಸ್ತ್ರೀ ಉದರದಿಂದ ಬರಲಿಲ್ಲವೇ ?)

೭೦೮. ಚಿಕ್ಕಂದಿನಲಿ ಹೆಣ್ಣು । ಹೆಕ್ಕಂಜಲಂತಿಹುದು ।
ಸೊಕ್ಕಿಜವ್ವನವು ನೆರೆದಿಹರೆ ಆ ಹೆಣ್ಣು ।
ಸಕ್ಕರೆಯು ತಾನೇ ಸರ್ವಜ್ಞ ॥

ಹೆಣ್ಣು ಹುಡಿಗೆಯು ಸಣ್ಣವಳಿರುವಾಗ ಎಂಜಲವನ್ನು ಹಚ್ಚಿ ಒಗೆದ ತಿನಿಸಿನಂತೆ (ಅಂದರೆ ಯಾರೂ ಅದನ್ನು ತೆಗೆದುಕೊಳ್ಳಲಿಚ್ಛಿಸದಂತೆ) ಇರುವಳು ಆದರೆ ಯೌವನವು ಬಂದು ಎಲ್ಲ ದೇಹವು ಪೂರ್ಣ ವೃದ್ಧಿಹೊಂದಿ ನಿಂತುಕೊಂಡಾಗ ಅದೇ ಹೆಣ್ಣು ಎಲ್ಲರಿಗೂ ಸಕ್ಕರೆಯಂತೆ ಪರಿಣಮಿಸುವದು.

೭೦೯. ನೋಡಿದರೆ ಎರಡೂರು । ಕೂಡಿದಾಮಧ್ಯದಲಿ ।
ಮೂಡಿ ಹಸ್ಮರನ ಮನೆಯಲ್ಲಿ ಜಗವು ಬಿ ।
ದ್ದಾಡುತ್ತಲಿಹುದು ಸರ್ವಜ್ಞ ॥

ಸ್ತ್ರೀಯ ಎರಡು ಮನೋಹರವಾದ ತೊಡೆಗಳ ಸಂದಿಯಲ್ಲಿ ಕಾಮದೇವರ ಮನೆಯು ಮೂಡಿರುವದು. ಅದರಲ್ಲಿ ಜಗತ್ತಿನಲ್ಲಿಯ ನಾ, ನೀ, ಎಂಬ ಸಕಲರೂ ಮೋಹಿತರಾಗಿ ಬಿದ್ದು ಸುಖಪಟ್ಟು ಉರುಳಾಡುತ್ತಿರುವರು.

೭೧೦. ಸಂದಿಯಂಗಾಯ ಜಗ । ವಂದ್ಯವಾಗೆಸೆದಿಹುದು ।
ನಂದಿವಾಹನನು, ಅಜ, ಹರಿಗಳಂತದನು ।
ಹೊಂದಿಕೊಂಡಿಹರು ಸರ್ವಜ್ಞ ॥

ಇಡೀ ವಿಶ್ವವು ಸ್ತ್ರೀ ಜನನೇಂದ್ರಿಯಕ್ಕೆ ಮರುಳಾಗಿ ಅದಕ್ಕೆ ಮೋಹಿತವಾಗಿರುವದು ಅದೇಕೆ ಹರಿ, ಹರ, ಬ್ರಹ್ಮರು ಕೂಡ ಅದಕ್ಕೆ ಸದಾಕಾಲ ಹೊಂದಿರುವರು. (ಉಳಿದವರ ಪಾಡೇನು)

೭೧೧. ಪುಲ್ಲೆಚರ್ಮವನುಟ್ಟು । ಜಲ್ಲುಬೆಳ್ಳಗೆ ಬಿಟ್ಟು ।
ಕಲ್ಲಮೇಲಿಪ್ಪ ತಪಸಿಯ ಮನಸೆಲ್ಲ ।
ನಲ್ಲೆಮೇಲಿಹುದು ಸರ್ವಜ್ಞ ॥

ಹುಲಿಯ ಚರ್ಮವನ್ನುಟ್ಟುಕೊಂಡು ಜಟಾಧಾರಿಯಾಗಿ ಕಲ್ಲಮೇಲೆ ಕುಳಿತು ತಪಸ್ಸು ಮಾಡಬೇಕೆನ್ನುವ ಋಷಿಯ ಮನಸ್ಸೆಲ್ಲ ಹೆಂಗಸಿನಕಡೆಗೆ ಹೋಗಿ ನೆಲೆಸಿರುವದು.

೭೧೨. ಯೋನಿಜರು ಯೋನಿಯನು | ಹೀನವಾಡುವದೇನು |
ಆನಂದಜನಕವು ಮೂಲ, ಶುಚಿಯಿರಲು |
ತಾನೊಲಿವುದೆಂದ ಸರ್ವಜ್ಞ ||

ಯೋನಿಯಲ್ಲಿಯೇ ಜನ್ಮ ತಾಳಿದಂಥವರು ಆ ಸ್ತ್ರೀ ಜನನೇಂದ್ರಿಯ ವನ್ನು ತುಚ್ಛವಾಗಿ ಕಾಣುವದೆಂದರೆ ತುಂಬಾ ಆಶ್ಚರ್ಯಕರವಾದುದು. ಲೌಕಿಕ ಸುಖದ ಮೂಲಸ್ಥಾನವದು. ಅದನ್ನು ಸ್ವಚ್ಛವಾಗಿಟ್ಟರಂತೂ ಅತ್ಯಂತ ಮೋಹಕವೂ ಆನಂದವನ್ನೀಯುವಂಥದೂ ಆಗುವದು.

೭೧೩. ಉರಿಯದಲೆ ಮರೆಯದಲೆ | ಶಿರನೆತ್ತಿ ನೋಡದಲೆ |
ಸರಿಬಂದ ಸ್ಥಾನದಿರುವವಳು ದೊರಕುವದು |
ಗುಣಕರಣವೆಂದ ಸರ್ವಜ್ಞ ||

ಉದ್ಧಟತನದಿಂದ ವರ್ತಿಸದೇ ಒನಪು ಒಯ್ಯಾರದಿಂದ ಮೆರೆದಾಡದೇ ಪಾಲಿಗೆ ಬಂದುದೇ ಪಂಚಾಮೃತವೆಂದು ತಿಳಿದು ಸಂಸಾರ ಮಾಡು ವಂಥ ಹೆಂಡತಿಯು ದೊರಕಬೇಕಾದರೆ ಕೇವಲ ಗುರುವಿನ ಕರುಣೆಯು ಬೇಕೇಬೇಕು.

೭೧೪. ಪರಪುರುಷನು ತನ್ನ | ಪರಮಪಿತನೆಂದರಿತು |
ಸ್ಥಿರಚಿತ್ತವುಳ್ಳ ಸುದತಿಯನು ಸನ್ನೆಯಲಿ |
ಕರೆಯುವವರಾರು ಸರ್ವಜ್ಞ ||

ಎಲ್ಲ ಪುರುಷರು ಕೇವಲ ತನಗೆ ತಂದೆಯ ಸಮಾನರು ಎಂದು ಭಾವಿಸುವಂಥ ನಾರೀಮಣಿಯನ್ನು ಸನ್ನೆ ಮಾಡಿ ಕರೆಯುವ ಧೈರ್ಯವಾರಿ ಗಾದೀತು ? (ಯಾರಿಗೂ ಆಗುವದಿಲ್ಲವೆಂದರ್ಥ.)

೭೧೫. ಮೊಸರು ಇಲ್ಲದ ಊಟ | ಕೆಸರು ಇಲ್ಲದ ಗದ್ದೆ |
ಬಸುರಾಗದವಳ ಬಾಳುವೆಯು ಬೇಸಿಗೆಯ |
ಬಿಸುಲು ಕಾದಂತೆ ಸರ್ವಜ್ಞ ||

ಮೊಸರು ಇಲ್ಲದ ಊಟವು ಸ್ವಾರಸ್ಯವಲ್ಲ. ಕೆಸರು ಇಲ್ಲದ ಗದ್ದೆಯಲ್ಲಿ ಬತ್ತ, ಕಬ್ಬು ಮೊದಲಾದವುಗಳು ಬೆಳೆಯುವದಿಲ್ಲವಾದ್ದರಿಂದ ಅದು ವ್ಯರ್ಥ. ಬಂಜೆಯೊಡನೆಯ ಸಂಸಾರವು ನಿಸ್ಸಾರವು. ಇವೆಲ್ಲವುಗಳೂ ಬೇಸಿಗೆಯ ಬಿಸಿಲನ್ನು ಉಂಡಂತೆ ತಾಪದಾಯಕಗಳು.

೨೧೬. ದೇಶವಿಲ್ಲದ ದೊರೆಯು | ಕೋಶವಿಲ್ಲದ ಹರದ |
ಕೂಸುಳಿಯದವಳ ಬಾಳುವೆಯು ಬೂದಿಯನು |
ಪೂಸಿಕೊಂಡಂತೆ ಸರ್ವಜ್ಞ ||

ಅರಸು ನಿಜ; ಆದರೆ ಅವನಿಗೆ ರಾಜ್ಯವೇ ಇಲ್ಲ. ಧನವಿಲ್ಲದೇ ಬರಿಗೈಯಿಂದ ಮಾಡುವ ವ್ಯಾಪಾರ, ಹುಟ್ಟಿದ ಮಕ್ಕಳಿಲ್ಲ ಸಾಯುವಂಥ ಸ್ತ್ರೀಯೊಡನೆ ಸಂಸಾರ ಇವುಗಳು ಮೈಗೆಲ್ಲ ಬೂದಿ ಬಡಕೊಂಡು ಓಡಾಡಿದಂತೆ.

೨೧೭. ಅಂದವಿಲ್ಲದದುಸ್ತು | ಹಂದರಿಲ್ಲದ ಮದುವೆ |
ಕಂಡನಿಲ್ಲದಳ ಮನೆವಾರ್ತೆ ಇವು ಮೂರು |
ಕುಂದು ಕಾಣಯ್ಯ ಸರ್ವಜ್ಞ ||

ಸೊಗಸಾಗದಿರುವ ಪೋಷಾಕು, ಹಂದರವನ್ನೇ ಹಾಕದೇ ಮಾಡುವ ಲಗ್ನ; ಮಕ್ಕಳನ್ನು ಹಡೆಯಲಾರದವಳೊಡನೆ (ಬಂಜೆಯೊಡನೆ) ಹೂಡಿದ ಸಂಸಾರ ಇವು ಮೂರು ದೊಡ್ಡ ಕೊರತೆಗಳು ಜೀವನಕ್ಕೆ,

೨೧೮. ಉತ್ತಮದ ಅಂಗಸಿಗೆ | ಬತ್ತಿ ಕಾವಲವೇಕೆ ? |
ಚಿತ್ತದಲಿ ಚಲುವತಾನಾದ ಬಳಿಕಿನ್ನು |
ಮತ್ತೆ ಮುಸುಕೇಕೆ ? ಸರ್ವಜ್ಞ ||

ಸದ್ಗುಣ ಸಂಪನ್ನೆಯಾದ ಪತಿವ್ರತಾ ಹೆಂಗಸಿದ್ದವಳಿಗೆ ಸುತ್ತಲೂ ಬಿಗಿಯಾದ ಕಾವಲು ಕಾರಣವಿಲ್ಲ. ಆದರಂತೆ ಮನಸ್ಸಿನಲ್ಲಿಯೇ ಸೊಬಗನ್ನು ಕಂಡು ತೃಪ್ತಳಾದವಳಿಗೆ (ಮುಸುಕು) ಪರ್ದಾ ಹಾಕಿಕೊಂಡು ಓಡುವದವಶ್ಯವಿಲ್ಲ,

೨೧೯. ಸತ್ತಿಗೆಯ ಹಿಡಿದವಗೆ | ಒತ್ತಿ ಗಾಳಿಯು ಹೊಲ್ಲ |
ನೆತ್ತಿಯಲಿ ಹೊರೆಯು ತರವಲ್ಲ | ಪತಿವ್ರತೆಗೆ |
ಸುತ್ತು ಮರೆಹೊಲ್ಲ ಸರ್ವಜ್ಞ ||

ಕೊಡೆಯನ್ನು ಹಿಡಿದುಕೊಂಡು ಹೋಗುವಾಗವಾಗಲೀ ತಲೆಯ ಮೇಲೆ ಹೊರೆಯನ್ನು ಹೊತ್ತುಕೊಂಡು ಹೋಗುವಾಗವಾಗಲೀ ಬಿರುಗಾಳಿ ಬೀಸತೊಡಗಿದರೆ ಅದು ತ್ರಾಸಪಾಯಕವು. ಆದರಂತೆ ಪತಿವ್ರತಾ ಸ್ತ್ರೀಗೆ ಸುತ್ತಲೂ ಮರೆಮಾಡಿ ಕಾಯುವದು ವ್ಯರ್ಥವು.

೭೨೦. ಚಿತ್ತ ಚಂಚಲ ಹೊಲ್ಲ | ವಿತ್ತಯೋಗಿಗೆ ಹೊಲ್ಲ |
ತೊತ್ತಿನ ಮಾತು ನಿಜವಲ್ಲ | ಸತಿಯರಿಗೆ |
ಒತ್ತಾಯ ಹೊಲ್ಲ ಸರ್ವಜ್ಞ ||

ಮನುಷ್ಯನಿಗೆ ಚಂಚಲ ಮನಸ್ಸಿದ್ದರೆ ಮುಂದಾಗಲಾರನು ಯೋಗಿಯ ಹತ್ತಿರ ಧನವಿದ್ದರೆ ಅವನು ಪತನಹೊಂದುವನು. ದಾಸಿ (ಒಕ್ಕಲಗಿತ್ತಿ)ಯ ಮಾತು ಎಂದೂ ನಿಜವೆಂದು ನಂಬಬಾರದು. ಮತ್ತು ಧರ್ಮಪತ್ನಿಗೆ ಯಾವ ವಿಷಯಗಳಲ್ಲಿಯೂ ಒತ್ತಾಯ (ಜುಲುಮೆ) ಮಾಡಬಾರದು.

೭೨೧. ಎಣ್ಣೆ ಇಲ್ಲದ ಮೀಹ | ಸುಣ್ಣವಿಲ್ಲದ ವೀಳೆ |
ಕಣ್ಣಿಲ್ಲದವಳ ಮನೆವಾರ್ತೆ | ಮಳಲೊಳಗೆ |
ಎಣ್ಣೆ ಹೊಯ್ದಂತೆ ಸರ್ವಜ್ಞ ||

ಎಣ್ಣೆಯನ್ನು ದೇಹಕ್ಕೆ ಹಚ್ಚಿಕೊಳ್ಳದೇ ಸ್ನಾನ ಮಾಡುವದು, ಸುಣ್ಣ ಬಳಿಯದೇ ವೀಳ್ಯವನ್ನು ಮೆಲ್ಲುವದು, ಕುರುಡಿಯೊಡನೆ ಸಂಸಾರ ಹೂಡುವದೂ ಮೊದಲಾದವುಗಳು ಉಸುಕಿನಲ್ಲಿ ಎಣ್ಣೆ ಸುರುವಿದಂತೆ ನಿರರ್ಥಕವಾದದ್ದು.

೭೨೨. ಅರಸರಿಲ್ಲದ ಮನೆಯು | ಮೀಸೆಯಿಲ್ಲದ ಮೋರೆ |
ಬೇಸರಾದವಳ ಮನೆವಾರ್ತೆ | ಹಣಹೋದ |
ವೇಶಿಯಂತಕ್ಕು ಸರ್ವಜ್ಞ ||

ಆಧಾರಗಳಿಲ್ಲದೇ ನಿಂತ ಮನೆಯು, ಮೀಸೆ ಬೆಳೆಯದೇ ಇದ್ದ (ಗಂಡಸು) ಮೋರೆಯು, ಗಂಡನನ್ನು ತಿರಸ್ಕರಿಸುವಂಥವಳೊಡನೆ (ಅಥವಾ ಸಂಸಾರಕೂಟವೇ ಬೇಡಾದವಳೊಡನೆ) ಹೂಡಿದ ಸಂಸಾರವು ಎಲ್ಲ ಧನವನ್ನು ಕಳೆದುಕೊಂಡಂಥ ಭಿಕಾರಿಯಾದ ಸೂಳೆಯಂತೆ.

೭೨೩. ದೋಸೆಯಿಲ್ಲದ ಊಟ | ಕಾಸು ಇಲ್ಲದ ಬಾಳ್ವೆ |
ಆಸರುಳ್ಳವಳ ಮನೆವಾರ್ತೆ | ತಾಯ್ ಸತ್ತ |
ಕೂಸಿನಂತಕ್ಕು ಸರ್ವಜ್ಞ ||

ದೋಸೆಯಿಲ್ಲದಿದ್ದರೆ ಊಟವು (ಕರ್ನಾಟಕದ ಕೆಲವು ಭಾಗದಲ್ಲಿ) ಸ್ವಾರಸ್ಯವೇ ಎನಿಸದು. ಮತ್ತು ದುಡ್ಡಿಲ್ಲದ ಸಂಸಾರ (ನಿಸ್ಸಾರ ಮತ್ತು ದುಃಖದಾಯಕ) ತೌರ ಮನೆಯ ಬೆಂಬಲವುಳ್ಳ ಹೆಂಗಸಿಗೆ (ಏಕೆಂದರೆ ತಂದೆ ತಾಯಿ ಅಣ್ಣ-ತಮ್ಮಂದಿರ ಬೆಂಬಲದಿಂದ ಸೊಕ್ಕಿ ಪತಿಯನ್ನು ತಿರಸ್ಕಾರ ದಿಂದಲೇ ಅವಳು ನೋಡುತ್ತಾಳೆ) ನೊಡನೆ ಸಂಸಾರ ಮಾಡುವವನು ತಾಯಿ ಸತ್ತ ಮಗುವಿನಂತೆ ಅನಾಥನೇ ಸರಿ.

೭೨೪. ಹರಿಕೆಯಿಲ್ಲದ ದಾನ | ನೆರಿಕೆಯಿಲ್ಲದ ಮನೆಯು |
ಅರಿಕೆಇಲ್ಲದವಳ ಮನೆವಾರ್ತೆ | ಅನ್ನದ |
ಕರಕು ಸವಿದಂತೆ ಸರ್ವಜ್ಞ ||

ಯಾವ ಆಶೀರ್ವಾದವೂ ಸಿಗದೇ ಇರುವಲ್ಲಿ ಮಾಡುವ ದಾನವು, ನೆರೆಹೊರೆಯವರಿಲ್ಲದ ಮನೆಯು ವಾಸವು (ಗಂಡನಲ್ಲಿ) ಆದರವೇ ಇಲ್ಲದವ ಳೊಡನೆ ಮಾಡುವ ಸಂಸಾರವೂ ಇವೇ ಮೊದಲಾದವುಗಳು ಹೊತ್ತಿ ಕರಕಾದ ಅನ್ನವನ್ನು ಉಂಡಂತೆ ಕಷ್ಟದಾಯಕವು.

೭೨೫. ಅರುಪಲರಿಯದ ದೊರೆಯು | ಕುರುಪನಿಲ್ಲದ ಕುದುರೆ |
ತಿರುಗಿ ಆಡುವಳ ಒಡನಾಟ ಇಟ್ಟೆಯಲಿ |
ಇರಿದುಕೊಂಡಂತೆ ಸರ್ವಜ್ಞ ||

ತಿಳುವಳಿಕೆಯಿಲ್ಲದ ಅರಸನ ಕಾರಭಾರವು, ಸನ್ನೆ ಸಾಂಜ್ಞೆ ಮೊದ ಲಾದವುಗಳನ್ನರಿಯದ ಕುದುರೆಯ ಮೇಲಿನ ಸವಾರಿಯು, ತಿರುತಿರುಗಿ ಉತ್ತರ ಕೊಡುವಂಥ ಹೆಂಡತಿಯೊಡನೆ ಹೂಡಿದ ಸಂಸಾರವು ಹೊಟ್ಟೆಯಲ್ಲಿ (ಬರ್ಚಿಯನ್ನು) ಇರಿದುಕೊಂಡಂತೆ ದುಃಖದಾಯಕವು.

೭೨೬. ಕುದುರೆಯಿಲ್ಲದ ಅರಸು । ಮಧುರವಿಲ್ಲದ ಊಟ ।
ಚದುರೆಇಲ್ಲದವಳ ಮನೆವಾರ್ತೆ । ಮುದಿಗೂರ ।
ತೊದರಿ ಸತ್ತಂತೆ ಸರ್ವಜ್ಞ ॥

ಕುದುರೆಗಳೇ ಇಲ್ಲದ ಅರಸನು (ಅಯೋಗ್ಯನು) ರುಚಿಯಿಲ್ಲದ ಊಟ (ಅಥವಾ ಮಧುರವಾದ ಮಾತಿನಿಂದ ಕೂಡಿದ ಆದರಿಲ್ಲದ ಊಟ) ಚತುರಳಿಲ್ಲದ ದಡ್ಡ ಹೆಂಡತಿಯೊಡನೆ ಇದ್ದ ಸಂಸಾರವು ಮುಪ್ಪಿನ ಮುದುಕನು· ಗೂರು ಹಿಡಿದು ಒದರಿಕೊಳ್ಳುತ್ತ ಸತ್ತಂತೆ (ಅಂದರೆ ಅವನ ಕೂಗನ್ನು ಯಾರೂ ಲಕ್ಷಿಸುವದಿಲ್ಲ.)

೭೨೭. ಬಂದು ಬಾಗದಬಿಲ್ಲು । ಹೊಂದಿಹೋಗದ ಬಂಟ ।
ತಂದುದನು ಅರಿದು ಬಳಸದ ಅಂಗನೆಯು ।
ಕೊಂದಳೆಂದರಿಗು ಸರ್ವಜ್ಞ ॥

ಮೀಟದಂತೆ ಬಾಗದೇ ಇದ್ದ ಬಿಲ್ಲು (ಇದನ್ನು ಹಿಡಿದವನು ಎದುರಾಳಿ ಯಿಂದ ಹೊಡಸಿಕೊಂಡು ಸಾಯುವನು.) ಪ್ರಸಂಗವನ್ನರಿತು ಸಾಗದೇ ಇದ್ದ ವೀರ (ಇವನದೂ ಅದೇ ಸ್ಥಿತಿ) ಪತಿಯು ಏನು ತಂದುಹಾಕುತ್ತಾನೋ ಅದರಲ್ಲಿಯೇ ಜಾಣತನದಿಂದ ಸಂಸಾರ ಮಾಡದಿದ್ದ ಸತಿಯಿದ್ದರೆ ಅಂಥ ಪತಿಯು (ಇದ್ದರೂ) ಸತ್ತಂತೆಯೇ ಸರಿ.

೭೨೮. ಕಾಸು ಇಲ್ಲದ ಬಾಳು । ಭಾಷೆಯರಿಯದ ಆಳು ।
ಹೇಸಿಯಾದವಳ ಮನೆವಾರ್ತೆ । ಕತ್ತೆಯು ।
ಹೂಸಿನಂತಕ್ಕು ಸರ್ವಜ್ಞ ॥

ರೊಕ್ಕವಿಲ್ಲದ ದರಿದ್ರನ ಸಂಸಾರವು, ತಮ್ಮ ಭಾಷೆಯೇ ತಿಳಿಯದಂಥ ಆಳನ್ನು ಇಟ್ಟುಕೊಳ್ಳುವದು ಮತ್ತು ಹೊಲಸು ಸ್ವಪಚಳಾಗಿದ್ದವಳೊಡನೆ ಸಂಸಾರ ಸಾಗಿಸುವದೇ ಮೊದಲಾದವುಗಳು ಕತ್ತೆಯ ಹೂಸನ್ನು ಮೂಸಿ ದಂತೆ.

೭೨೯. ಬಚ್ಚಲಿಲ್ಲದ ಮನೆಯು | ಕೆಚ್ಚಲಿಲ್ಲದ ಪಶುವು |
ನೆಚ್ಚಿಗಿಲ್ಲದಳ ಮನೆವಾರ್ತೆ | ಶ್ರಾವಣದ |
ಕಿಚ್ಚು ಕಾದಂತೆ ಸರ್ವಜ್ಞ ||

ಮನೆಗೆ ಬಚ್ಚಲವೇ ಇಲ್ಲದಿದ್ದರೆ ವ್ಯರ್ಥ. ಅದರಂತೆ ಎಮ್ಮೆ ಆಕಳಿಗೆ ಕೆಚ್ಚಲವಿಲ್ಲದಿದ್ದರೆ ನಿರುಪಯೋಗ. ವಿಶ್ವಾಸವಿಲ್ಲದವ (ನೀತಿಯ ಬಗ್ಗೆ) ಳೊಡನೆ ಸಂಸಾರ ಸಾಗಿಸುವದೆಂದರೆ ಶ್ರಾವಣ ಮಾಸದಲ್ಲಿ ಬೆಂಕಿಯನ್ನು ಜಾಗ್ರತವಿಡಲು ಕಾಯುತ್ತಿದ್ದಂತೆ ಬಹಳ ಕಷ್ಟದಾಯಕವು.

೭೩೦. ಅಲ್ಲವಿಲ್ಲದ ಊಟ | ನಲ್ಲಳಿಲ್ಲದ ನಿದ್ರೆ |
ಹಲ್ಲಿಲ್ಲದವಳ ರತಿಕೂಟ | ಸಮರದಲಿ |
ಬಿಲ್ಲು ಮುರಿದಂತೆ ಸರ್ವಜ್ಞ ||

ಖಾರಗೆಣಸು ಹಾಕದೇ ಅಡಿಗೆ ಮಾಡಿದ್ದನ್ನು ಉಣ್ಣುವದೂ ಮಗ್ಗಲಲ್ಲಿ ಹೆಂಡತಿಯಿಲ್ಲದೇ ನಿದ್ರೆಹೋಗುವದೂ. ಬಾಯಲ್ಲಿ ಹಲ್ಲಿಲ್ಲದವ (ಮುದುಕಿಯೊ)ಳೊಡನೆ ರತಿಕ್ರೀಡೆಯನ್ನಾಡುವದೂ ಸಂಗ್ರಾಮದಲ್ಲಿ ಬಿಲ್ಲು ಮುರಿದಂತೆ ನಿರಾಶಾಮಯವೇ (ದುಃಖದಾಯಕವೇ) ಸರಿ.

೭೩೧. ವ್ಯಸನದ ದೆಸೆಯಿಂದ | ಮುಸಿಹೆಣ್ಣಿನೊಶವಾಗಿ |
ಹುಸಿದು ಹೋಗುವವಳ ಒಡನಾಡಿ, ತಾನುಗ್ಗು |
ನುಸಿಯಾದ ಕಾಣೋ ಸರ್ವಜ್ಞ ||

(ಕಾಮಲಾಲಸೆಯ) ಚಟವನ್ನು ತೀರಿಸಿಕೊಳ್ಳುವದಕ್ಕಾಗಿ ಹೊಲಸು (ಸ್ವಪಚಳಾದ) ಹೆಣ್ಣನ್ನು ಕೂಡಿಕೊಂಡು ಇರಲಾಗಿ ಅವಳು ಇಂಥವನಿಗೆ ಸುಳ್ಳಾಡಿ ಓಡಿಹೋದರೆ ಇವನು ನುಗ್ಗುನುಸಿಯಾಗಿ (ಯಾತಕ್ಕೂ ಬಾರದವನಾಗಿ) ದುಃಖಿಪಡುವನು.

೭೩೨. ತುಯ್ಯಲಿಲ್ಲದ ತೋಟ | ತುಯ್ಯಲಿಲ್ಲದ ಊಟ |
ಕೈಯಲ್ಲಿಲ್ಲದನ ಬರಿನೋಟ | ಕೋಲಿರದೆ |
ಹುಯ್ಯಲ್ಕೈದಂತೆ ಸರ್ವಜ್ಞ ||

ನೆಲಕ್ಕೆ ಹಸಿ ಇಲ್ಲದ ಅಂದರೆ ನೀರಿನ ಪೂರೈಕೆಯಿಲ್ಲದ ತೋಟವು (ಹಾಳು ಬೀಳುವದು) ತುಪ್ಪ ಅಥವಾ ಪಾಯಸವಿಲ್ಲದ ಊಟವು ನಿರರ್ಥಕವು, ಕೈಯಲ್ಲಿ ಧನವಿಲ್ಲದೆ (ಅಥವಾ ಪೌರುಷವಿಲ್ಲದೆ) ಕೇವಲ ದೂರದಿಂದ ಸ್ತ್ರೀಯನ್ನು ನೋಡುವದು ಕೋಲಿಲ್ಲದೇ ಹೊಡೆಯಲು ಕೈ ಬೀಸಿದಂತೆ.

೭೩೩. ಚೌಟು ಇಲ್ಲದ ಪುರುಷ । ಕೋಟೆ ಇಲ್ಲದ ಅರಸು ।
ಕೂಟವಿಲ್ಲದ ಜಾರನು ಬಿಲ್ಬಿಡಿದು ।
ನೋಟನೆಚ್ಚಂತ ಸರ್ವಜ್ಞ ॥

ವಾಸಿಸಲು ಮನೆಯಿಲ್ಲದ ಪುರುಷನು, ಕೋಟೆಕೊತ್ತಳಗಳಿಲ್ಲದ ರಾಜನು, ಸೂಳೆಯರ ಸಂಗವಿಲ್ಲದ ಜಾರನು ಮೊಂಡ ಕೈಗಳಿದ್ದವನಲ್ಲಿಯ ಬಿಲ್ಲು ಬಾಣಗಳಂತೆ ನಿರರ್ಥಕವಾದವುಗಳು.

೭೩೪. ನೋಟಬೇಟವು ತನಗೆ । ನಾಟಿಸಿದ ಬಳಿಕೆಲ್ಲಿ ? ।
ಸಾಟಿಯೇ ಕಾಮನ ಸುಲಿಗೆಗೆ ? ಬಲುಮೆಗೆ ।
ನೋಟವೇ ಮುಖ್ಯ ಸರ್ವಜ್ಞ ॥

(ಗಂಡು ಹೆಣ್ಣನ್ನು) ಭೆಟ್ಟಿಯಾಗಿ ಪರಸ್ಪರರ ನೋಟವು ಒಂದಾದ ಬಳಿಕ ಕೇಳುವದೇನು ? ಕಾಮನು ತನ್ನ ಬಾಣಗಳನ್ನು ಎಸೆದನೆಂದು ಹೇಳಬೇಕೆ ? ಪ್ರಣಯಕ್ಕೆ ಪರಸ್ಪರರ ನೋಟವೇ ಮುಖ್ಯ.

೭೩೫. ಆರಿಗಾದರು ಸತಿಯು । ಮೀರಿ ಚಲುವಾಗಿರಲು ।
ಆರರಿಯರೆಂದು ಸಾರಿದರೆ ಕಣ್ಣೊಳಗೆ ।
ಕಾರವಿಟ್ಟಂತೆ ಸರ್ವಜ್ಞ ॥

ಯಾರೇ ಇರಲೊಲ್ಲರೇಕೆ, ಅಂಥವರಿಗೆ ಅತ್ಯಂತ ಚಲುವೆಯಾದ ಹೆಂಡತಿಯಿದ್ದು (ಅದು ಪರರಿಗೆ ಗೊತ್ತಿಲ್ಲವೆಂದು) ತಾತ್ಸಾರದಿಂದ ಇದ್ದರೆ ಅಕಸ್ಮಾತ್ತಾಗಿ ಕಣ್ಣಲ್ಲಿ ಖಾರದ ಪುಡಿ ಬಿದ್ದಂತೆ (ಅಂದರೆ ಮೋಸ ಮಾಡಿ ಪರರು ಎತ್ತಿಕೊಂಡು ಹೋಗುವರು. ಅಥವಾ ಹೆಂಡತಿಯು ಪರಾಧೀನವಾದದ್ದು ಕೇಳಿ ಕಣ್ಣಲ್ಲಿ ಖಾರ ಬಿದ್ದಷ್ಟು ಸಂಕಟವಾಗುವದು.)

೭೩೬. ಒಂದುಹೆತ್ತಾಕೆಯನು । ಹೊಂದಲೊಂದರೆ ಲೇಸು ।
ಸಂದುಸಲೆ ಹತ್ತು ಹೆತ್ತವಳ ಕೂಟದಿಂ ।
ಬಂಧನವೇ ಲೇಸು ಸರ್ವಜ್ಞ ॥

ಒಂದು ಪಡೆದ ಹೆಣ್ಣಿನೊಂದಿಗೆ ಸಂಸಾರ ಮಾಡುವದೆಂದರೆ ತುಸು ಸುಖವೆನಿಸೀತು. ಆದರೆ ಸತತವಾಗಿ ಹತ್ತು ಹಡೆದವಳೊಡನೆ ರತಿಕ್ರೀಡೆ ಯಾಡುವದಕ್ಕಿಂತ ತುರಂಗ ವಾಸವು ಹೆಚ್ಚು ಸುಖಕರವಾದೀತು.

೭೩೭. ರಸವರತಂದುಟಗಳ | ಹಸುವೆಮೆಯಲೊಲ್ಲದು |
ರಸಗೆಟ್ಟುಹೋದ ವನಿತೆಯ ಹೋಹಾತ |
ಪಶುವಿನಿಂದತ್ತ ಸರ್ವಜ್ಞ ||

ರಸಹೀನವಾದ (ರುಚಿ ಮತ್ತು ಸತ್ವವಿಲ್ಲದ ದಂಟನ್ನು ಆಕಳು ಮೊದಲಾದ ಪಶುಗಳು ಸಹ ಮುಟ್ಟುವದಿಲ್ಲ. ಅಂದಬಳಿಕ (ರಸಗೆಟ್ಟ) ರೋಗಿಷ್ಟ ಅಥವಾ ವಯಸ್ಸಾದ ಹೆಣ್ಣಿನೊಡನೆ ಕಾಮ ಸುಖ ಬಯಸಲು ಹೋಗುವಂಥವನು ಪಶುವಿನಕಿಂತಲೂ ಕೀಳು.

೭೩೮. ಚೊಕ್ಕದವಳಿರೆ ನೋಟ | ಸಕ್ಕರೆಯ ಸವಿದಂತೆ |
ಚೊಕ್ಕವಿಲ್ಲದಳ ಬಿರಿನೋಟ ಹುಡಿಮಣ್ಣು |
ಮುಕ್ಕಿದಂತಿಹುದು ಸರ್ವಜ್ಞ ||

ಸ್ವಚ್ಛವಾಗಿಯೂ ಸುಂದರವಾಗಿಯೂ ಇದ್ದಂಥವಳ ಕ್ಷಣದ ಓರೆ ನೋಟವು ಪುರುಷನಿಗೆ ಸಕ್ಕರೆ ತಿಂದಷ್ಟು ಸಂತೋಷವಾಗುವದು. ಮಲಿನಳೂ ಕುರೂಪಿಯೂ ಆದವಳು ಬಿರಿಬಿರಿ ನೋಡಿದರೂ ಸಹ ಗಂಡಸಿಗೆ ಸೂಸುಮಣ್ಣನ್ನು ಮುಕ್ಕಿದಂತೆ ದುಃಖವಾಗುವದು.

೭೩೯. ಮುದಿನಾಯಿ ಮೊಲವಕಂ | ಡದು ಬೆನ್ನುಹತ್ತಿದೋಲ್ |
ಮುದುಕ ಜವ್ವನೆಯನೊಡಗೂಡೆ ಮುದಿಗೂಬೆ |
ಯೊದರಿಕೊಂಡಂತೆ ಸರ್ವಜ್ಞ ||

ಮುದಿನಾಯಿಯು ಮೊಲವನ್ನು ಕಂಡು ಬೆನ್ನಟ್ಟಿದಂತೆ; (ಅಂದರೆ ನಾಯಿಯು ಶಕ್ತಿರಹಿತವಾಗಿದ್ದುದರಿಂದ ಮೊಲ ಸಿಗದೇ ನಾಯಿಗೆ ವ್ಯರ್ಥ ಶ್ರಮವಾಗಿ ಬಿದ್ದುಬಿಡುವದು.) ಅದರಂತೆ ತಾರುಣ್ಯದಲ್ಲಿದ್ದ ಹೆಂಗಸನ್ನು ತೃಪ್ತಿಪಡಿಸಲು ಹಾತೊರೆಯುತ್ತಿರುವ ಮುದುಕನು ಮುದಿಗೂಬೆಯು ಒದರಿಕೊಂಡು ಸತ್ತಂತೆಯೇ ಸರಿ.

೭೪೦. ಗುದ್ದುಗಣ್ಣದವಗೆ | ಮುದ್ದು ಹೆಂಗಸು ಏಕೆ ?
ಗದ್ದೆಯ ಹಸರು ಮೆಲಹೋಗಿ ಕೋಣನು |
ಬಿದ್ದು ಸತ್ತಂತೆ ಸರ್ವಜ್ಞ ||

ಹಣ್ಣು ಹಣ್ಣಾದ ಮುದುಕನಿಗೆ ತಾರುಣ್ಯದಲ್ಲಿದ್ದ ಹೆಣ್ಣಿನ ಹಂಬಲವೇಕೆ ? ಗದ್ದೆಯಲ್ಲಿಯ ಹಸಿರು ಹುಲ್ಲನ್ನು ಬಯಸಿ ಕೋಣವು ಅಲ್ಲಿ ಸಾಗಿದರೆ ಕೆಸರಿನಲ್ಲಿ ಸಿಕ್ಕು ಸಾಯುವಂತೆ ಮುದುಕನ ಸ್ಥಿತಿ ಆಗುವದು.

೭೪೧. ಬೀಸುವ ನೆವದಿಂದ | ವೇಶವನು ತಾಳುವಳು |
ಮಾಸಿಹೆನೆಂದು ಉಡುತಿಹಳು ಹಾದರದ |
ರಾಶಿಕಾಣಯ್ಯ ಸರ್ವಜ್ಞ ||

(ಕಾಳು) ಬೀಸುವೆನೆಂಬ ನೆವವನ್ನು ಹೂಡಿ ಅರಿವೆ ಬದಲಾಯಿಸಿ ಬೇರೆ ವೇಷವನ್ನು ತಾಳುವಳು. ಕೂಡಲೇ ಅರಿವೆಗಳು ಹೊಲಸಾದವೆಂದು ಅದನ್ನು ಬಿಟ್ಟು ಬೇರೆ ಶೀರೆಯನ್ನು ಉಡುವಳು. (ಹೀಗೆ ಕಾರಣವಿಲ್ಲದೇ ಶೀರೆ ಬದಲಾಯಿಸುವವಳು ಹಾದರಗಿತ್ತಿಯೆಂದು ತಿಳಿಯಬೇಕು.)

೭೪೨. ಬೀಸಿ, ಕುಟ್ಟಿ, ತನಗಾ | ಯಾಸವಾಗಿದೆಯೆಂದು |
ಹಾಸಿಗೆಯ ಹಾಕಿ ಮಲಗುವಳು ಹಾದರಕೆ |
ದಾಸಿ ಕಾಣಯ್ಯ ಸರ್ವಜ್ಞ ||

ಬೀಸಿ, (ಕಾಳುಕಡಿಗಳನ್ನು) ಕುಟ್ಟಿ ತನಗೆ (ಹಾಗೆ ಮಾಡದಲೇ) ಬಹಳ ಶ್ರಮವಾಗಿದೆ ಎಂದು ಹಾಸಗೆಯನ್ನು ಹಾಕಿಕೊಂಡು (ಹಗಲು ವೇಳೆಯಲ್ಲಿ) ಮಲಗುವವಳು ಹಾದರಕ್ಕೆ ಒಲಿದಿರುವಳೆಂದು ತಿಳಿಯಬೇಕು.

೭೪೩. ನಡೆಯುತ್ತ ನಾಚುತ್ತ | ನುಡಿಯುತ್ತ ಕೊಂಕುತ್ತ |
ಮುಡಿಯುಟ್ಟು, ಹಲ್ಲಸುಲಿವಾಕೆ | ಅಗ್ಗದ |
ತುಡುಗುಣೆಯೆಂದ ಸರ್ವಜ್ಞ ||

ಕೃತ್ರಿಮ ರೀತಿಯಿಂದ ನಡೆಯುವವಳೂ, ಕಾರಣವಿಲ್ಲದೇ ನಾಚುವವಳೂ, ಕಳ್ಳಧ್ವನಿಯಲ್ಲಿ ಮಾತಾಡುವವಳೂ, ಮಾತಾಡುವಾಗ ಅನೇಕ ಕಡೆಗಳಲ್ಲಿ ಬಳುಕುವವಳೂ, ಆಕರ್ಷಕ ಶೀರೆಯನ್ನುಟ್ಟು ಹಲ್ಲು ಬಿಚ್ಚಿ ಮಂದಹಾಸ ಬೀರುವವಳೂ ಬಹಳ ಕೀಳು ತರಗತಿಯ ಸೂಳೆಯೆಂದು ತಿಳಿಯಬೇಕು.

೭೪೪. ನಡೆಯುತ್ತ ಸೀರೆಯನು | ಕೊಡಹುತ್ತ ಕೆಮ್ಮುವಳು |
ಎಡಗಣ್ಣಿನಿಂದ ಮೀಟುವಳು ಹಾದರದ |
ಮುಡುವು ಕಾಣಯ್ಯ ಸರ್ವಜ್ಞ ||

ನಡೆಯುವಾಗ ಶೀರೆಯ ನೀರಿಗೆಗಳನ್ನು ಚಲ್ಲಾಟವಾಡುತ್ತ ಸಾಗುವವಳೂ, ಹಾಗೆ ಮಾಡುವಾಗ ಕಾರಣವಿಲ್ಲದೇ ಕೆಮ್ಮುವವಳೂ, ಎಡಗಣ್ಣಿನ ವಾರಿನೋಟ ಬೀರುವವಳೂ ಹಾದರದ ಕೂಪ (ಅಂದರೆ ಮೂರ್ತಿ) ಯೆಂದು ತಿಳಿಯಬೇಕು.

೨೪೫. ಕಣಕಾಲ ಕುಣಿಸುವಳು | ಮೊಣಕಾಲ ಮಣಿಸುವಳು |
ಎಣಿಕೆಯುಳಿಪಲ್ಲ ತೋರುವಳು ಹಾದರದ |
ಕುಣಿಕೆ ಕಾಣಯ್ಯ ಸರ್ವಜ್ಞ ||

ಕಾಲಿನ ಮೀನಗಂಡನ್ನು ಕುಣಿಸುವಂಥವಳೂ ಮೊಣಕಾಲನ್ನು ಮಣಿಸಿ ನಡೆಯುವವಳೂ ಪ್ರಸಂಗವೊದಗಿದಾಗ ನಕ್ಕು (ಜನರ) ಮನಸೆಳೆಯುವವಳೂ ಹಾದರಗಿತ್ತಿಯೆಂದೇ ಗ್ರಹಿಸಬೇಕು.

೨೪೬. ಕಣಕಾಲು ಕಿರಿದಾಗಿ | ಕುಣಿಕುಣಿದು ನಡೆಯುವಳು |
ಅಣಕದಲಿ ಉರವತೋರುವಳು ಗಂಡನ |
ಟೊಣೆದಳೆಂದರಿಗು ಸರ್ವಜ್ಞ ||

ಕಾಲುಗಳ ಮೀನಗಂಡವನ್ನಾಗಲೀ ಹದಡವನ್ನಾಗಲೀ ಸಣ್ಣದಾಗಿ ಮಾಡುತ್ತ ಕುಣಿಕುಣಿಯುತ್ತ ನಡೆಯುವಂಥವಳೂ, (ತನಗೆ ಗೊತ್ತೇ ಇಲ್ಲ ವೆಂಬ ಭಾವ ತೋರುತ್ತ) ತನ್ನ ಸ್ತನಗಳನ್ನು ಪುರುಷರಿಗೆ ತೋರಿಸುತ್ತ ನಡೆಯುವವಳೂ ಗಂಡನನ್ನು ಮೋಸ ಮಾಡಿ ಪರಪುರುಷರ ಸಂಗದಿಂದ ಹಾದರ ಮಾಡುವಳೆಂದು ತಿಳಿಯಬೇಕು.

೨೪೭. ಕಚ್ಚುವ ಕಲೆಯುವ | ಮುಚ್ಚುಳದಲುಂಬುವ |
ಮೆಚ್ಚಿನ ಮಾತಾಡುವ ಹೆಣ್ಣನು |
ನೆಚ್ಚಬೇಡೆಂದ ಸರ್ವಜ್ಞ ||

ತನ್ನ ತುಟಿಗಳನ್ನು ತಾನೇ ಕಚ್ಚುತ್ತಿರುವಂಥವಳನ್ನೂ, ಅತಿ ಶೀಘ್ರದಲ್ಲಿ ಸಲಿಗೆ ಬೆಳಸಿ ವರ್ತಿಸುವಂಥವಳನ್ನೂ ಆಕರ್ಷಣೆಯ ಮಾತುಗಳನ್ನಾಡುವವಳನ್ನೂ ನಂಬಲೇಬಾರದು.

೨೪೮. ಚೊಕ್ಕವಿರುವಳ ಕೂಟ | ಅಕ್ಕರದ ಮನೆಯಂತೆ |
ಚೊಕ್ಕವಿಲ್ಲದಳ ನೆರೆಕೂಟ ಗಾಣದಿ |
ಸಿಕ್ಕು ಸತ್ತಂತೆ ಸರ್ವಜ್ಞ ||

ಸ್ವಚ್ಛವಾಗಿಯೂ, ನಿರೋಗಿಯಾಗಿಯೂ ಇರುವವಳೊಡನೆ ಭೋಗಿಸುವದೆಂದರೆ ಸುಂದರವಾದ ಮನೆಯಲ್ಲಿ ವಾಸಮಾಡಿದಂತೆ ಸುಖವಾಗುವದು. ಸ್ವಪಚಳೂ ರೋಗಿಷ್ಠಳೂ ಆದವಳೊಡನೆ ಸಂಗ ಮಾಡಿದರೆ ಗಾಣದಲ್ಲಿ ಸಿಕ್ಕು ಜಿಬ್ಬೆಯಾಗಿ ಸತ್ತಂತೆ.

೭೪೯. ಮುಂಡೆಯ ಮುಂಡೆ । ನೂಲುಂಡೆಯುಂತಿರಬೇಕು ।
ಮುಂಡೆ ಬೈತಲೆಯು ತೆಗೆದಿಹರೆ ಮಿಂಡನ ।
ಕೊಂಡಳೆಂದರಿಗು ಸರ್ವಜ್ಞ ॥

ಸೂಳೆಯ ತಲೆಯು (ರೇಶಿಮೆಯ) ನೂಲಿನ ಉಂಡೆಯಂತೆ. (ಮಿಂಡನು ಬಂದಾಗ ಅವನೆದುರು) ತಲೆಯ ಮೇಲಿನ ಸೆರಗನ್ನು ತೆಗೆದು ಬೈತಲವನ್ನು ತೋರಿಸಿದರೆ ಅವನು ಅವಳಿಗೆ ಸೋತನೆಂದೇ ತಿಳಿಯಬೇಕು. ಅವನಲ್ಲಿಯ ಹಣವನ್ನೆಲ್ಲ ಬಾಚಿಕೊಂಡೇಬಿಡುವಳು.

೭೫೦. ಚಿಕ್ಕಾಡಿ, ತಗುಣೆಯೂ । ರಕ್ಕಸರು ಜಾರೆಯರು ।
ಒಕ್ಕಲಿರುವರು ಇರುಳೆಲ್ಲ । ಬೆಳಗಾಗೆ ।
ಸುಕ್ಕಿದಂತಿಹರು ಸರ್ವಜ್ಞ ॥

ಚಿಕ್ಕಾಡಿ, ತಗಣೆಗಳು, ರಾಕ್ಷಸರು, ಸೂಳೆಯರು ಇವರೆಲ್ಲರ ಕಾರ್ಯ ಭಾರಗಳು ಇಡೀ ರಾತ್ರಿಯಲ್ಲೇ ನಡೆಯುವವು. ಬೆಳಗಾಯಿತೆಂದರೆ ನಿರ್ವಿಣ್ಣ ರಾಗಿ ಎಚ್ಚರತಪ್ಪಿ ಒಣಗಿದ ಸಿಪ್ಪೆಯಂತೆ ಅವರು ಬಿದ್ದು ಬಿಡುವರು.

೭೫೧. ಅರಮನೆಯುಲಿರುತಿಹುದು । ಕರದಲ್ಲಿ ಬರುತಿಹುದು ।
ಕೊರೆದು ವಂಶಜರ ತಿನುತಿಹುದು, ಕವಿಗಳು ।
ದೊರೆಗಳಿದ ಪೇಳಿ ಸರ್ವಜ್ಞ ॥

ಇದು ಅರಮನೆಯಲ್ಲಿ ಕೂಡ ಇರುವದು. ಎಲ್ಲಿ ಬೇಕಾದಲ್ಲಿ ಒಯ್ಯಲೂ ಬರುವದು. ತನ್ನ ವಂಶಜರನ್ನೇ ಕೊರೆದು ಸಣ್ಣ ಮಾಡಿಬಿಡುವದು. ಕವಿ ರಾಜರು ಹೇಳಲಿ ಇದಾವದೆಂದು. (ಕಬ್ಬಿಣ ತಿಕ್ಕುವ ಅರ್ನ).

೭೫೨. ಪಾತಾಳಕಿಳಿಯುವದು । ಸೀತಳ ವತರುತಿಹುದು ।
ಭೂತಳದ ಮೇಲೆ ಇರುತಿಹುದು ಅದುತಾನು ।
ಏತರದು ಪೇಳಿ ಸರ್ವಜ್ಞ ॥

(ಇದು ಬಾವಿ, ಸರೋವರ ಯಾವುದೇ ಜಲಾಶಯದ) ಪಾತಾಳಕ್ಕೆ ಇಳಿಯಬಲ್ಲದು. ಅಲ್ಲಿಂದ ನೀರನ್ನು ಮೇಲೆ ತರುವದು. ಆದರೆ ಅದು ವಾಸಿಸು ವದು ಭೂಮಿಯ ಮೇಲೆ. ಇದು ಯಾವದು ? (ಕಪ್ಪಲಿ, ಯಾತ).

೭೫೩. ಕರ್ಪುರದಿ ಹುಟ್ಟಿಹುದು । ಕರ್ಪುರವು ತಾನಲ್ಲ ।
ಕರ್ಪುರವು ಅಹುದು ಬಿಳಿಯಲ್ಲ, ಈ ಮಾತು ।
ಕರ್ಪುರಲುಂಟು ಸರ್ವಜ್ಞ ॥

(ಇದು) ಕರ್ಪುರದಿಂದಲೇ ಹುಟ್ಟಿರುವದು. ಆದರೆ ಇದು ಕರ್ಪುರವಲ್ಲ, ಕರ್ಪುರವಲ್ಲವೆನಬೇಕೇ? ಕರ್ಪುರವು ಅದು ಹೌದು. ಆದರೆ ಬೆಳ್ಳಗಿಲ್ಲ, ಬೇರೆ ಬಣ್ಣದ್ದಿದೆ. ಆದರೆ ಅದರ ಗುಣವೆಲ್ಲ ಕರ್ಪುರದಂತೆಯೇ ಇದೆ. (ಕರ್ಪುರದ ಎಣ್ಣೆ)

೭೫೪. ಮುಂಗೈಯೊಳಾಡುವದು । ಹಿಂಗುವದು ಹೊಂಗುವದು ।
ಸಿಂಗಿಯಲಿ ಸಿಳ್ಳು ಬಡುತಿಹುದು ಆ ಮಿಗದ ।
ಸಂಗವನು ನೋಡು ಸರ್ವಜ್ಞ ॥

ಮುಂಗೈ ಮೇಲೆ ಕುಳಿತು ಆಟವಾಡುವದು. ಒಮ್ಮೆಲೇ ಹಾರಿಹೋಗುವದು. ಮತ್ತೆ ಬಂದುಬಿಡುವದು, ಕೊಕ್ಕಿನಿಂದ ಸಿಳ್ಳು ಹಾಕುವದು. ಈ ಮೃಗದ ಸಹವಾಸ ಸುಖವನ್ನು ಭೋಗಿಸಬೇಕು. (ಗಿಳಿ)

೭೫೫. ಕರಚರಣವದಕಿದ್ದು । ಕರೆದಲ್ಲಿ ಬಾರದದು ।
ಕರದಲ್ಲಿ ಹುಟ್ಟಿ ಸ್ಥಿರವಾಗಿ ಇರುವದಿದ ।
ರಿರವರಿದು ಪೇಳಿ ಸರ್ವಜ್ಞ ॥

(ಇದಕ್ಕೆ) ಕೈಗಳೂ ಇವೆ. ಕಾಲುಗಳೂ ಇವೆ. ಆದರೆ ಬಾ ಎಂದು ಕರೆದರೆ ಅದು ಬರಲಾರದು. ಮನುಷ್ಯನ ಕೈಯಿಂದ ಅದು ಹುಟ್ಟಿರುವದು. ಅದು ಒಂದು ಕಡೆ ನಿಂತರೆ ಸ್ಥಿರವಾಗಿ ಅಲ್ಲಿಯೇ ನಿಂತುಬಿಡುವದು. ಇದಾವುದು ? (ಹೊಲದಲ್ಲಿ ನಿಲ್ಲಿಸಿದ ಬೆದರು)

೭೫೬. ಬಂದಿಹೆನು ನಾನೊಮ್ಮೆ । ಬಂದು ಹೋಗುವೆನೊಮ್ಮೆ ।
ಬಂದೊಮ್ಮೆ ಹೋಗಿ ನಾಬಾರೆ, ಕವಿಗಳಲಿ ।
ವಂದ್ಯರಿದ ಪೇಳಿ ಸರ್ವಜ್ಞ ॥

(ಒಂದು ಸ್ಥಳದಿಂದ) ನಾನು ಒಮ್ಮೆ ಬಂದಿದ್ದೇನೆ. ಹೇಗೆ ಬಂದೆನೋ ಹಾಗೆಯೇ ಆ ಸ್ಥಳಕ್ಕೆ ಹೋಗುವೆನು. ಈ ರೀತಿ ಒಮ್ಮೆ ಬಂದು ಹೋಗಿ ಬಿಟ್ಟೆನೆಂದರೆ ನಾನು ಪುನಃ ಬರುವದಿಲ್ಲ. ಆ ಸ್ಥಳವನ್ನು ಪೂಜ್ಯ ಕವಿಗಳು ಹೇಳಲಿ ( ಮೋಕ್ಷ ).

೭೫೭. ಮೂರುಕಾಲಲಿನಿಂತು | ಹೀರಿತಿಂಬುದು ಮರನ |
ಆರಾರಿನೀರು ಕುಡಿದಿಹುದು ಕವಿಗಳಲಿ |
ಧೀರರಿದ ಪೇಳಿ ಸರ್ವಜ್ಞ ||

ಮೂರು ಕಾಲಿ (ಪ್ರಾಣಿ ಆದ್ದರಿಂದ)ನ ಮೇಲೆ ನಿಂತುಕೊಂಡಿರುವದು. ಗಿಡ(ದ ಬೊಡ್ಡೆಯನ್ನು) ವನ್ನು ಗೀರಿಗೀರಿ ತಿನ್ನುವದು. ತಿನ್ನುತ್ತಿರುವಾಗಲೇ ನೀರನ್ನು ಕುಡಿಯುತ್ತಿರುವದು. ಧಿಟ್ಟ ಕವಿಗಳು ಇದಾವುದೆಂಬದನ್ನು ಹೇಳಲಿ (ಸಾಣೇಕಲ್ಲು).

೭೫೮. ಅರೆವಕಲ್ಲಿನಮೇಲೆ | ಮರವುಹುಟ್ಟಿದಕಂಡೆ |
ಮರದ ಮೇಲೆರಡು ಕರಕಂಡೆ, ವಾಸನೆಯು |
ಬರುತಿಹುದಕಂಡೆ ಸರ್ವಜ್ಞ ||

ಅರೆಯುವಂಥ ಕಲ್ಲಿನ ಮೇಲೆ ಮರ (ಬೊಡ್ಡೆ) ವನ್ನು ಕಂಡೆನು. ಆ ಮರದ ಮೇಲೆ (ಮನುಷ್ಯರ) ಎರಡು ಹಸ್ತಗಳನ್ನು ನೋಡಿದೆನು. ಅದೇ ಸಮಯದಲ್ಲಿ ಅಲ್ಲಿಂದ ಬರುತ್ತಿರುವ ವಾಸನೆಯನ್ನು ಕಂಡೆನು. (ಗಂಧದ ಕೊರಡು.)

೭೫೯. ಇನ್ನುಬಲ್ಲರೆಕಾಯಿ | ಮುನ್ನೂರಅರವತ್ತು |
ಹಣ್ಣುಹನ್ನೆರಡು ಗೊನೆಮೂರು ತೊಟ್ಟೊಂದು |
ಚನ್ನಾಗಿ ಪೇಳಿ ಸರ್ವಜ್ಞ ||

ಎಣಿಸಿ ನೋಡಿದರೆ ಈ ಫಲಕ್ಕೆ ಮೂರುನೂರಾ ಅರವತ್ತು ಕಾಯಿಗಳಾಗಿವೆ. ಆದರೆ ಹನ್ನೆರಡೇ ಹಣ್ಣುಗಳಾಗುವವು. ಮೂರು ಗೊನೆಗಳುಂಟು. ಇಂಥ ಹಣ್ಣಿಗೆ ತೊಟ್ಟು ಒಂದೇ ಒಂದು ಇದಾವುದು (ವರುಷ).

೭೬೦. ಕರವುಂಟುಕಾಲಿಲ್ಲ | ಶಿರಹರಿದ ಮುಂಡವದು |
ನರದಿಬಿಗಿದಾರು ತುಂಡದಕೆ ಕವಿಗಳಲಿ |
ಅರಿದರಿದಪೇಳಿ ಸರ್ವಜ್ಞ ||

ಇದಕ್ಕೆ. ಕೈಗಳುಂಟು ಆದರೆ ಕಾಲುಗಳೇ ಇಲ್ಲ. ರುಂಡವನ್ನು ಹಾರಿಸಿಬಿಟ್ಟದ್ದರಿಂದ ಧಡವೊಂದೇ ಉಳಿದಿದೆ. ಈ ಧಡ ಕೂಡ ತುಂಡು ತುಂಡಾಗಿರುವದರಿಂದ ನರಗಳಿಂದ ಈ ತುಂಡುಗಳನ್ನು ಬಿಗಿದು ಜೋಡಿಸಿದ್ದಾರೆ. ಕವಿಗಳಾದರೂ ಬಲ್ಲವರಿದ್ದರೆ ಇದಾವುದೆಂಬುದನ್ನು ಹೇಳಿರಿ. (ಅಂಗಿ ಅಥವಾ ಕೋಟು)

೭೬೧. ಕೊರಡುಸುರತರುವಾಯ್ತು | ಬರಡು ನೆರೆಹಯವಾಯ್ತು |
ಮರುಳು ತಂಡಗಳು ಪ್ರಣವನುಚ್ಚರಿಸುವವು |
ಗುರುವಾಜ್ಞೆ ಗಂಜಿ ಸರ್ವಜ್ಞ ||

ಗುರುಗಳ ಅಪ್ಪಣೆಯಾದರೆ ನಿರುಪಯೋಗಿಯಾದ ಆಕಳು ದೇವ ಲೋಕದ ಹಸು (ಕಾಮಧೇನು) ಆಗುವದು, ಬಂಜೆ ದನಗಳು ಹಾಲು ಕೊಡುವವುಗಳಾದಾವು. ಹುಚ್ಚರ ಮೇಳವು ಭಕ್ತಿಪೂರ್ವಕವಾಗಿ ಪ್ರಣವ ಮಂತ್ರ ಜಪಾನುಷ್ಠಾನದಲ್ಲಿದ್ದೀತು.

೭೬೨. ಗುರುಸೇವೆ ಕೈಕೊಂಡು | ಹಿರಿದಾಗಿ ಮಾಡದಲೆ |
ಹರಿದೇರಿ ಮುಕ್ತಿಪಡೆಯುವಡೆ ಅದುತಾನು |
ಹರಿದಾದ ತೆವರೆ ಸರ್ವಜ್ಞ ||

ಗುರುಗಳ ಸೇವೆಯನ್ನು ಕೈಕೊಂಡು ಅತ್ಯಂತ ಭಕ್ತಿಪೂರ್ವಕವಾಗಿ ಮಾಡದಲೇ ಮುಕ್ತಿಗೆ ಹೋಗುವೆನೆಂದು ಆ ದಿಕ್ಕಿಗೆ ನಿಂತರೆ ಅದೇನು ಮೇಲೆ ಹತ್ತಿ ಹೋಗಲು ಉನ್ನತವಾದ ಪರ್ವತಶಿಖರವೇ? (ಅದು ಸಾಧ್ಯವಿಲ್ಲ. ಗುರುಗಳ ಕೃಪೆ ಆಶೀರ್ವಾದಗಳ ವಿನಃ ಮುಕ್ತಿ ಸಿಗಲಾರದು.)

೭೬೩. ಗುರುವಚನವುಪದೇಶ | ಗುರುವಚನಪರ ಭಕ್ತಿ |
ಗುರುವಚನ ಮೋಕ್ಷಪದವದುವೆ ಗುರುವಚನನಿ |
ಪರಮಾರ್ಥವಯ್ಯ ಸರ್ವಜ್ಞ ||

ಗುರುಗಳಾಡಿದ ಮಾತೇ ಉಪದೇಶವು. ಅವರ ನುಡಿಗಳಲ್ಲಿ ಪರಭಕ್ತಿಯನ್ನಿಟ್ಟುಕೊಳ್ಳಬೇಕು. ಗುರುಗಳ ಮಾತಿನಂತೆ ನಡೆದರೆ ಮೋಕ್ಷ ಪ್ರಾಪ್ತಿಯೋಗವಾಗುವದು. ಗುರುವಾಕ್ಯವು ಮುಕ್ತಿಪ್ರದವು.

೭೬೪. ಬಳ್ಳಿಗುರುಡರು ಕೂಡಿ | ಹಳ್ಳವನು ಬಿದ್ದಂತೆ |
ಒಳ್ಳೆ ಗುರುವಿನುಪದೇಶವಿಲ್ಲದಿರೆ |
ಎಲ್ಲಯದುಮುಕ್ತಿ ಸರ್ವಜ್ಞ ||

ಯೋಗ್ಯರಾದ, ಜ್ಞಾನಿಗಳಾದ ಗುರುಗಳ ಉಪದೇಶವು ಅತ್ಯವಶ್ಯವಾದುದು. ಆ ಉಪದೇಶ ಸಿಕ್ಕರೆ ಮಾತ್ರ ಮುಕ್ತಿಯು ಲಭಿಸುವದು, ಇಲ್ಲದಿದ್ದರೆ ಕುರುಡರು ಗುಂಪಾಗಿ ಕೂಡಿಕೊಂಡು ಬಳ್ಳಿ ಹಿಡಿದು ಸಾಗಿ ಹಳ್ಳದಲ್ಲಿ ಎಲ್ಲರೂ ಬಿದ್ದಂತಾಗುವದು. (ಅಂಧನು ಅಂಧನಿಗೆ ದಾರಿತೋರಿದಂತಾಗಿ ಎಲ್ಲರೂ ಅಡ್ಡದಾರಿ ಬೀಳುವಂತಾಗುವದು)

೭೬೫. ನರಕಪಾಪಿಷ್ಠರಿಗೆ | ಸುರಲೋಕ ನಿಷ್ಠರಿಗೆ |
ಗುರುಬೋಧೆಯಿಂದ ಜಗವುಳಿವುದಲ್ಲದೆ |
ಉರಿದುಹೋಗಿಹುದು ಸರ್ವಜ್ಞ ||

ಪಾಪಿಗಳಿಗೆ ನರಕವು ಕಾದಿಟ್ಟಿರುವದು. ತತ್ವಾನುಷ್ಠಾನವುಳ್ಳವರು (ಜಪ ತಪ ಹೋಮ ಹವನಾದಿಗಳನ್ನು ಮಾಡುವವರು) ದೇವಲೋಕ ಸೇರುವರು. ಈ ಭೂಲೋಕದಲ್ಲಿ ವಾಸಿಸುವಂಥವರು ಗುರುಗಳ ಉಪದೇಶದಿಂದ ಬಾಳುವರು. ಉಪದೇಶವಿಲ್ಲದಿದ್ದರೆ ಈ ಜಗತ್ತು ಎಂದೋ ಸುಟ್ಟು ಬೂದಿಯಾಗುತ್ತಿತ್ತು.

೭೬೬. ಮೊಲೆವಾಲನುಂಬದನು | ಮೊಲೆಗೂಸುಬಲ್ಲುದೆ ? |
ಮೊಲೆಗೂಸಿನಂತಿಪ್ಪ ಶಿಷ್ಯಂಗೆ ಗುರುಬೋಧೆ |
ಮೊಲೆವಾಲು ಕಾಣೋ ಸರ್ವಜ್ಞ ||

ಹಸುಗೂಸು (ಹುಟ್ಟಿದಾಗಿನಿಂದ) ತಾಯಿಯ ಮೊಲೆ ಹಾಲಿನ ಸವಿ ಅಥವಾ ಅದನ್ನು ಉಂಡರೆ ತಾನು ಜೀವಿಸುವೆನೆಂಬ ಅರಿವು ಅದಕ್ಕಿರುವದೇ ?. (ಇಲ್ಲ) ಅದರಂತೆ ಶಿಷ್ಯನೆಂಬುವವನು ಹಸುಗೂಸು ಇದ್ದಂತೆ; ಗುರೂಪದೇಶವು ತಾಯಿಯ ಮೊಲೆಹಾಲು ಇದ್ದಂತೆ.

೭೬೭. ಸಾಣೆಕಲ್ಲೊಳು ಗಂಧ | ಮಾಣದಲೆಸೆವಂತೆ |
ಜಾಣಸದ್ಗುರುವಿನು ಪದೇಶದಿಂದಿ ಮುಕ್ತಿ |
ಕಾಣಿಸುತ್ತಿಹುದು ಸರ್ವಜ್ಞ ||

ಸಾಣೇಕಲ್ಲ ಮೇಲೆ (ಕೊರಡು ತೆಯ್ದಾಗ) ಗಂಧವು ನಿಶ್ಚಯವಾಗಿಯೂ ಬಂದು ಶೋಭಿಸುವದು. ಅದರಂತೆ ಪಂಡಿತನೂ ಸತ್ಕರ್ಮಾನುಷ್ಠಾನಿಯೂ ಆದ ಗುರುಗಳು ಉಪದೇಶಿಸಿದರೆ (ಶಿಷ್ಯನಿಗೆ ಮುಕ್ತಿಯು ಕಣ್ಗೆ ಕಾಣಿಸತೊಡಗುವದು. (ಅದು ಸಿಕ್ಕೇ ಸಿಗುವದು ಎಂದರ್ಥ.)

೭೬೮. ಹೇಳಿದ್ದೇ ಹೇಳುವರು | ಕೇಳಿದ್ದೇಕೇಳುವರು |
ಕೇಳಿದ್ದೇಕೇಳಿ ಸುಖಿಸುವರು ಗುರುಗಳ |
ಹೇಳಿಕೆಯೆ ಬೇರೆ ಸರ್ವಜ್ಞ ||

( ಪುರಾಣ ಪುಣ್ಯ ಕಥೆಗಳನ್ನು ) ಹೇಳಿದ್ದೇ ಪುನಃ ಪುನಃ ಹೇಳುವರು. ಶ್ರೋತೃಗಳು ಸಹ ಒಮ್ಮೆ ಕೇಳಿದ್ದನ್ನೇ ಪುನಃ ಪುನಃ ಕೇಳುವರು. ಕೇಳಿದ್ದನ್ನೇ ಮೆಲುಕುಹಾಕುತ್ತ ಸುಖಿಸುವರು. ಆದರೆ ಗುರುಗಳ ಉಪದೇಶವು ಈ ಎಲ್ಲ ಹೇಳಿಕೆ ಕೇಳಿಕೆಗಳಿಗಿಂತ ಬೇರೆಯಿರುವದು.

೨೭೯. ಎಂಟು ಕಂಟಕರಿಂಗೆ । ನೆಂಟರುಗಳೈವರಿಗೆ ।
ಗಂಟಲಗಾನಾಗಿಪ್ಪಗುರು, ನೀಲ ।
ಕಂಠನಾಗಿಕ್ಕು ಸರ್ವಜ್ಞ ॥

( ಎಂಟು ಕಂಟಕರು ) ಕಾಮ, ಕ್ರೋಧ, ಮದ. ಮತ್ಸರಾದಿ ಎಂಟು ವೈರಿಗಳಿಗೆ ( ಐದು ಮಂದಿ ನೆಂಟರು. ) ಪಂಚೇಂದ್ರಿಯಗಳಿಗೆ ಗುರುಗಳು ( ಅವರ ಉಪದೇಶವು ) ಗಂಟಲಗಳಾಗಿರಬಹುದು. ( ಕೊಂದೇ ಬಿಡುವರು ) ಅಷ್ಟೇ ಏಕೆ ? ( ಶಿಷ್ಯನಿಗೆ ಗುರುಗಳು ಪ್ರತ್ಯಕ್ಷ) ಪರಮಾತ್ಮನ ಸ್ವರೂಪವೇ ಆಗಿ ಉದ್ಧರಿಸುವನು.

೨೭೦. ಒಂದರೊಳಗೆಲ್ಲವೂ । ನಿಂದಿಸಿರುವವನುಗುರು ।
ಚಂದದಿತೋರಿ ಕೊಡದಿರೆ, ಶಿಷ್ಯನಂ ।
ಕೊಂದನೆಂದರಿಗು ಸರ್ವಜ್ಞ ॥

ಜಗತ್ತು ಮಿಥ್ಯ ಎಲ್ಲ ಜೀವಿಗಳೂ ಒಂದು ಆತ್ಮಗಳು. ಆತ್ಮಗಳು ಪರಮಾತ್ಮನಲ್ಲಿ ಐಕ್ಯವಾಗಿ ಒಂದಾಗಿ ಬಿಡುವರು, (ನಾ ನೂ ದೇವರೂ ಒಂದೇ) ಎಂಬ ತತ್ವಗಳನ್ನೆಲ್ಲ ಶಿಷ್ಯನಿಗೆ ಮನವಾಗುವಂತೆ ತಿಳಿಸಿ ಹೇಳಿ ಉಪದೇಶ ಕೊಡದೇ ಇದ್ದ ಗುರುಗಳು ಶಿಷ್ಯನನ್ನು ಕೊಂದುಬಿಟ್ಟಂತೆಯೇ ಸರಿ.

೨೭೧. ಅಂಜದಲೆ ಕೊಂಡಿಹರೆ । ನಂಬುಗೆ ಅಮೃತವಕ್ಕು ।
ಅಂಜಿ ಅಳಕುತಲಿ ಕೊಂಡಿಹರೆ ಅಮೃತವು ।
ನಂಜಿನಂತಕ್ಕು ಸರ್ವಜ್ಞ ॥

( ವಿಷವು ತನಗೇನೂ ಮಾಡಲಾರದು ಎಂಬ ) ಧೈರ್ಯದಿಂದ ಅದನ್ನು ಕುಡಿದರೆ ವಿಷವು ಅಮೃತವಾಗುವದು. ( ಇದರಿಂದ ನನಗೇನಾದರೂ ಆದರೆ ಹೇಗೆ ? ಎಂಬ ) ಅಂಜಿಕೆಯಿಂದ ನಡುಗುತ್ತ ಅಮೃತವನ್ನು ಸಹ ಕುಡಿದರೂ. ಅದು ವಿಷವಾಗಿ ವ್ಯಕ್ತಿಯನ್ನು ನಾಶಮಾಡುವದು.

೭೭೨. ಲಿಂಗಕ್ಕೆ ತೋರದಲೆ | ನುಂಗಿದರೆ ಏನಹುದು |
ಭಂಗಬಂಧನವು ಘನವಹುದು ಆ ಲಿಂಗ |
ಹಿಂಗಿಹುದು ನೋಡ ಸರ್ವಜ್ಞ ||

ದೇವರಿಗೆ ನೈವೇದ್ಯವನ್ನು ಮಾಡದಲೇ ಊಟವನ್ನು ಮಾಡಿದರೆ ಸಂಸಾರ ಬಂಧನಗಳೂ ತಾಪತ್ರಯ ತಾಪಗಳೂ ಹೆಚ್ಚಾಗುವವು. ಆದರೆ ದೇವರಿಗೆ ಅವಾವೂ ಇಲ್ಲದಿದ್ದರೆ ಅವನು ಯಾವಾಗಲೂ ನಿರ್ಲಿಪ್ತನಾಗಿಯೇ ಇರುವನು.

೭೭೩. ಕವಿಗೆ ನವರಸಲೇಸು | ಭವಿಗೆ ಬಹುಭವಲೇಸು |
ಭವಬಾಧೆಹರಿವ ಗುರುಲೇಸು, ಜಗಕೊಬ್ಬ |
ಶಿವಶರಣ ಲೇಸು ಸರ್ವಜ್ಞ ||

ನವರಸ ಪೂರಿತವಾದ ಸಾಹಿತ್ಯವು ಕವಿಗಳಿಗೆ ಬೇಕಾಗುವದು. ವಿಲಾಸವಂತನಿಗೆ ಸಕಲ ಭೋಗ ಸಾಮುಗ್ರಿಗಳು ಬೇಕಾಗುವವು. ಸಂಸಾರ ಬಂಧನಗಳನ್ನು ಹರಿದು ಸತ್ಪಥ ತೋರಿಸುವದಕ್ಕಾಗಿ ( ಶಿಷ್ಯನಿಗೆ ) ಓರ್ವ ಯೋಗ್ಯ ಗುರುಗಳು ಬೇಕು. ಆದರೆ ಜಗತ್ತಿಗೆ ಒಬ್ಬ ಶಿವಶರಣನಿದ್ದರೆ ಸಾಕು.

೭೭೪. ಶರಣ ತಾ ಸತಿಯಾಗಿ | ವರಲಿಂಗ ಪತಿಯಾಗಿ |
ಬೆರೆಯದೆ ಬೆರಸಿ ಬಯಲಾದ ಶಿವಶರಣ |
ಮರಳಿ ಹುಟ್ಟುವನೆ ಸರ್ವಜ್ಞ ||

ಪರಶಿವನೇ ಪತಿಯೆಂದೂ ಭಕ್ತನು ತಾನು ಸತಿಯೆಂದೂ ಭಾವಿಸಿ ಆ ದೇವರಲ್ಲಿ ಸಂಪೂರ್ಣವಾಗಿ ಬೆರೆತು ಲೀನವಾಗಿ ಮೈಮರೆತರೆ ಅಂಥ ಶಿವಶರಣನಿಗೆ ಪುನರ್ಜನ್ಮವು ಎಂದೂ ಬರಲಾರದು. ( ಶಿವಸಾಯುಜ್ಯ ಸಿಗುವದು. )

೭೭೫. ಒಂದೆ ಬೊಮ್ಮನುತಾನು | ಮುಂದೆ ಮೂರಾಗಿಹರು |
ಎಂದು ನಡೆನುಡಿಗಳೊಂದಾದ ಶರಣಂಗೆ |
ಇಂದುಧರನೊಲಿವ ಸರ್ವಜ್ಞ ||

ಬ್ರಹ್ಮನು ಒಬ್ಬನೇ ಇದ್ದು ಅವನೇ ಹರಿ, ಹರ, ಬ್ರಹ್ಮರೆಂದು ಮೂರು ರೂಪ ತಾಳಿರುವರೆಂದು ಕಾಯಾ, ವಾಚಾ, ಮನಸಾ ತಿಳಿದು ವರ್ತಿಸುವಂಥ ಶಿವಶರಣರಿಗೆ ಪರಮೇಶ್ವರನು ಕೂಡಲೇ ಒಲಿದು ಪ್ರೀತನಾಗುತ್ತಾನೆ.

೭೭೬. ಕರ್ಪುರದ ಸ್ತ್ರೀ, ಯಗ್ನಿ । ಪುರುಷನೊಳು ಬೆರೆದಂತೆ ।
ಪರಮನಲ್ಲಿ ಪ್ರಾಣ ಬೆರೆದಿಪ್ಪ ಐಕ್ಯಂಗೆ ।
ಚಿರಮುಕ್ತಿಯಹುದು ಸರ್ವಜ್ಞ ॥

ಕರ್ಪುರದಿಂದ ಮಾಡಿದ ಸ್ತ್ರೀ ಗೊಂಬೆಯು ಅಗ್ನಿಯೆಂಬ ಪುರುಷನನ್ನು ಪ್ರವೇಶಿಸಿ (ಸುಟ್ಟು) ಅವನಲ್ಲಿ ಒಂದಾಗಿಬಿಡುವಂತೆ ಪರಮಾತ್ಮನಲ್ಲಿ ಜೀವಾತ್ಮವು ಬೆರೆತು ಒಂದಾಗಿಬಿಟ್ಟರೆ ಅಂಥ ಭಕ್ತನಿಗೆ ಸ್ಥಿರವಾದ ಮುಕ್ತಿ ಕಟ್ಟಿಟ್ಟದ್ದು ಎಂದು ತಿಳಿಯಬೇಕು.

೭೭೭. ದೇಹಿಯೆನಬೇಡ ನಿರ್ । ದೇಹಿಜಂಗಮಲಿಂಗ ।
ದೇಹಗುಣದಾಸೆಯಳಿದಡೆ ಆತನಿರ್ ।
ದೇಹಿಕಾಣಯ್ಯ ಸರ್ವಜ್ಞ ॥

(ಜಂಗಮಲಿಂಗನು) ಪರಮಾತ್ಮನು ಸಾಕಾರನೆನಬೇಡ. ಅವನು ನಿರಾಕಾರನು ನಿರ್ಗುಣನು. ಈ ಪ್ರಕಾರ ತಿಳಿದು ಭಕ್ತನು ಸ್ವದೇಹ, ಸ್ವಗುಣಗಳ ಅಭಿಮಾನವನ್ನು ತೊರೆದುಬಿಟ್ಟರೆ ತಾನೇ ನಿರಾಕಾರ ನಿರ್ಗುಣ ಬ್ರಹ್ಮನಾಗಿ ಬಿಡುವನು.

೭೭೮. ಅಂಗದಿಚ್ಛೆಗೆ ಹರಿದು । ಭಂಗಗೊಳದಿರು ಮನುಜ ।
ಲಿಂಗದೊಳು ನೆನಹನಿರಿಸಿ ಸತ್ಯದಿನಿಲಲು ।
ಲಿಂಗನೀನಪ್ಪೆ ಸರ್ವಜ್ಞ ॥

ಕಾಮ, ಮೋಹ, ಲೋಭಗಳಿಗೊಳಗಾಗಿ ಎಲೈ ಮಾನವನೇ ದುಃಖಿಯಾಗಬೇಡ. ಸದಾಕಾಲ (ಲಿಂಗದಲ್ಲಿ) ದೇವರಲ್ಲಿ ತದೇಕ ಮನಸ್ಸನ್ನು ಸ್ಥಿರವಾಗಿ ಇಟ್ಟುಕೊಂಡು ಸಾತ್ವಿಕ ಜೀವನ ಸಾಗಿಸು. ನೀನೇ ದೇವರಾಗಿಬಿಡುವಿ.

೭೭೯. ನಾನುನೀನಗಳಳಿದು । ತಾನು ಲಿಂಗದಿ ಉಳಿದು ।
ನಾನಾಭ್ರಮೆಗಳ ಪೆರಪಿಂಗಿ ನಿಂದವನು ।
ತಾನೈಕ್ಯನೋಡ ಸರ್ವಜ್ಞ ॥

ನಾನು ನೀನು ಎಂಬ ಭೇದಭಾವವನ್ನು ತಾಳದೆ (ಅಥವಾ ಅಹಂಕಾರ ಮಮಕಾರಗಳನ್ನು ಬಿಟ್ಟು) ಸದಾಕಾಲ ದೇವರಲ್ಲಿಯೇ ಮನಸ್ಸನ್ನು ನಿಲ್ಲಿಸುವವನಾಗಿ ಕಾಮ ಕ್ರೋಧಾದಿ ಭ್ರಮೆಗಳಿಗೆ ಸಿಡುಕದೇ ನಿರ್ಲಿಪ್ತನಾಗಿದ್ದವನು ನಿಜವಾಗಿಯೂ ಶಿವೈಕ್ಯನಾಗಿಬಿಡುವನು.

೭೮೦. ಷಟುಸ್ಥಳವೆ ಮರ್ಮವನು | ಸ್ಫುಟವಾಗಿ ತಾನರಿದು |
ದಿಟವಾಗಿ ನಂಬಿ ನಡೆದಿಹರೆ ಇಹದಲ್ಲಿ |
ಭಟಿಸುವದು ಮುಕ್ತಿ ಸರ್ವಜ್ಞ ||

ಆರು ಸ್ಥಾನಗಳ ತತ್ವಗಳನ್ನು ವಿವರವಾಗಿಯೂ. ಸಂಪೂರ್ಣವಾಗಿಯೂ ತಿಳಿದುಕೊಂಡು ಅವುಗಳನ್ನು ಮನಃಪೂರ್ವಕವಾಗಿ ನಂಬಿ ವಿಶ್ವಾಸದಿಂದ ಬಾಳಿದರೆ ಇದೇ ಜಗತ್ತಿನಲ್ಲಿ ಮುಕ್ತಿ ಸಾಧನೆಯಾಗಿ ಸಿದ್ಧಿ ಲಭಿಸುವದು.

೭೮೧. ಮತ್ತೆ ಸದ್ಗುರು ಮುಖದಿ | ತತ್ವಮಸಿಯುನೆತಿಳಿದು |
ಸತ್ಯವಿಂತೆಂದು ಅರಿದಿಪ್ಪ ಜ್ಞಾನಿ ತಾ |
ಸತ್ತುಹುಟ್ಟುವನೇ ಸರ್ವಜ್ಞ ||

ಒಳ್ಳೇ ಯೋಗ್ಯರಾದ ಗುರುಗಳ ಮುಖದಿಂದ 'ತತ್ವಮಸಿ'ಯ ಉಪದೇಶವನ್ನು ಪಡೆದು, ಅವರ ಉಪದೇಶವು ಅತ್ಯಂತ ಸತ್ಯವಾದುದೆಂದು ನಂಬಿಕೊಂಡಿದ್ದ ಜ್ಞಾನಿಯು ಸತ್ತಮೇಲೆ ಎಂದೂ ಹುಟ್ಟಲಾರನು. ಅವನಿಗೆ ಪುನರ್ಜನ್ಮವಿಲ್ಲ. (ತತ್+ತ್ವಂ+ಅಸಿ=ದೇವರು ನೀನೇ ಇರುವಿ. ಅಂದರೆ ನಾನೇ ದೇವರೆಂಬುದು ಅದ್ವೈತ ಧರ್ಮದ ತಿರುಳು.)

೭೮೨. ಮುತ್ತು ನೀರೊಳು ಪುಟ್ಟಿ | ಮತ್ತೆ ನೀರಪ್ಪುದೆ ? |
ಸತ್ಯವನರಿದ ಜ್ಞಾನಿ ಸಂಸಾರವನು |
ಮತ್ತೆ ಹೊದ್ದುವನೆ ಸರ್ವಜ್ಞ ||

ನೀರಿನಲ್ಲಿಯೇ ಮುತ್ತು ಹುಟ್ಟುವದೆಂಬುದು ನಿಜ. ಆದರೆ ಅದು ಪುನಃ ನೀರಾಗುವದೇ ? (ಇಲ್ಲ) ಅದರಂತೆ ಸಂಸಾರದಲ್ಲಿಯೇ ಜನಿಸಿದ ಜ್ಞಾನಿಯು (ಮುಕ್ತಿಗಾಗಿ ಮುಂದಾಗುವನೇ ವಿನಃ) ಪುನಃ ಸಂಸಾರ ಕೂಪದಲ್ಲಿ ಬೀಳುವದಿಲ್ಲ.

೭೮೩. ಗಗನಕ್ಕೆ ಹೊಗೆ ಹೋಗಿ | ಮಿಗೆಜಗಕೆಬಪ್ಪುದೆ ? |
ಅಘಹರನಪದವ ಸವಿದವನು ಸಂಸಾರ |
ದಘುವಹೊದ್ದುವನೇ ಸರ್ವಜ್ಞ||

ಹೊಗೆಯು ಆಕಾಶದೆಡೆಗೆ ಮೇಲಕ್ಕೆ ಹೋಗಿ ಪುನಃ ಭೂಮಿಗೆ ಬಂದಿಳಿಯುವದೇ ? (ಇಲ್ಲ) ಅದರಂತೆಯೇ ಪರಮಾತ್ಮನ ಪಾದಾಮೃತವನ್ನು ಸವಿಯತಕ್ಕ ಯೋಗಿಯು ಪುನಃ ಸಂಸಾರಸಾಗರದಲ್ಲಿ ಬಿದ್ದು ಈ ಲೋಕಕ್ಕೆ ಬರುವನು ಎಂಬುದು ಸಾಧ್ಯವಿಲ್ಲ.

೭೮೪. ಆತುಮದ ಜ್ಯೋತಿಯನು । ಪ್ರೀತಿಯಲಿ ಅರಿದಂಗೆ ।
ಸೂತಕವದಿಲ್ಲ ಭಯವಿಲ್ಲ ಪಂಚಮಹ ।
ಪಾತಕಗಳಿಲ್ಲ ಸರ್ವಜ್ಞ ॥

ಆತ್ಮಲಿಂಗದ ಹಿರಿಮೆಯನ್ನರಿತು ಅದನ್ನು ಅತ್ಯಂತ ಭಕ್ತಿಪೂರ್ವಕವಾಗಿ ಪೂಜಿಸಿದವನಿಗೆ ಮೈಲಿಗೆಯೆಂಬುದೇ ಬರಲಾರದು ( ಅವನು ಸದಾ ಪವಿತ್ರನಾಗಿರುವನು ) ಅವನು ನಿರ್ಭಯನು ಪಂಚಮಹಾ ಪಾತಕಗಳು ಕೂಡ ಅವನನ್ನು ಸೋಂಕವು, (ಶಿಶುಹತ್ಯಾ, ಸುರಾಪಾನ, ಸ್ವಮಾತೃ ಗಮನ, ಗುರುಧನಾಪಹಾರ).

೭೮೫. ಆನೆಮೇಲಿದ್ದವನು ಶ್ವಾನಕಂಡೋಡುವನೇ ? ।
ಜ್ಞಾನಹೃದಯದಲಿ ನೆಲಿಸಿದ ಶಿವಯೋಗಿ ।
ಹೀನಗಂಜುವನೇ ಸರ್ವಜ್ಞ ॥

ಆನೆಯ ಮೇಲೆ ಸವಾರಿ ಮಾಡಿಕೊಂಡು ಹೋಗತಕ್ಕವನು ( ದೂರದಲ್ಲಿಯ ) ನಾಯಿಯನ್ನು ಕಂಡು ಓಡಿಹೋಗುವನೇ ? ಅದರಂತೆ ಜ್ಞಾನಸಂಪನ್ನನಾದ ಶಿವಯೋಗಿಯು ಕೀಳರು, ದುಷ್ಟರು, ಅಜ್ಞಾನಿಗಳು ಬಂದರೆ ಹೆದರುವನೇ ? ( ಇಲ್ಲ. )

೭೮೬. ಆನೆ ನೀರಾಟದಲಿ । ಮೀನ ಕಂಡಂಜುವದೇ ? ।
ಹೀನಮಾನವರ ಬಿರುನುಡಿಗೆ ತತ್ವದ ।
ಜ್ಞಾನಿ ಅಂಜುವನೇ ಸರ್ವಜ್ಞ ॥

(ವಿಶಾಲವಾದ ಜಲಾಶಯದಲ್ಲಿ) ಆನೆಯು ಜಲಕ್ರೀಡೆಯಾಡುತ್ತಿರುವಾಗ ನೀರಿನಲ್ಲಿಯ ಮೀನಗಳನ್ನು ಕಂಡು ಅದು ಅಂಜುವದೇ ? ಅದರಂತೆ ಕೀಳರು, ದುಷ್ಟರು, ಅಜ್ಞಾನಿಗಳೂ ಆಡಿದ ಬಿರುಸು ಮಾತುಗಳಿಗೆ ತತ್ತ್ವ, ಶಾಸ್ತ್ರ, ವೇದಾಂತ ಮೊದಲಾದವುಗಳನ್ನು ಬಲ್ಲಂಥ ಜ್ಞಾನಿಯು ಅಂಜುವನೇ ?

೭೮೭. ಬಲ್ಲೆನೆಂಬುವ ಮಾತು । ಎಲ್ಲವೂ ಹುಸಿಕಾಣೊ ।
ಬಲ್ಲರೆಬಲ್ಲೆನೆನಬೇಡ, ಸುಮ್ಮನಿರು ।
ಬಲ್ಲವನೇ ಬಲ್ಲ ಸರ್ವಜ್ಞ ॥

"ನನಗೆ ಎಲ್ಲವೂ ಗೊತ್ತಿದೆ ಎಲ್ಲ ತತ್ವಗಳನ್ನು ಬಲ್ಲೆನು" ಎನ್ನುವವನಿಗೆ ಏನೂ ಗೊತ್ತಿರುವದಿಲ್ಲ. ನಿಜವಾಗಿಯೂ ನಿನಗೆ ಏನಾದರೂ ಗೊತ್ತಿದ್ದರೆ ಹಾಗೆ ಹೇಳಬೇಡ, ಬಾಯಿ ಮುಚ್ಚಿಕೊಂಡಿರು. ಯಾವನು ತತ್ವಗಳನ್ನು ಬಲ್ಲನೋ ಅವನೆಂದೂ 'ನಾನು ಬಲ್ಲೆ' ಎಂದು ಹೇಳುವದಿಲ್ಲ.

೭೮೮. ಕೋತಿಂಗೆ ಗುಣವಿಲ್ಲ । ಮಾತಿಂಗೆ ಕೊನೆಯಿಲ್ಲ ।
ಸೋತುಹೋದವಗೆ ಜಗವಿಲ್ಲ, ಅರಿದಂಗೆ ।
ಜಾತಿಯೋ ಇಲ್ಲ ಸರ್ವಜ್ಞ ॥

ಮಂಗನಿಗೆ ವಿಶಿಷ್ಟವಾದ ಯಾವ ಗುಣಗಳೂ ಇರುವದಿಲ್ಲ. ಹರಟೆ ಹೊಡೆಯಲು ಪ್ರಾರಂಭಿಸಿದರೆ ಅದಕ್ಕೆ ಅಂತ್ಯವೇ ಇಲ್ಲ. ಸಾತ್ವಿಕ ಸ್ವಭಾವದವನಿಗೆ ಇಡೀ ಜಗದಲ್ಲಿ ಯಾರೂ ಎದುರು ಬರಲಾರರು. ಅದರಂತೆ ನಿಜವಾದ ಜ್ಞಾನಿಯಾದವನಿಗೆ ಜಾತಿ, ಮತ, ಪಂಥಗಳ ಸಂಕುಚಿತ ಭಾವನೆಯೇ ಇರುವದಿಲ್ಲ.

೭೮೯. ಜಾರೆಯಶಿಶುವಳಲು । ಆರೈಸಿ ಪತಿಕರೆಯೆ ।
ಜಾರೆಯುದಕಂಡು ನಗುವಂತೆ ಜ್ಞಾನಿಸಂ ।
ಸಾರವನು ನಗುವ ಸರ್ವಜ್ಞ ॥

ಸೂಳೆಯ ಕೂಸು ಅಳಹತ್ತಿದ ಕೂಡಲೇ ಅವಳ ಮಿಂಡನು ಅದನ್ನು ಎತ್ತಿಕೊಂಡು ಸಂತೈಸುವಾಗ ಇದನ್ನು ಕಂಡು ನಲ್ಲುವಳಂತೆ. (ತನ್ನಿಂದಲೇ) ಹುಟ್ಟಿದ ಕೂಸೆಂದು ತಿಳಿದು ಸಂತೈಸುವನು ಇವನು ಎಂದು ಹಾಸ್ಯದಿಂದ) ಇದೇ ರೀತಿಯಾಗಿ ನಿಜವಾದ ಜ್ಞಾನವರೇಣ್ಯನು ಸಂಸಾರಿಗಳನ್ನು ಕಂಡು (ಕ್ಷಣಿಕ ಕಾಲದಲ್ಲಿ ಮೈಮರೆತು ಬಿದ್ದವರನ್ನು ಕಂಡು) ನಗುತ್ತಿರುವನು.

೭೯೦. ಸುಂದರಾಂಗನೆಬಂದು | ಮುಂದೆ ತಾನಿಂದಿರಲು |
ಸುಂದರಿವನರಿವ ಜ್ಞಾನಿಯು ಎಲುವಿನ |
ಹಂದರವಹೆಂಬ ಸರ್ವಜ್ಞ ||

ಸರ್ವಾಂಗ ಸುಂದರಿಯಾದ ತರುಣಿಯು ಎದುರಿಗೆ ಬಂದು (ಕಾಮ ವಿನ್ಯಾಸ ಮಾಡುತ್ತ ನಿಂತಿದ್ದರೆ) ಬ್ರಹ್ಮಜ್ಞಾನ ಪರಿಪೂರ್ಣನಾದ ವಿದ್ವಾಂಸರು ಅವಳಲ್ಲಿ (ಮೋಹಿತರಾಗದೇ) ಇದೇನು 'ಕೇವಲ ಎಲುಬಿನ ಹಂದರ' ವೆಂದು ಸುಮ್ಮನಾಗಿಬಿಡುವರು.

೭೯೧. ದೊರಕಿದನು ಉಂಡುಂಡು | ದೊರಕಿದನು ಉಟ್ಟುಟ್ಟು |
ದೊರಕಿದಲಿ ಶಯನಪಡೆವಾತ ಲೋಕಕ್ಕೆ |
ನಿರುತನಾಗಿಕ್ಕು ಸರ್ವಜ್ಞ ||

ಏನು ಸಿಗುವದೋ (ಸಿಕ್ಕರೆ) ಅದನ್ನೇ ಸಂತೋಷದಿಂದ ಉಂಡುಕೊಂಡು, ಸಿಕ್ಕಂಥ ಅರಿವೆಯನ್ನು ಉಟ್ಟು ಮಾನಮುಚ್ಚಿಕೊಂಡಿದ್ದು ಸ್ಥಳ ಸಿಕ್ಕಲ್ಲಿ ಮಲಗಿ ಗಾಢ ನಿದ್ರಿಸುತ್ತಿರುವಂಥವನು ಈ ಲೋಕಕ್ಕೆ ಒಡೆಯ (ದೇವರೇ) ನಾಗುವನು.

೭೯೨. ಚಂದನವ ಕರಗಿಸಲು | ಚೆಂದು ಪರಿಮಳವಕ್ಕು |
ಸಂದರಿವನರಿದು ಸತ್ಪುರುಷರೆನಿಸಿಹರು |
ನೊಂದು ಸೈರಿಪರು ಸರ್ವಜ್ಞ ||

ಗಂಧವನ್ನು ಕರಗಿಸುವದಕ್ಕಾಗಿ ಬೆಂಕಿಯಲ್ಲಿ ಒಗೆದರೂ ಅದು ಸುಟ್ಟು ಗಮಗಮಿಸುವ ವಾಸನೆಯನ್ನೇ ಬೀರುವದು. ಅದರಂತೆ ಬ್ರಹ್ಮಜ್ಞಾನವನ್ನು ಪಡೆದಂಥ ಸತ್ಪುರುಷರು ಬೇಕಾದಂಥ ಕಷ್ಟಗಳು ಬಂದರೂ ಅವುಗಳನ್ನೆಲ್ಲ ಶಾಂತರೀತಿಯಿಂದ ಸಹಿಸಿಕೊಂಡಿದ್ದು ಬಾಳುವರು.

೭೯೩. ಇಂದುನಾಳೆ ಎಂದು | ತಂದು ಕೂಡಿಡಬೇಡ |
ಬಂದುದನೆ ಉಂಡು ಸುಖಿಸುತ ಬೇನೆಯುದು |
ಬಂದಾಗ ನರಳು ಸರ್ವಜ್ಞ ||

'ಈ ದಿನಕ್ಕೆ ಬೇಕು ನಾಳಿಗೆ ಬೇಕು' ಎಂದೆನ್ನುತ್ತ ಸಾಹಸಪಟ್ಟು (ಕುಯುಕ್ತಿ ಕುತಂತ್ರಗಳಿಂದ) ಘಳಿಸಿ ಕೂಡಿಡಬೇಡ. (ನ್ಯಾಯವಾಗಿ) ಬಂದದ್ದರಲ್ಲಿಯೇ ತೃಪ್ತನಾಗಿ ಉಂಡು ಸುಖಿಯಾಗಿ ಬಾಳು. ಬೇನೆ ಬಂದು ಬಿದ್ದರೆ ಕೊನೆಯುಸಿರನ್ನು ಬಿಟ್ಟುಬಿಡು.

೭೯೪. ಬಂದೀತು ರೋಗವೆನೆ | ನೆಂದು ಅಂಜಿಕೆಬೇಡ |
ಬಂದುದನು ಉಂಡು ಸುಖಿಸುತ್ತ ರೋಗಬಂ |
ದಂದಿಗೆದ್ದೇಳು ಸರ್ವಜ್ಞ ||

'ನನಗೆ ರೋಗರುಜಿಗಳು ಅಂಟಿಕೊಂಡರೆ ಹೇಗೆ ಮಾಡಲಿ' ಎಂದು ಅಂಜಿಕೊಂಡಿರಬೇಡ. ಇದ್ದಷ್ಟು ದಿವಸ ನ್ಯಾಯವಾಗಿ ಘಳಿಸಿದ್ದನ್ನು ಉಂಡು ಸುಖದಿಂದ ಜೀವಿಸು. ರೋಗ ಬಂದದ್ದೇ ಆದರೆ ಸಂತೋಷದಿಂದ ಈ ದೇಹವನ್ನು ತ್ಯಜಿಸಿ ಹೊರಟುಹೋಗು.

೭೯೫. ತನ್ನತಾನರಿದಾತ | ತನ್ನ ಜ್ಞಾನದೊಳಡಗಿ |
ತನ್ನ ಬಂಧುಗಳ ನೆರೆದೊರೆದು ಪರಬೊಮ್ಮ |
ದುನ್ನತಿಯೊಳಿಹನು ಸರ್ವಜ್ಞ ||

(ತನ್ನ ತಾನರಿತವನು) ಆತ್ಮಜ್ಞಾನವನ್ನೂ ತಾನೇ ದೇವರಿರುವೆನೆಂದು ಭಾವಿಸಿದವನೂ ಸುಜ್ಞಾನಿಯೂ ಆದವನು ತನ್ನೊಳಗೆ ತಾನು ಐಕ್ಯನಾಗಿ ಆತ್ಮಲಿಂಗವನ್ನು ಕಾಣುತ್ತ ಹೆಂಡತಿ ಮಕ್ಕಳು ಬಂಧು ಬಳಗದವರು ಹೆರವರೆಂದರಿತು ಅವರಿಂದ ದೂರವಾಗಿ ಕೊನೆಗೆ ತಾನೇ ಪರಬ್ರಹ್ಮನಾಗಿಬಿಡುವನು.

೭೯೬. ಒಂದೊಂದು ಹನಿಬಿದ್ದು | ನಿಂದಲ್ಲಿ ಮಡವಕ್ಕು |
ಸಂದಸತ್ಪುರುಷರೊಡನಾಡಿ ಪರಬೊಮ್ಮ |
ಮುಂದೆ ಬಂದಕ್ಕು ಸರ್ವಜ್ಞ ||

ಒಂದೊಂದೇ ಹನಿ (ನೀರು) ಕೂಡಿ ಕೂಡಿ ಒಂದು ಸರೋವರವಾಗಿಯೇ ನಿರ್ಮಾಣವಾಗಬಲ್ಲದು. ಅದರಂತೆ ವ್ಯಕ್ತಿಯು ತನಗೆ ಭೆಟ್ಟಿ ಆದಂಥ ಸತ್ಪುರುಷರೆಲ್ಲರೊಡನಿದ್ದು ಅವರಿಂದ ಒಂದೊಂದೇ ತತ್ವಜ್ಞಾನ ಸಂಪಾದಿಸಿದರೆ ಅವನು ಸರ್ವಜ್ಞಾನಿಯಾಗಿ ಪರಬ್ರಹ್ಮನೇ ಆಗಿಬಿಡುವನು.

೭೯೭. ಗುರಿಯಯು ತಾಗದ ಬಾಣ | ನೂರಾರನೆಸೆದೇನು ? |
ಬರಿಮಾತನಾಡಿ ಫಲವೇನು ? ನಿಜಗುಣದ |
ಅರಿವಿಲ್ಲದಿರಲು ಸರ್ವಜ್ಞ ||

ಗುರಿಯನ್ನು ತಾಕಲು ಶಕ್ಯವಿಲ್ಲದೇ ನೂರಾರು ಬಾಣಗಳನ್ನು ಬಿಟ್ಟರೆ ವ್ಯರ್ಥ ಶ್ರಮ, ನಷ್ಟ. ಅದರಂತೆ ನಿಜವಾದ ತತ್ವಜ್ಞಾನದ ಪರಿವೆಯಿಲ್ಲದೆ ಬಾಯಿಗೆ ಬಂದಂತೆ ಎಷ್ಟು ಮಾತಾಡಿದರೇನು ಉಪಯೋಗ? ಎಲ್ಲವೂ ಕಾಲಹರಣ, ವ್ಯರ್ಥ ಶ್ರಮ, ನಿರುಪಯೋಗಿ.

೭೯೮. ವೇದಶಾಸ್ತ್ರಗಮವ | ನೋಡಿದರೆ ಫಲವೇನು |
ವೇಧಿಸುವಚಿತ್ತ ಸಮರಸವಿಲ್ಲದೆಡೆ |
ಬೂದಿಯಲಿ ಹೋಮ ಸರ್ವಜ್ಞ ||

ವೇದ, ಶಾಸ್ತ್ರ ಪುರಾಣ ಪುಣ್ಯಕಥೆಗಳನ್ನು ಕೇವಲ ಓದಿಕೊಂಡರೆ ಉಪಯೋಗವಿಲ್ಲ. ಚಂಚಲವಾದ ಮನಸ್ಸು ಸಿಕ್ಕಸಿಕ್ಕಲ್ಲಿ ಚಲಿಸದಂತೆ ಸ್ವಾಧೀನಪಡಿಸಿಕೊಂಡು ಜ್ಞಾನ ಮನಸ್ಸುಗಳನ್ನು ಸಮನಾಗಿ ಇಟ್ಟುಕೊಳ್ಳದಿದ್ದರೆ ಬೂದಿಯಲ್ಲಿ ಹೋಮ ಮಾಡಿದಂತೆ ಎಲ್ಲವೂ ವ್ಯರ್ಥವಾಗುವದು.

೭೯೯. ಆನೆಗಂಜಿಕೆಯೇಕೆ | ಶ್ವಾನಂಗೆ ಸಭೆಯೇಕೆ? |
ದಾನಿಗೆ ಹೀನತನವೇಕೆ ? ಜ್ಞಾನಿಗೆ |
ಹೀನತನವೇಕೆ ಸರ್ವಜ್ಞ ||

ಅಂಜಿಕೆಯೆಂಬುದು ಆನೆಯಲ್ಲಿರುವದೇ ? ನಾಯಿಯು ಸಭಾ ಸಮಾರಂಭಗಳನ್ನು ಬಲ್ಲದೇ ? ಸ್ವತಃ ದಾನಶೂರನಾದವನು ಶಿರಬಾಗಿ ಹೆರವರಿಗೆ ಕೈಯೊಡ್ಡುವನೇ ? ಅದರಂತೆ ಸುಜ್ಞಾನಿಯಾದವನಲ್ಲಿ ಕೀಳುತನ, ದುರ್ನೀತಿ ದುರ್ನಡತೆಗಳು ಕಾಣಿಸಿಕೊಳ್ಳುವವೇ ? (ಎಂದಿಗೂ ಇಲ್ಲ.)

೮೦೦. ತತ್ವಮಸಿ ಎಂಬುದರ | ಅರ್ಥವನು ಅರಿಯದಲೆ |
ತತ್ತುಸವಿವಿಸುತ ಉಣಗಲಿತ ಶಿವಯೋಗಿ |
ಗೆತ್ತಣದು ಮುಕ್ತಿ ಸರ್ವಜ್ಞ ||

(ತತ್ವಮಸಿ) "ನಾನೇ ಬ್ರಹ್ಮನು, ನಾನೇ ಬ್ರಹ್ಮನಾಗುವೆನು". ಎಂಬ ಸಿದ್ಧಾಂತದ ತಿರಳನ್ನೇ ತಿಳಿದುಕೊಳ್ಳದೇ ಶಿವಯೋಗಿಯು ಮೃಷ್ಟಾನ್ನವನ್ನು ನಾಲಿಗೆಗೆ ರುಚಿ ಮಾಡಿಕೊಳ್ಳುತ್ತ ಉಂಡುಕೊಂಡಿರತೊಡಗಿದರೆ ಅವನಿಗೆ ಮುಕ್ತಿಯು ದೊರಕುವದಾದರೂ ಹೇಗೆ ? (ದೊರಕಲಾರದು.)

೮೦೧. ಯತಿಗೇಕೆಕೋಪ ? ದು | ರ್ಮತಿಗೇಕೆ ಪರತತ್ವ ?
ಪತಿವ್ರತೆಗೇಕೆ ಪರನೋಟ ? ಯೋಗಿಗೆ |
ಸ್ತುತಿ, ನಿಂದೆಗಳೇಕೆ ಸರ್ವಜ್ಞ ||

ಸನ್ಯಾಸಿಯಾದವನು ಸಿಟ್ಟಿಗೇಳಲೇಬಾರದು. ದುಷ್ಟಬುದ್ಧಿಯುಳ್ಳವನಿಗೆ ವೇದಾಂತ ತತ್ವಗಳ ಉಪದೇಶವು ನಿರರ್ಥಕವಾದವುಗಳು. ಪತಿವ್ರತಾ ಶಿರೋಮಣಿಯು ಪರಪುರುಷರನ್ನು ಕಣ್ಣೆತ್ತಿ ನೋಡುವದೇ ಇಲ್ಲ. ಅದರಂತೆ ಯೋಗಿವರೇಣ್ಯನು ಸ್ತುತಿಗೆ ಸಂತೋಷವಾಗುವದಿಲ್ಲ. ನಿಂದಿಸಿದರೆ ಸಿಟ್ಟಿಗೇಳುವದಿಲ್ಲ. ದುಃಖಿಸುವದಿಲ್ಲ.

೮೦೨. ಮಾಳಿಗೆಯ ಮನೆಯಾಗಿ | ಮೇಳವಸತಿಯಾಗಿ |
ಹೋಳಿಗೆ ತುಪ್ಪ ಉಣಲಾಗಿ ಇಂದ್ರಿಯವ |
ತಾಳಿದವಯೋಗಿ ಸರ್ವಜ್ಞ ||

ಬೆಚ್ಚನ್ನ ಮನೆಯು ವಾಸಿಸಲು ಇದ್ದು ತನ್ನ ಇಚ್ಛೆಗೆ ಹೊಂದಿಕೊಂಡಿರುವಂಥ ಹೆಂಡತಿಯು ಮನೆಯಲ್ಲಿದ್ದು ದಿನಾಲು (ಹೋಳಿಗೆ ತುಪ್ಪ ಮೊದಲಾದ) ಮೃಷ್ಟಾನ್ನ ಭೋಜನವಿದ್ದರೂ ಕೂಡ ಕಾಮನನ್ನು ತನ್ನ ಸ್ವಾಧೀನದಲ್ಲಿಟ್ಟುಕೊಂಡು ಜಿತೇಂದ್ರಿಯನಾದವನೇ ನಿಜವಾದ ಯೋಗಿಯು.

೮೦೩. ಬೇಡುವದು ಭಿಕ್ಷೆಯನು | ಮಾಡುವದು ತಪವನ್ನು |
ಕಾಡದೇ ಪರರ ನೋಡುವನು ಶಿವನೊಳಗೆ |
ಕೂಡಬಹುದೆಂದ ಸರ್ವಜ್ಞ ||

ಹೊಟ್ಟೆಗಾಗಿ ಭಿಕ್ಷೆಬೇಡಿ ತಿನ್ನುವದನ್ನೂ ಉಳಿದೆಲ್ಲ ವೇಳೆಯನ್ನು ಕೇವಲ ತಪಸ್ಸು ಮಾಡುವದರಲ್ಲಿಯೇ ಕಳೆಯುವದನ್ನೂ ಯಾರಿಗೂ ಉಪದ್ರವ ಕೊಡದೇ ತನ್ನಂತೆ ಪರರನ್ನು ನೋಡುವದನ್ನೂ ಯಾರು ಮಾಡುವರೋ ಅವರು ಶಿವನಲ್ಲಿ ಐಕ್ಯ ಹೊಂದುವರು.

೮೦೪. ಬೆಣ್ಣೆ ಬೆಂಕಿಯು ನಡುವೆ | ತಣ್ಣಗಿರಬಲ್ಲುದೇ ? |
ಹೆಣ್ಣಿರ್ದಮನೆಗೆ ಎಡತಾಕಿ ಶಿವಯೋಗಿ |
ಮಣ್ಣುಮುಸಿಯಾದ ಸರ್ವಜ್ಞ ||

ಬೆಂಕಿಯು ನಡುವೆ ಬೆಣ್ಣೆಯನ್ನಿಟ್ಟರೆ ಅದು ಕಾದು ಕರಗದೇ ಹಾಗೆಯೇ ತಣ್ಣಗೆ ಉಳಿದೀತೇ ? ಇದೇರೀತಿ ಶಿವಯೋಗಿಯು (ಸಹ) ಹೆಣ್ಣುಗಳಿರುವ ಮನೆಗಳಿಗೆ ಎಡತಾಕಿ ಎಡತಾಕಿ ಭ್ರಷ್ಟನಾಗಿ ಹೋಗುವನು. (ಅಂದಮೇಲೆ ಉಳಿದವರ ಪಾಡೇನು ? ಎಂಬುದು ಸೂಚ್ಯ.)

೮೦೫. ಇಂದ್ರಿಯಂದ ಆಸೆಗಳ | ಬಂಧಿಸದೆ ಕೊಂದವನು |
ಸುಂದರನುಅಕ್ಕು ಸುಖಿಯುಕ್ಕು, ಲೋಕಕ್ಕೆ |
ಚಂದಿರನು ಅಕ್ಕು ಸರ್ವಜ್ಞ ||

(ಪಂಚಕರ್ಮೇಂದ್ರಿಯ ಪಂಚಜ್ಞಾನೇಂದ್ರಿಯ ಮತ್ತು ಮನಸ್ಸು ಇವು ಮೂರು ಮನುಜನ ಇಂದ್ರಿಯಗಳು) ಇವುಗಳನ್ನು ಸ್ವಾಧೀನದಲ್ಲಿಟ್ಟು ಕೊಳ್ಳುವದಕ್ಕಿಂತ ಪೂರ್ಣ ತೋರದೇ ಬಿಟ್ಟಂಥವನು ಅತ್ಯಂತ ಆಕರ್ಷಕನು, ಸುಖಿಯಾಗಿ ಬಾಳುವನು, ಇಡೀ ಜಗತ್ತಿಗೆ ಆದರ್ಶ ಪ್ರಾಯನಾಗಿ ಸುಖ ವನ್ನು ಬೀರುವನು.

೮೦೬. ವೈರಾಗ್ಯಬಲದಿ ಸಂ | ಸಾರ ಸಾಗರದೊಳಗೆ |
ಆರಾರು ಧೀರರೀಜುವರೋ ಅವರಿಲ್ಲ |
ಪಾರಾಗಿಸಿಗನು ಸರ್ವಜ್ಞ ||

ಸಂಸಾರದಲ್ಲಿ (ಹೆಂಡರು ಮಕ್ಕಳನ್ನು ಕೂಡಿಕೊಂಡು ಇದ್ದರೂ ಸಹ) ಎಲ್ಲವನ್ನೂ ತ್ಯಾಗಿಯಂತೆ ನೋಡುತ್ತಲಿದ್ದು ಈ ಸಂಸಾರ ಸಾಗರ ವನ್ನು ಧೀರತನದಿಂದ ಯಾರಾರು ಈಸಿ ಪಾರಾಗುವರೊ ಅವರು ಪುನಃ ತಿರುಗಿ ಬರುವದಿಲ್ಲ.

೮೦೭. ಸಿದ್ಧಾಂತಯೋಗದ | ಸುದ್ದಿಯುನು ತಿಳುಹುವನು |
ನಿದ್ರೆ, ವಾಸನೆ, ಹುಸಿಗಳನು ತೊರೆದಿಹನೆ |
ಸಿದ್ಧಾಂತಯೋಗಿ ಸರ್ವಜ್ಞ ||

ಸಿದ್ಧಾಂತಯೋಗಿಯೆಂದರೇನು ಅವನಾರು ಎಂಬುದನ್ನು ಹೇಳುವೆ ನೆಂದು ಸರ್ವಜ್ಞ ಕವಿಯು ಹೇಳಿದ್ದಾನೆ. ನಿದ್ರೆಯನ್ನು ತೊರೆದು ಸದಾ ಶಿವಧ್ಯಾನದೊಳಿದ್ದವನು, ಕಾಮಕ್ರೋಧಾದಿಗಳನ್ನು ಜಯಿಸಿದಂಥವನು ಸುಳ್ಳು ನಡೆನುಡಿಗಳನ್ನೂ ಆಚರಿಸದವನೇ ಸಿದ್ಧಾಂತ ಯೋಗಿಯು.

೭೦೮. ಅರವಟಿಗೆಯುದಕವನು । ಪರರ ಕೈಯನ್ನವನು ।
ಪರನಿಂದೆ ಹಿಂಸೆ, ಸ್ತ್ರೀಯರನು ಬಿಟ್ಟಾತ ।
ವರಯೋಗಿ ಕಾಣೋ ಸರ್ವಜ್ಞ ॥

ಯಾವ ಯೋಗಿಯು ಅರವಟ್ಟಿಗೆಯ ನೀರನ್ನು ಕುಡಿಯುವದಿಲ್ಲವೋ, ಯಾವನು ಹೆರವರು ಮಾಡಿದ ಅನ್ನವನ್ನು ಉಣ್ಣುವದಿಲ್ಲವೋ, ಯಾವನು ಯಾರನ್ನು ಕಣ್ಣೆತ್ತಿ ನಿಂದಿಸುವದಿಲ್ಲವೋ ದುಃಖಿಸುವದಿಲ್ಲವೋ ಪರಸ್ತ್ರೀಯನ್ನು ಕಣ್ಣೆತ್ತಿ ನೋಡುವದಿಲ್ಲವೋ ಅವನೇ 'ವರಯೋಗಿ'

೭೦೯. ವೇಷಗಳ ಧರಸೇನು ? । ದೇಶಗಳ ತಿರುಗೇನು ? ।
ದೋಷಗಳ ಹೇಳಿ ಫಲವೇನು ? ಮನಸಿನ ।
ಆತೆಬಿಡದರ ಸರ್ವಜ್ಞ ॥

ಮನಸ್ಸಿನಲ್ಲಿಯ (ಲೌಕಿಕ ಸುಖದ) ಆಶೆ ಆಕಾಂಕ್ಷೆಗಳನ್ನು ಬಿಡದೇ ಯಾವ ವೇಷ ಧರಿಸಿದರೇನು ಫಲ ? ಎಷ್ಟು ತೀರ್ಥಯಾತ್ರೆಗಳನ್ನು ತಿರುವಿದ ರೇನು ಪ್ರಯೋಜನ ? ಹೆರವರಿಗೆ ದೋಷಗಳನ್ನು ಹೇಳಿ ಅವರನ್ನು ತಿದ್ದುವ ದರಿಂದೇನು ಸುಖ ? (ಎಲ್ಲವೂ ವ್ಯರ್ಥ ಎಂದರ್ಥ)

೭೧೦. ಕತ್ತೆಬೂಧಿಲಿ ಹೊರಳಿ । ಮತ್ತೆಯತಿಯುಪ್ಪುದೇ ।
ತತ್ವವರಿಯುದಲೆ ಭಸಿತವಿಟ್ಟವಶುದ್ಧ ।
ಕತ್ತೆಯುಂತೆಂದ ಸರ್ವಜ್ಞ ॥

ಕತ್ತೆಯು ಬೂದಿಯಲ್ಲಿ ಹೊರಳಾಡಿ ನಾನೂ ಭಸ್ಮ ಧರಿಸಿದ್ದೇನಾದ್ದ ರಿಂದ ಸಾಧು' ಎಂದರೆ ಅದು ಸಾಧು ಆಗಬಲ್ಲದೇ ? ಅದರಂತೆ ವೇದಾಂತ ತತ್ವಜ್ಞಾನಗಳನ್ನರಿಯದೇ ಕೇವಲ ಮೈಗೆಲ್ಲ ಭಸ್ಮ ಬಳೆದುಕೊಂಡರೆ ಅವ ನೊಬ್ಬ ಶುದ್ಧ ಕತ್ತೆಯಂದೇ ಗ್ರಹಿಸಬೇಕು.

೭೧೧. ಅತ್ತಿಮರತಾಕಾಯಿ । ಹೊತ್ತಿರ್ದತೆರನೆಂತೆ ।
ತತ್ವಬೇಧವನು ಅರಿಯುದಲೇ ರುದ್ರಾಕ್ಷಿ ।
ಹೊತ್ತುಫಲವೇನು ಸರ್ವಜ್ಞ ॥

ಅತ್ತಿಮರದ ತುಂಬೆಲ್ಲ (ಬೊಡ್ಡೆಗೆ ಸಹ) ಅತ್ತಿಕಾಯಿ ಆಗಿರುತ್ತವೆ. ವೇದಾಂತ ತತ್ವಜ್ಞಾನದ ಬೇಧಗಳನ್ನು ತಿಳಿದುಕೊಳ್ಳದೇ ಅತ್ತಿ ಗಿಡದಂತೆ ಮಾನವನು ರುದ್ರಾಕ್ಷಗಳನ್ನು ಮೈತುಂಬ ಹೊದ್ದುಕೊಂಡರೆ ಫಲವಿಲ್ಲ.

೬೧೨. ದಂಡಕೋಲಿನ ತುದಿಗೆ | ಹಿಂಡುಕೌಪಪಕಟ್ಟಿ |
ಹುಂಡೆಯರ ಕಂಡು ಮಿಡುಕುವ ಯೋಗಿಯು |
ಮುಂಡೆಬೋಳೇಕೆ ? ಸರ್ವಜ್ಞ ||

ದಂಡಕಾಷ್ಟದ ( ಸನ್ಯಾಸಿಗಳು ಹಿಡಿಯುವ ಕೋಲು ) ತುದಿಗೆ ಲಂಗೋಟಿಗಳ ಗಂಟನ್ನು ಕಟ್ಟಿ ಹೆಂಗಸರನ್ನು ಕಂಡಾಗ (ಅಯ್ಯೋ ನನಗಿಲ್ಲವಲ್ಲಾ) ಎಂದು ಮಿಡುಕುವ ಯೋಗಿಯು ತಲೆಯನ್ನು ಬೋಳಿಸಿಕೊಂಡು ಸನ್ಯಾಸಿಯೇಕಾಗಬೇಕು ?

೬೧೩. ಸಾಧುಸಿದ್ಧರು ಎಂದು | ಕೋದಕಾವಿಯ ಹೊದೆದು |
ಮೇಧಿನಿಯಮೇಲೆ ವಿಷಯಕ್ಕೆ ತಿರುಗುವರು |
ಮಾದಿಗರುನೋಡ ಸರ್ವಜ್ಞ ||

ಒದ್ದಿಮಾಡಿದ ಕಾವೀ ಬಟ್ಟೆಯ (ಲಂಗೋಟಿ)ನ್ನು ಧರಿಸಿ ಇಡೀ ದೇಶದ ಮೇಲೆ ತಿರುಗುತ್ತ ಸದಾ ವಿಷಯಲಂಪಟರಾಗುವವರು ಸಾಧು ಸಿದ್ಧರಲ್ಲ. ಅವರು ಕೇವಲ ಮಾದಿಗರು, ಹೊಲೆಯರೆಂದು ತಿಳಿಯಬೇಕು.

೬೧೪. ಎಲ್ಲ ಆಶೆಯ ಬಿಟ್ಟ | ರಿಲ್ಲಿಯೇ ಕೈಲಾಸ |
ಎಲ್ಲವನು ಬಯಸಿ ಭ್ರಮಿಸಿದಡೆನರಕತಾ |
ನಿಲ್ಲಿಯೇ ನೋಡ ಸರ್ವಜ್ಞ ||

ಎಲ್ಲ (ಲೌಕಿಕ ಸುಖದ) ಆಶೆ ಆಕಾಂಕ್ಷೆಗಳನ್ನು ಬಿಟ್ಟವನಿಗೆ ಇಲ್ಲಿಯೇ ಕೈಲಾಸ ಸುಖದ ಭೋಗವು ಸಿಗುವದು. ಆದರೆ ಅವೆಲ್ಲ ಕಾಮಭೋಗದ ಆಶೆಗಳನ್ನು ಬಯಸಿ ಹುಚ್ಚನಂತೆ ಹುಡುಕುವವಗೆ ಇಲ್ಲಿಯೇ ನರಕವು ಸಿದ್ಧವಾಗಿರುವದು.

೬೧೫. ಮರಣವೆಂಬುದುಸತ್ಯ | ಹರನಾಣೆ ಹುಸಿಯಲ್ಲ |
ತರುಣಿಯರಿಗಿರಿಸೆ ಪರರುಬರದಿಂದ |
ವರದಾನವೀಯೋ ಸರ್ವಜ್ಞ ||

ಪ್ರತಿಯೊಬ್ಬನಿಗೂ ಸಾವು ತಪ್ಪಿದ್ದಲ್ಲ. ಇದು ಸತ್ಯ; ಸುಳ್ಳುಮಾತಲ್ಲ. ಇದಕ್ಕೆ ಪರಮೇಶ್ವರನ ಆಣೆ. ಆದುದರಿಂದ ತರುಣಿಯರಿಗೆ ದ್ರವ್ಯವನ್ನು ಇರಿಸುತ್ತ ಹೋದರೆ ಅದನ್ನು ಅವಳು ಭೋಗಿಸುವದಿಲ್ಲ, ಮುಂದಿಯ ಪಾಲಾಗುವದು. ಕಾರಣ ಶ್ರೇಷ್ಠವಾದ ಪುಣ್ಯದ ಕೆಲಸವಾದ ದಾನವನ್ನು ಮಾಡು.

೬೧೬. ಕೋಟೆಕದನಕೆ ಲೇಸು | ಬೇಟೆಯರಸಗೆ ಲೇಸು |
ನೀಟಾದ ಹೆಣ್ಣು ತರಲೇಸು, ಸುಜನರೊಡ |
ನಾಟವೇಲೇಸು ಸರ್ವಜ್ಞ ||

ಯುದ್ಧದ ಪ್ರಸಂಗಗಳಲ್ಲಿ ಕೋಟಿ ಕೊತ್ತಲಗಳು ಅವಶ್ಯಕವು. ರಾಜನೆಂಬುವವನಿಗೆ ಬೇಟೆಯಾಡುವದು ಧರ್ಮವು. ನೆಟ್ಟಗೆ ನಿಂತ (ಡೊಂಕಬಾಗದೇ ಇದ್ದ) ಹೆಣ್ಣನ್ನು ಲಗ್ನವಾದರೆ ಸುಖಿಸುವನು. ಅದರಂತೆ ಒಳ್ಳೇ ಜನರ ಗೆಳೆತನವು ಸರ್ವಶ್ರೇಷ್ಠವಾದುದು.

೬೧೭. ಅರಿವುಇರದಿರೆ ಹೊಲ್ಲ | ಕರಿಯುಬೆದರಲು ಹೊಲ್ಲ |
ಅರಿಯದೂರೊಳಗೆ ಇರಹೊಲ್ಲ | ದೊರೆಗಳಿಗೆ |
ಸರಿಮಾತುಹೊಲ್ಲ ಸರ್ವಜ್ಞ ||

(ಮಾನವನ ಮೈಮೇಲೆ) ಎಚ್ಚರವಿಲ್ಲದೆ ಮಾಡುವ ನಡೆ-ನುಡಿಗಳು ಸರಿಯಲ್ಲ. ಆನೆಯು ಹೆದರಿದರೆ ಇಡೀ ಊರನ್ನೇ (ಜಿಗಿದಾಟದಿಂದ) ಹಾಳುಮಾಡುವದು. ಪರ ಊರಲ್ಲಿ ವಾಸಿಸುವದು ತರವಲ್ಲ. ಅರಸರಿಗೆ ಎದುರು ನುಡಿಯುವದು ಸರ್ವಥಾ ಅಯೋಗ್ಯವಾದದ್ದು.

೬೧೮. ನೆತ್ತವಿತ್ತಕೆಬಲವು | ಒತ್ತೆಸೂಳೆಗೆ ಬಲವು |
ಕತ್ತಲೆಯು ಬಲವು ಕಳ್ಳಂಗೆ, ಅರಸಿಂಗೆ |
ಸತ್ಯವೇಬಲವು ಸರ್ವಜ್ಞ ||

ದುಡ್ಡು ಇದ್ದರೆ ನೆತ್ತದಾಟಕ್ಕೆ ಕಳೆ ಬರುವದು. ಸೂಳೆಯಲ್ಲಿ ಒತ್ತಿಯಿಟ್ಟರೆ ಅದು ವಾಪಸು ಬರಲಾರದು. ಕತ್ತಲೆಯು ಕಳ್ಳರಿಗೆ ಕಳವು ಮಾಡಲು ಬಹಳ ಅನುಕೂಲವಾಗುವದು. ಅರಸು ಸತ್ಯಸಂಧನಾಗಿದ್ದರೆ ಲೋಕಕ್ಕೆ ಭೂಷಣವು.

೬೧೯. ನಚ್ಚಿದಂತರಸಿನ | ಇಚ್ಛೆಯಂತಿರುವುದದು |
ಬಚ್ಚೊತ್ತು ತಪ್ಪಿನಡೆದಿಹರೆ ಹೊತ್ತಾರೆ |
ಕಿಚ್ಚು ಕಾದಂತೆ ಸರ್ವಜ್ಞ ||

ಒಲಿದ ರಾಜನ ಸಂಗಡ ಅವನ ಮನದ ಒಲುಮೆಯನ್ನರಿತುಕೊಂಡೇ ಇರಬೇಕು. ಅಕಸ್ಮಾತ್ತಾಗಿ ಮೈಮರೆತು ಅವನ ಮನದ ವಿರುದ್ಧ ನಡೆದರೆ ಪ್ರಚಂಡವಾದ ಅಗ್ನಿಯಲ್ಲಿ ಹಾರಿಕೊಂಡು ಕಾಯಿಸಿಕೊಂಡಂತೆ. (ಅಂದರೆ ಸುಟ್ಟುಕೊಂಡು ಸಾಯುವದು ಖಂಡಿತ.)

೮೨೦. ಅರಸೊಲಿದು ನಡೆದರೆ | ಸಿರಿಯುಕ್ಕು ಜಗವಕ್ಕು |
ಕರಿ, ತುರಗ, ಬಲವು ಪಿರಿದಕ್ಕು ಮುನಿದರೆ |
ನರನಾಶವಕ್ಕು ಸರ್ವಜ್ಞ ||

ಅರಸನು ಪ್ರೀತನಾಗಿ ಪ್ರಸನ್ನನಾದರೆ ಸಿರಿವಂತಿಕೆಯನ್ನು ಕೊಡುವನು. ರಾಜ್ಯವನ್ನು ಕೊಡುವನು, ಆನೆ, ಕುದುರೆ, ಕಾಲಾಳುಗಳನ್ನು (ಸೈನ್ಯವನ್ನು) ಕೊಡುವನು. ಒಂದುವೇಳೆ ಅವನು ಸಿಟ್ಟಿಗೆದ್ದರೆ ಮಾನವನನ್ನು ಕೊಂದೇಹಾಕಿಬಿಡುವನು.

೮೨೧. ಬೆಕ್ಕಲಿಯುಗೂಬೆಯೂ | ಚಿಕ್ಕಾಡಿ ತಗಣಿಯೂ |
ರಕ್ಕಸ, ಕಳ್ಳ ಜಾರರುರೆ ಕತ್ತಲೆಯ |
ಮಕ್ಕಳೆಂದರಿಗು ಸರ್ವಜ್ಞ ||

ಬೆಕ್ಕು, ಇಲಿ, ಗೂಗೆ, ಚಿಕ್ಕಾಡುಗಳು, ತಗಣಿ, ರಾಕ್ಷಸರು, ಕಳ್ಳರು ಹಾದರ ಮಾಡುವ ಸ್ತ್ರೀ ಪುರುಷರೀರ್ವರು, ಇವರೇ ಮೊದಲಾದವರು ಕತ್ತಲೆಯ ಮಕ್ಕಳು. (ಅಂದರೆ ರಾತ್ರಿಯಲ್ಲಿಯೇ ಇವರ ಚಟುವಟಿಕೆಗಳಿರುವದರಿಂದ ಕತ್ತಲೆಯನ್ನೇ ಅವರು ಪ್ರೀತಿಸುವರು.)

೮೨೨. ನರಹತ್ಯೆವೆಂಬುದು | ನರಕದ ನಡುಮನೆಯು |
ಗುರು, ಭ್ರೂಣ ಹತ್ಯೆ, ಸ್ತ್ರೀಹತ್ಯೆ ಮಾಡಿದವನ |
ಇರವರೌರವವು ಸರ್ವಜ್ಞ ||

ಮನುಷ್ಯನನ್ನು ಕೊಂದರೆ ಆ ಪಾಪಿಯನ್ನು ನರಕದ ನಡುವೆ ಒಗೆಯುವರು. ಗುರುಹತ್ಯಾ, ಶಿಶುಹತ್ಯಾ, ಗರ್ಭಸ್ರಾವ, ಸ್ತ್ರೀಹತ್ಯಾ ಮೊದಲಾದ ಪಾತಕಿಗಳಿಗೆ ರೌರವ ನರಕವು ಕಟ್ಟಿಟ್ಟದ್ದು.

೮೨೩. ಬಲವಂತರಾದವರು | ಕುಲಹದಿಂಕೆಟ್ಟಿಹರು |
ಬಲವಂತಬಲಿಯು ದುರ್ಯೋಧನಾದಿಗಳು |
ಛಲದಲುಳಿದಿಹರೇ ಸರ್ವಜ್ಞ ||

ಬಲಾಢ್ಯರಾದವರೆಲ್ಲ ಜಗಳಾಡಿ (ಯುದ್ಧವಾಡಿ) ಹಾಳಾಗಿ ಹೋದರು. ಉದಾ:- ಮಹಾ ಬಲಶಾಲಿಯಾದ ಚಕ್ರವರ್ತಿ, ದುರ್ಯೋಧನರೇ ಮೊದಲಾದವರು ಹಟಕ್ಕೆ ಬಿದ್ದು ಕಾದಾಡಿದರೂ (ಉಳಿದರೇ ?) ಹಾಳಾಗಿ ಹೋದರು.

೮೨೪. ಒಂದು ಒಂಬತ್ತುತಲೆ | ಸಂದತೋಳಿಪ್ಪತ್ತು |
ಬಂಧುಗಳನೆಲ್ಲ ಕೆಡಿಸಿತ್ತು, ಪತಿವ್ರತೆಯು |
ತಂದಕಾರಣದಿ ಸರ್ವಜ್ಞ ||

ಓರ್ವ ಪತಿವ್ರತಾ ಸ್ತ್ರೀ (ಸೀತೆ) ಯನ್ನು ತಂದ ಒಂದೇ ಕಾರಣಕ್ಕಾಗಿ ಹತ್ತು ತಲೆಯುವನೂ ಇಪ್ಪತ್ತು ತೋಳಿನವನೂ ಆದ ರಾವಣನು ತಾನು ಸಾಯುವದಲ್ಲದೇ ಬಂಧು-ಬಳಗದವರನ್ನೆಲ್ಲ ಸಾವಿಗೀಡು ಮಾಡಿದನು.

೮೨೫. ತುರಕನ ನೆರೆಹೊಲ್ಲ | ಹರದನಕೆಳೆಹೊಲ್ಲ |
ತಿರಿಗೂಳನಟ್ಟು ಉಣಹೊಲ್ಲ, ಪರಸತಿಯು |
ಸರಸವೇಹೊಲ್ಲ ಸರ್ವಜ್ಞ ||

ಮುಸಲ್ಮಾನರ ನೆರೆಹೊರೆಯಲ್ಲಿ ಸಂಸಾರ ಹೂಡಿಕೊಂಡಿರಬಾರದು. ವ್ಯಾಪಾರಸ್ಥನು ಗೆಳೆತನಕ್ಕೆ (ವಿಸ್ವಾಸ) ಯೋಗ್ಯನಲ್ಲ. ತಿರಕೊಂಡು ಬಂದು ತಿನ್ನುವದೂ ಸ್ಥಿರವಲ್ಲ. ಅದರಂತೆ ಪರಸ್ತ್ರೀಯರೊಡನೆ ಸರಸಸಲ್ಲಾಪಗಳು ಅತ್ಯಂತ ಕೆಡಕು. (ಘಾತಕವು.)

೮೨೬. ಹಣಗಣವು ಬಲವುಳ್ಳ | ರಣಧೀರರಾವಣನ |
ತೃಣವೆಂದು ಬಗೆದ ಪತಿವ್ರತೆ ಸೀತೆಗೆ |
ಎಣೆಯಾರು ಹೇಳು ಸರ್ವಜ್ಞ ||

ಅಗಣಿತ ಸಿರಿ ಸಂಪತ್ತುಳ್ಳಂಥ ಪಾಂಡಿತ್ಯವುಳ್ಳ ಮಹಾ ಬಲಶಾಲಿಯಾದ ರಣದಲ್ಲಿ ಅಸಾಮಾನ್ಯ ಶೂರನಾದ ರಾವಣನನ್ನು ಪತಿವ್ರತಾ ಶಿರೋಮಣಿ ಸೀತೆಯು ಒಂದು ಹುಲ್ಲು ಕಡ್ಡಿಗೆ ಸಮಾನವೆಂದು ಬಗೆದಳೆಂದಮೇಲೆ ಆವಳಿಗೆ ಸಮಾನರಾರು ಈ ಜಗತ್ತಿನಲ್ಲಿ.

೮೨೭. ರಾಗಯೋಗಿಗೆ ಹೊಲ್ಲ | ಭೋಗ ರೋಗಿಗೆ ಹೊಲ್ಲ |
ಓಗರವು ಎಣ್ಣೆ ಉಣಹೊಲ್ಲ, ಪರನಿಂದೆ |
ಆಗಲುಹೊಲ್ಲ ಸರ್ವಜ್ಞ ||

ಕಾಮ ಪ್ರೇಮಗಳನ್ನು ಯೋಗಿಯು ಮಾಡಬಾರದು. ರೋಗಿಯಾದವನು ಎಲ್ಲತರದ ಭೋಗವನ್ನು ಉಪಯೋಗಿಸಲು ಅಸಮರ್ಥನು. ಅನ್ನದಲ್ಲಿ ಎಣ್ಣೆ ಬೆರೆಸಿ ಉಣ್ಣಲು ಸಾಧ್ಯವಿಲ್ಲ. ಪರನಿಂದೆಯನ್ನಂತೂ ಯಾರೂ ಮಾಡಬಾರದು.

೮೨೮. ಉದ್ಧುರುಟಿಟು ಮಾತಾಡಿ | ಇದ್ದುದನು ಹೋಗಾಡಿ |
ಉದ್ದುದ್ದಮರದ ತುದಿಗೇರಿ ತಲೆಯೂರಿ |
ಬಿದ್ದು ಸತ್ತಂತೆ ಸರ್ವಜ್ಞ ||

ಯಾವಾಗಲಾದರೂ ಉದ್ಧಟವಾದ ಬಿರುಸು ಮಾತುಗಳನ್ನಾಡುತ್ತಲೂ ಗರ್ವದಿಂದ ಇದ್ದುದನ್ನು (ದೊಡ್ಡಸ್ಥಿಕೆಗಾಗಿ) ಕಳೆದುಕೊಳ್ಳುತ್ತಲೂ ಇದ್ದರೆ ಅಂಥವನು ಎತ್ತರವಾದ ಗಿಡದ ತುದಿಯತನಕ ಹತ್ತಿ ತಲೆ ಕೆಳಗೆ ಮಾಡಿ ಹಾರಿಕೊಂಡಂತೆ. (ಅಂದರೆ ಸರ್ವನಾಶ ಖಂಡಿತ. ಎಂದರ್ಥ.)

೮೨೯. ನೀತದೇಶದಮಧ್ಯ | ನೀತಿಯಮನೆಯಿಹುದು |
ಪಾತರಿಕಗಹುದು ಸೆರೆಮನೆಯು, ಅರಮನೆಯು |
ನೀತರಿಗದೆಂಪ ಸರ್ವಜ್ಞ ||

ಮನಸ್ಸಿಗೆ ಆಧೀನವಾದಂಥ ಈ ಶರೀರದ ಮಧ್ಯದಲ್ಲಿ ಸುನೀತಿ ಯೆಂಬ ಮನೆಯಿರುವದು. ನೀಚರಿಗೆ ಪಾಪಿಗಳಿಗೆ ಜಗಳದಲ್ಲಿ ಸೆರೆಮನೆ ಕಾದಿರುವವು. ಪುಣ್ಯಾತ್ಮರಿಗೆ ಪವಿತ್ರ ಮನಸ್ಕರಿಗೆ ಅರಮನೆಗಳು ಸ್ವಾಗ ತಿಸುವವು.

೮೩೦. ಮುನಿವಂಗೆ ಮುನಿಯದಿರು | ಕನಿವಂಗೆ ಕನಿಯದಿರು |
ಮನಸಿಜಾರಿಯನು ಮರೆಯದಿರು, ಶಿವಕೃಪೆಯು |
ಘನಕೆ ಘನವಕ್ಕು ಸರ್ವಜ್ಞ ||

ಯಾರು ನಿನ್ನ ಮೇಲೆ ಸಿಟ್ಟಾಗುವರೋ ಅವರ ಮೇಲೆ ತಿರುಗಿ ಸಿಟ್ಟಿಗೇಳಬೇಡ, ಜಗಳಾಡಲು ಬಂದವರೊಡನೆ ಜಗಳಾಡಬೇಡ. ಸರಸ ದಿಂದಿರು ಪರಮೇಶ್ವರನನ್ನು ಎಂದೂ ಮರೆಯದೇ ಬಾಳು. ಶಿವನ ಕೃಪೆಯಿಂದ ಅತ್ಯುನ್ನತವಾದ ಪದವಿಗಿಂತ ಶ್ರೇಷ್ಠ ಪದವಿಯು ಸಿಕ್ಕು ನೀನು ಸುಖಿಸುವಿ.

೬೩೧. ಮುನಿವರನು ನೆನೆಯುತಿರು | ವಿನಯದಲಿ ನಡೆಯುತಿರು |
ವನಿತೆಯರ ಬಲೆಗೆ ಸಿಲುಕದಿರು ಸಿರಿಸುಖವು |
ಮನಸದಣಿಯಲಕ್ಕು ಸರ್ವಜ್ಞ

ಯಾರು ನಿನ್ನ ಮೇಲೆ ಸಿಟ್ಟಿಗೇಳುವರೋ ಅವರೆಲ್ಲರನ್ನೂ ನೆನೆಯುತ್ತಿರು. ವಿನಯಪೂರ್ವಕವಾಗಿ ಎಲ್ಲರೊಡನೆ ನಡಕೊಂಡಿರು. ಹೆಂಗಸರ ಬಲೆಗೆ ಸಿಲುಕದೇ ಎಚ್ಚರದಿಂದಿರು. ಅಂದರೆ ನಿನಗೆ ಸಂಪತ್ತು ಸುಖವು ಯಥೇಷ್ಟವಾಗಿ ತೃಪ್ತಿಯಾಗುವಷ್ಟು ಸಿಗುವದು.

೬೩೨. ಕಂಡಂತೆ ಹೇಳಿದರೆ | ಕೆಂಡವಾಗುವರು ಭೂ |
ಮಂಡಲದೊಳಗೆ ಕಂಡಿತವನಾಡುವರ |
ಕಂಡಿಹುದೆ ಕಷ್ಟ ಸರ್ವಜ್ಞ ||

ಪ್ರತ್ಯಕ್ಷವಾಗಿ ಕಣ್ಣಿಗೆ ಕಂಡದ್ದನ್ನು ನುಡಿದರೆ ಜನರು ಕೆಂಡದಂತೆ ಕಿಡಿಕಿಡಿಯಾಗಿ ಸಿಟ್ಟಾಗುವರು. ಆದರಿಂದ ಈ ಭೂಮಂಡಲದಲ್ಲಿ (ಜಗತ್ತಿನಲ್ಲಿ ಕಂಡದ್ದನ್ನಾಡುವವರನ್ನು ಕಾಣುವದೇ ಕಷ್ಟ. (ಸತ್ಯ ಮಾತಾಡುವವರು ಇಲ್ಲವೇ ಇಲ್ಲ.)

೬೩೩. ಎಂತಿರಲು ಪರರನೀ | ಮುಂಡೆನಂಬಲುಬೇಡ |
ಕುಂತಿಹೆಮ್ಮಗನ ಕೊಲಿಸಿದಳು, ಮಾನವರ |
ನೆಂತುನಂಬುವದು ಸರ್ವಜ್ಞ ||

ಅದೆಂತಹದೇ ಇರಲಿ ವಿಧವೆಯರ ಮಾತು ಎಂದೂ ನಂಬಬೇಡ. ಸ್ವತಃ ಕುಂತಿದೇವಿಯು ತನ್ನ ಹಿರಿಯ ಮಗ (ಕರ್ಣ)ನನ್ನು ಕೊಲ್ಲಿಸಿದಳು. ಅಂದ ಮೇಲೆ ಉಳಿದ ಮನುಷ್ಯರ ಪಾಡೇನು ?

೬೩೪. ನಿಶ್ಚಯವ ಬಿಡದೊಬ್ಬ | ರಿಚ್ಛೆಯಲಿ ನುಡಿಯದಿರು |
ನೆಚ್ಚಿ ಒಂದೂರೊಳಿರದಿರು ಶಿವ, ನಿನ್ನ |
ಇಚ್ಛೆಯೊಳಗಿಹನು ಸರ್ವಜ್ಞ ||

ಹೆರವರನ್ನು ಸಂತೋಷಪಡಿಸಲು ಅಸತ್ಯ ಮಾತಾಡದೇ ಸದಾ ಸತ್ಯವನ್ನೇ ಅಂಟಕೊಂಡಿರಬೇಕು, ವಿಶ್ವಾಸವಿಟ್ಟು ಒಂದೇ ಊರಲ್ಲಿ ಸ್ಥಾಯೀಯಾಗಿ ನೆಲಿಸಬಾರದು. ಅಂದರೆ ಪರಮೇಶ್ವರನು ಅಂಥವನಿಗೆ ಒಲಿದು ಬಿಡುವನು.

೮೩೫. ಕೇಳುವವರಿದ್ದಿಹರೆ | ಹೇಳುವದು ಬುದ್ಧಿಯನು |
ಕೋಳದಲಿ ಬಿದ್ದು ನರಳುವಗೆ ಬುದ್ಧಿಯನು |
ಹೇಳಿ ಫಲವೇನು ಸರ್ವಜ್ಞ ||

ಕೇಳುವವರಾವರೂ ಸಿದ್ಧರಾದರೆ ಬುದ್ಧೀ ಮಾತುಗಳನ್ನು ಹೇಳುವದು ಸೊಗಸು. ಕಾರಾಗ್ರಹದಲ್ಲಿ ಬಿದ್ದು ನರಳುವಂಥವನಿಗೆ ಬುದ್ಧಿ ಮಾತುಗಳನ್ನು ಹೇಳಿ ಏನು ಪ್ರಯೋಜನ? (ಅವನು ಈಗಲೇ ಕೆಟ್ಟ ಹಾದಿ ಹಿಡಿದು ಶಿಕ್ಷಿತನಾಗಿದ್ದಾನೆ.)

೮೩೬. ತತ್ವಮಸಿಹುಸಿದಿಹರೆ | ಉತ್ತಮರು ಕುಸಿದಿಹರೆ |
ನಿತ್ಯರುಕೇಡು ಬಗೆದಿಹರೆ ಸತ್ಯವ |
ನೆತ್ತಲರಸುವದು ಸರ್ವಜ್ಞ ||

'ತತ್ವಮಸಿ' ಎಂಬ (ನಾನೇ ಬ್ರಹ್ಮ) ಸಿದ್ಧಾಂತವು ಸುಳ್ಳೆಂದು ಅನ್ನತೊಡಗಿದರೆ ಒಳ್ಳೇ ನೀತಿ ನಡಾವಳಿಯುಳ್ಳವರು ನಿಸ್ಸತ್ವವುಳ್ಳವರಾದರೆ ಸತ್ಯವನ್ನು ಎಲ್ಲಿ ಹುಡುಕಬೇಕಪ್ಪ (ಎಲ್ಲವೂ ಪಾಪಮಯವಾಗಿಬಿಡುವದುಎಂದರ್ಥ.)

೮೩೭. ಬಡವನಿದ್ದುದನಾಡೆ | ಕಡೆಗೆ ಪೋಗೆಂಬುವರು
ಒಡವೆಯುಳ್ಳವರು ಸುಡುಗಾಡ ನುಡಿದರೂ ||
ಪೊಡವಿಯೊಳಗಧಿಕ ಸರ್ವಜ್ಞ ||

ಬಡವನು ಇದ್ದುದನ್ನಿದ್ದಂತೆ ನುಡಿದರೂ ಕೂಡ "ಅತ್ತ ಹೋಗಪ್ಪ ಏನು ನಿನ್ನ ತ್ರಾಸು" ಎಂದು ಅಂದು ತಿರಸ್ಕರಿಸುವರು. ಸಿರಿವಂತರು ಅಪದ್ಧವನ್ನಾಗಲೀ ಅಮಂಗಲ, ಅವಿವೇಕದ ನುಡಿ ನುಡಿದರೂ ಕೂಡ "ಜಗದೊಳಗೆ ಈವರೆಗೆ ಇಂಥ ನುಡಿಯನ್ನು ಯಾರೂ ಆಡಲಿಲ್ಲ" ಎಂದು ಹೊಗಳುವರು.

೮೩೮. ಯತಿಯತಪಗಳು ಕೆಡಗು | ಪತಿಯಪ್ರೇಮವು ಕೆಡಗು |
ಮತಿವಂತರಿದ್ದು ಗತಿಗೆಡಗು ರತಿದೇವಿ |
ಶ್ರುತಿಯ ಕೇಳಿದರೆ ಸರ್ವಜ್ಞ ||

ರತಿದೇವಿಯ (ಹೆಣ್ಣಿನ ಬಗ್ಗೆ ಇದ್ದ ವಾಸನಾ, ಮೋಹ) ಗಾಳಿ, ಅಥವಾ ಮೋಹಕ್ಕೆ ಯತಿಯು ಒಳಗಾದರೆ ಅವನ ತಪಸ್ಸು ಹಾಳಾಗುವದು ಪತಿಯು ಒಳಗಾದರೆ ತನ್ನ ಧರ್ಮಪತ್ನಿಯಲ್ಲಿದ್ದ ಪ್ರೇಮ ತೊರೆದು ಮತ್ತೊಬ್ಬಳನ್ನು ಬೆನ್ನಟ್ಟುವನು. ಬುದ್ಧಿವಂತರು ಜ್ಞಾನಿಗಳ ರೀತಿ ನಡಾವಳಿಗಳು ಕೂಡ ಕೆಟ್ಟು ಹೋಗುವವು.

೮೩೯. ಮೆರೆಸುವದು ಅನ್ಯರನು । ಮರೆಸುವದು ತನ್ನವರ ।
ಇರಿಸುವದು ತನ್ನ ಇದಿರನು, ಹೊನ್ನಿನ ।
ತವರನೋಡೆಂದ ಸರ್ವಜ್ಞ ॥

ಸಿರಿವಂತನಾದವನು ಯಾರಾರನ್ನೋ ಮೇಲಕ್ಕೆತ್ತಿ ಮೆರೆಸುವನು. ತನ್ನ ಸಂಬಂಧಿಕರನ್ನು (ಅವರು ಬಡವರಾದ್ದರಿಂದ) ಮರೆತುಬಿಡುವನು. ಎದುರಿಸಿದವರನ್ನು ನಿರ್ದಯದಿಂದ ಅತ್ತ ತಳ್ಳಿಬಿಡುವನು. ಇದೆಲ್ಲ ದುಡ್ಡಿನ ಮದವೇ ಹೊರತು ಬೇರೇನಿಲ್ಲ.

೮೪೦. ಹೆಣ್ಣಿಗೂ ಮಣ್ಣಿಗೂ ಉಣ್ಣದುರಿಯುಲು ಬೇಡ ।
ಹೆಣ್ಣಿನಿಂದಕೆಟ್ಟ ದಶಕಂಠ, ಕೌರವನು ।
ಮಣ್ಣಿನಿಂದ ಕೆಡನೇ? ಸರ್ವಜ್ಞ ॥

ಹೆಣ್ಣಿಗೂ ಮಣ್ಣಿಗೂ (ಅಂದರೆ ಭೂಮಿ, ದೇಶ, ರಾಜ್ಯ) ಮೋಹಿತನಾಗಿ ನಾನೇ ಭೋಗಿಸುವೆನೆಂದು ಹಾತೊರೆಯಬೇಡ. ಹೆಣ್ಣಿಗಾಗಿ ರಾವಣನು ಸತ್ತನು. ರಾಜ್ಯ ಕೊಡದಿದ್ದಕ್ಕೆ ದುರ್ಯೋಧನನು ಹಾಳಾಗಲಿಲ್ಲವೇ ?

೮೪೧. ಕಣ್ಣಿನಿಂದಲೆ ಪುಣ್ಯ । ಕಣ್ಣಿನಿಂದಲೆ ಪಾಪ ।
ಕಣ್ಣಿನಿಂದಿಹಪರವಕ್ಕು ಲೋಕಕ್ಕೆ ।
ಕಣ್ಣೆ ಕಾರಣವು ಸರ್ವಜ್ಞ ॥

ಕಣ್ಣಿನಿಂದಲೇ (ದೇವರ, ಯೋಗಿಗಳ ದರ್ಶನದಿಂದಲೇ) ಪುಣ್ಯ ಲಭಿಸುವದು. ಕಣ್ಣಿನಿಂ (ಪರಸ್ತ್ರೀ, ಪರಧನ ಪಾಪಕೃತ್ಯಗಳನ್ನು ನೋಡಿ) ದಲೇ ಪಾಪಗಳು ಘಟಿಸುವವು. ಕಣ್ಣಿನ ಕ್ರಿಯೆಯಿಂದ ಇಹಪರಗಳ ಸಾಧನಗಳಾಗುವವು. ಆದ್ದರಿಂದ ಎಲ್ಲದಕ್ಕೂ ಕಣ್ಣೇ ಕಾರಣ.

೮೪೨. ಕತ್ತಿಲಾದಾಗಾಯ । ನುತ್ತಿರದೆ ಮಾಯುವದು ।
ಸುತ್ತಲಾಡುತಿಹ ಜಿಹ್ವೆಯ ಗಾಯವು ।
ನಿತ್ಯಕುಬಿಡದು ಸರ್ವಜ್ಞ ॥

ಖಡ್ಗದಿಂದ ಆದಂಥ ಗಾಯವು ಕಾಲಕ್ರಮೇಣ ಮಾಯವಾಗುವದು. ಆದರೆ (ಸುತ್ತಲಾಡುತಿಹ) ಸಿಕ್ಕಂತೆ ನುಡಿಯುವ ನಾಲಿಗೆಯಿಂದ ಆದ ಮನಸ್ಸಿನ (ನೋವು) ಗಾಯವು ಪ್ರತಿನಿತ್ಯವೂ ವೇದನೆಯನ್ನು ಕೊಡುವದು. (ಅದು ಎಂದೂ ಮಾಯವಾಗುವದಿಲ್ಲ.)

೪೪೩. ಬಂಧುಬಳಗವಕೂಡಿ | ಹೊಂದಿ ಜೋಗುಳಪಾಡಿ |
ಹಿಂದೆಸತ್ತವರ ಹೆಸರಿಟ್ಟು ಗುಗ್ಗರಿಯ |
ತಿಂದುತೂಗುವರು ಸರ್ವಜ್ಞ ||

(ಮನೆಯಲ್ಲಿ ಕೂಸು ಹುಟ್ಟಿದರೆ) ಎಲ್ಲ ಬಂಧುಬಳಗದವರನ್ನು ಕರೆಯಿಸಿ (ಅದನ್ನು ತೊಟ್ಟಿಲಲ್ಲಿ ಮಲಗಿಸಿ) ಜೋಗುಳವನ್ನು ಹಾಡುವರು. ಅದಕ್ಕೆ (ಹಿಂದೆ ಸತ್ತವರ) ಹಿರಿಯರ ಹೆಸರನ್ನೇ ಇಟ್ಟು ಕಡ್ಲಿಯ ಉಸುಳಿಯನ್ನುತಿಂದು ತೊಟ್ಟಿಲು ತೂಗುವರು.

೪೪೪. ಭೂಪತಿಗೆದಳಲೇಸು | ಆಪತ್ತಿಗ್ಹಣಲೇಸು |
ಕೋಪವನುಕಳೆವಸತಿ ಲೇಸು ಶಿಶುವಿಗೆ |
ಜೋಪಾನಲೇಸು ಸರ್ವಜ್ಞ ||

ಭೂಮಿಯ ಒಡೆಯನಾದ ರಾಜನಿಗೆ ಸೈನ್ಯವಿರಲೇಬೇಕು. ಆಪತ್ಕಾಲಕ್ಕೆ ಉಪಯೋಗಿಸಲು ದುಡ್ಡು ಇಟ್ಟಿರಬೇಕು. ಸಿಟ್ಟು ಬಂದಾಗ ಶಾಂತಗೊಳಿಸುವದನ್ನರಿತ ಹೆಂಡತಿಯಿದ್ದರೆ ಸಂಸಾರದಲ್ಲಿ ಸುಖವುಂಟು. ಅದರಂತೆ ಕೂಸು ಆರೈಕೆಯಿದ್ದರೆ ಮಾತ್ರ ಬೆಳೆದು ದೊಡ್ಡದಾಗುವದು.

೪೪೫, ಕ್ರೀಡೆಯಲಿ ಬಾಲತ್ವ | ಪ್ರೌಢಿಯಲಿ ತರುಣತ್ವ |
ಗಾಢಚಿಂತೆಯಲಿ ವೃದ್ಧತ್ವದಿಂಸುಡು |
ಗಾಡಿಗೆಯುಡೆಹರು ಸರ್ವಜ್ಞ ||

ಬಾಲಕನಿರುವಾಗ ಆಟಪಾಟಗಳಲ್ಲಿ ತಾರುಣ್ಯದಲ್ಲಿದ್ದಾಗ ಸತಿಸುತರೊಡನೇ ಸುಖಿಸುವದು. ಅಗಾಧವಾದ ಚಿಂತೆಯು ಆವರಿಸಿತೆಂದರೆ ಮುಪ್ಪು ಬಂದು ಆ ಮುಪ್ಪಿನಿಂದಲೇ ಜೀರ್ಣನಾಗಿ ಕೊನೆಗೊಮ್ಮೆ ಸುಡುಗಾಡು ಕಾಣುವನು. (ಸಾಯುವನು.)

೪೪೬. ಮದ್ದು ಮೆಲ್ಲುವನು ಪ್ರ | ಬುದ್ಧನೆಂದೆನಬೇಡ |
ಮದ್ದುಸಂಕಟವು ಹೆಚ್ಚಿಸಲು ಹೆಡಕತ್ತ, ಗುದ್ದಿ |
ಗುದ್ದಿಕೊಳುತಿಹನು ಸರ್ವಜ್ಞ ||

ವಯಸ್ಸಿಗೆ ಬಂದವನಾಗಿದ್ದರೂ ಅಫು ತಿನ್ನುವಂಥವನು ಬುದ್ಧಿವಂತನೆಂದುಕರೆಯಬೇಡ. ಆಫೀಮು ಹೊಟ್ಟೆಯೊಳಗೆಹೋಗಿ ಸಂಕಟವನ್ನುಹುಟ್ಟಿಸಿ ಹೆಚ್ಚಿಸುತ್ತಿದ್ದಾಗ ಅದನ್ನು ತಾಳಿಕೊಳ್ಳಲಾರದೇ ತಾನೇ ಪಕ್ಕಡಿಗಳನ್ನು ಮತ್ತು ಕುತ್ತಿಗೆಯ ಹಿಂಭಾಗದ ತಳದಲ್ಲಿ ಗುದ್ದಿಕೊಳ್ಳತೊಡಗುವನು.

೪೪೭. ಸುರೆಯು ಸೇವಿಸುವವನ | ಸುರಿಗೆಯುನು ಪಿಡಿಸವನ |
ದೊರೆಯೊಲುಮೆಗಾಗಿ ಹೆಣಗುವನ ಕಾಯುುವದು |
ಸೊರಗಿ ಸಾಯುುವದು ಸರ್ವಜ್ಞ ||

ಸೆರೆ ಸಿಂದಿಗಳನ್ನು ಕುಡಿಯುುವದನ್ನು ಬಿಡಿಸುವದೂ ಖಡ್ಗಧಾರಿಯನ್ನು ಕಾಯುುವದೂ ಅರಸನ ಪ್ರೀತಿ ಸಂಪಾದಿಸಲು ಹಾತೊರೆಯುುವವನ ಮನಸ್ಸನ್ನು ತಿರುಗಿಸುವದೆಂದರೆ ಸೊರಗಿ ಸತ್ತಂತೆಯೇ ಸರಿ. (ಇವಾವೂ ಸಾಧ್ಯವಿಲ್ಲ ಎಂದರ್ಥ.)

೪೪೮. ಮಧ್ಯಪಾನವಮಾಡಿ | ಇದ್ದುದೆಲ್ಲವನೀಗಿ |
ಬಿದ್ದುಬರುವವನ ಸದ್ದಡಗಿ ಸಂತಾನ |
ನೆದ್ದುಹೋಗುವದು ಸರ್ವಜ್ಞ ||

ಸೆರೆ ಸಿಂದಿ·ಕುಡಿದು ತನ್ನಲ್ಲಿಯ ಎಲ್ಲಧನವನ್ನು ಹಾಳುಮಾಡಿಕೊಂಡು ಎಡವುತ್ತ ಬೀಳುತ್ತ ಬರುವವನ ಶಕ್ತಿಯೆಲ್ಲವೂ ಹಾಳಾಗುವದು. ಇಷ್ಟೇ ಅಲ್ಲ ಅವನ ಸಂತಾನವೇ ನಷ್ಟವಾಗುವದು.

೪೪೯. ಭಂಗಿಯುನು ಸೇದುವನ | ಭಂಗಿವನು ಏನೆಂಬೆ |
ಭಂಗಿಯುಗುಂಗು ತಲೆಗೇರಲಾಡುತಿಹ |
ಮಂಗನಂತಿಹನು ಸರ್ವಜ್ಞ ||

ಭಂಗಿಯನ್ನು ಸೇದುವವನ ಹಣೇಬರಹವನ್ನು ಏನೆಂದು ವರ್ಣಿಸಲಿ. (ಎಂದು ಸರ್ವಜ್ಞನು ಅನ್ನುತ್ತಾನೆ.) ಭಂಗಿಯ ಗುಂಗು ತಲೆಗೇರಿದಾಗ ಅವನು ಆಟಗಾರನ ಕೈಯಲ್ಲಿಯ ಮಂಗನಂತೆ ಜಿಗಿದಾಡುತ್ತಾನೆ.

೪೫೦. ಲೆತ್ತವೂ ಕುತ್ತವೂ | ಹತ್ತಿದೊಡೆ ಅಳಿವಲ್ಲ |
ಕುತ್ತದಿಂದೇಹ ಬಡವಕ್ಕು, ಲೆತ್ತದಿಂ |
ಬತ್ತಲೆಯುಕ್ಕು ಸರ್ವಜ್ಞ ||

ಲೆತ್ತದಾಟದ ಚಟವೂ ಆಪತ್ತು ಸಂಕಟಗಳೂ ಅಂಟಿಕೊಂಡರೆ ಅವುಗಳನ್ನು ಬಿಡಿಸುವದು ಶಕ್ಯವಿಲ್ಲ. ಆಪತ್ತು ಸಂಕಟಗಳಿಂದ ದೇಹವು ಸೊರಗುವದು. ಲೆತ್ತನಾಟದಿಂದ ಮನುಷ್ಯನು ಸರ್ವವನ್ನು ಕಳೆದುಕೊಂಡು ಬತ್ತಲೆಯಾಗಿಬಿಡುವನು.

೭೫೧. ಆಡಿ ನಳಕೆಟ್ಟ ನು । ತ್ತಾಡಿ ಧರ್ಮಜ ಕೆಟ್ಟ ।
ನೋಡಿದ ನಾಲ್ವರು ತಿರಿದುಣಲು ಲೆತ್ತವನು ।
ಆಡಬೇಡೆಂದ ಸರ್ವಜ್ಞ ॥

(ಲೆತ್ತವನ್ನು) ಆಡಿ ನಳಮಹಾರಾಜನು ಪಡಬಾರದ ಕಷ್ಟಪಟ್ಟನು. ಧರ್ಮರಾಜನು ರಾಜ್ಯ ಕಳೆದುಕೊಂಡು ಅಡವಿ ಸೇರಿದನು. (ಇಷ್ಟೇ ಅಲ್ಲ ಲೆತ್ತವನ್ನಾಡುವದನ್ನು) ನೋಡುತ್ತಿದ್ದ ಉಳಿದ ನಾಲ್ಕು ಮಂದಿ ಪಾಂಡವರು ಸಹ ತಿರಕೊಂಡು ತಿನ್ನಬೇಕಾಯಿತು. ಆದುದರಿಂದ ಲೆತ್ತವನ್ನು ಸರ್ವಥಾ ಆಡಬಾರದು.

೭೫೨. ಊರೆಲ್ಲನೆಂಟರು । ಕೇರಿಯುಲ್ಲವು ಬಳಗ ।
ಧಾರುಣಿಯು ಎಲ್ಲ ಕುಲದೈವವಾಗಿನ್ನು ।
ಯಾರನ್ನು ಬಿಡಲೋ ಸರ್ವಜ್ಞ ॥

ಊರತುಂಬೆಲ್ಲ ಆಪ್ತೇಷ್ಟರೇ ಇರುವರು. ನಮ್ಮ ಓಲಗದಲ್ಲಿರುವವರು ರಕ್ತಸಂಬಂಧಿಕರು. ಭೂಮಿಯ ಮೇಲಿದ್ದುದು ನಮ್ಮ ಕುಲದೈವವು. ಹೀಗಿರಲು ಯಾರನ್ನು ಬಿಡಲಿ ?

೭೫೩. ಚಿಂಚುವೆರಡೆತ್ತಾಗಿ । ಸಂಚಿನ ಸೊಸೆಯಾಗಿ ।
ಮಿಂಚಾಗಿ ಬರುವ ಮಗನಾದ ರಾಮನಿಗೆ ।
ಲಂಚ ತಪ್ಪುವದೇ ಸರ್ವಜ್ಞ ॥

ಪರಸ್ಪರ ಜಗಳಾಡುವ ಎತ್ತಿನ ಕಮತವೂ, ಯುಕ್ತಿ ಪ್ರಯುಕ್ತವಂತ ಸೊಸೆಯೂ, ಅರ್ಭಟಿಸುತ್ತಲೇ ಇರುವ ಮಗನೂ ಇದ್ದರೆ ಆ ಮನೆಗೆ ಸಾಲ ತರುವದು ತಪ್ಪುವದೇ ಇಲ್ಲ.

೭೫೪. ಮಾತುಬಲ್ಲಾತಂಗೆ । ಯೇತವದು ಸುರಿದಂತೆ ।
ಮಾತಾಡಲರಿಯದಾತಂಗೆ ಬರಿಯೇತ ।
ನೇತಾಡಿದಂತೆ ಸರ್ವಜ್ಞ ॥

ಚತುರತನದಲ್ಲಿ ಮಾತಾಡುವ ಜಾಣನಿದ್ದರೆ ಕಪ್ಪಲಿಯಿಂದ ನೀರು (ಸೇದಿ ತೋಟಕ್ಕೆ ಹಾಯಿಸುವಂತೆ) ಕಂಡು ಸಂತೋಷವಾಗುವದು. ಮಾತಾಡಲು ಬಾರದ ಹೆಡ್ಡನು ನಿರುಪಯೋಗಿಯಾದ ಕಪ್ಪಲಿಯ (ತೊಗಲಿನ ದೊಡ್ಡ ಚೀಲವು)ನ್ನು ಜೋತುಬಿಟ್ಟಂತೆ ನಿರರ್ಥಕವು.

## — ನಮ್ಮ ಕೆಲವು ಪ್ರಕಟಣೆಗಳು —

| | |
|---|---|
| ಪಂಚದಶಿ | ೫=೫೦ |
| ಪಂಚತಂತ್ರ | ೩=೦೦ |
| ಬೆಡಗಿನ ವಚನಗಳು | ೩=೦೦ |
| ಹರಿದಾಸರ ಕಥೆಗಳು | ೨=೦೦ |
| ಜಾನಪದ ಗೀತೆಗಳು | ೧=೫೦ |
| ಪುರಂದರದಾಸರ ಪದಗಳು | ೨=೦೦ |
| ವೇದದೊಳಗಿನ ಕಥೆಗಳು | ೧=೫೦ |
| ಪ್ರಭುದೇವರ ವಚನಗಳು | ೧=೫೦ |
| ಹಾತಿಮತಾಯಿ ಕಥೆಗಳು | ೧=೫೦ |
| ಸ್ತ್ರೀ ನೀತಿ ಕಥೆಗಳು | ೧=೫೦ |
| ಕಲ್ಯಾಣದ ಕ್ರಾಂತಿಕಾರರು | ೧=೫೦ |
| ಜಾನಪದ ಕಥೆಗಳು | ೧=೫೦ |
| ಬೀರಬಲ್ಲನ ಕಥೆಗಳು | ೧=೫೦ |
| ೬೩ ಶಿವಶರಣರ ಕಥೆಗಳು | ೧=೫೦ |
| ಭಕ್ತಿ ವಿಜಯ | ೧=೫೦ |
| ರತ್ನಮಂಜರಿ | ೧=೫೦ |
| ವೆಂಕಟೇಶ ಮಹಾತ್ಮೆ | ೧=೫೦ |
| ಹಿತೋಪದೇಶ | ೧=೫೦ |
| ಹಸ್ತ ಸಾಮುದ್ರಿಕ | ೧=೫೦ |
| ಗುರು ಚರಿತ್ರೆ | ೧=೫೦ |
| ಬೇತಾಳನ ಕಥೆಗಳು | ೧=೫೦ |
| ಮಕ್ಕಳ ಕಥೆಗಳು | ೧=೫೦ |
| ಶಿವಪುರಾಣ ಕಥಾವಳಿ | ೧=೫೦ |
| ಇಸೋಪನ ಕಥೆಗಳು | ೧=೫೦ |
| ಶಿವಲೀಲಾಮೃತ | ೧=೫೦ |
| ಸರ್ವಜ್ಞ ವಚನಗಳು | ೧=೫೦ |
| " " (ಸಂಪೂರ್ಣ) | ೨=೫೦ |
| ಗುಲ್‌ಬಕಾವಲಿ ಕಥೆಗಳು | ೧=೫೦ |
| ರಾಮಕೃಷ್ಣ ಪರಮಹಂಸ | ೧=೫೦ |
| ಸ್ವಾಮಿ ವಿವೇಕಾನಂದ | ೧=೫೦ |
| ಕನ್ನಡ ಟೀಚರ | ೨=೫೦ |
| ದೇವಿ ಮಹಾತ್ಮೆ | ೧=೫೦ |
| ತೆನ್ನಾಲಿ ರಾಮಕೃಷ್ಣನ ಕಥೆಗಳು | ೧=೫೦ |
| ಅರೇಬಿಯನ್ ನೈಟ್ಸ್ ಭಾಗ ೧ | ೧=೫೦ |
| " " ಭಾಗ ೨ | ೧=೫೦ |
| ಯೋಗಾಸನ ಹಾಗೂ ಬ್ರಹ್ಮಚರ್ಯ | ೧=೫೦ |
| ಭಟ್ಟಿ ವಿಕ್ರಮಾದಿತ್ಯನ ಕಥೆಗಳು | ೧=೫೦ |
| ಕನ್ನಡ–ಇಂಗ್ಲೀಷ ಟೀಚರ | ೧=೫೦ |
| ಕನ್ನಡ–ಹಿಂದಿ ಸ್ವಯಂಬೋಧೆ | ೧=೫೦ |
| ಬಸವಣ್ಣನವರ ವಚನಗಳು | ೧=೫೦ |
| ಭಾಗವತದಲ್ಲಿಯ ಶೃಂಗಾರ ಕಥೆಗಳು | ೧=೫೦ |
| ಪೌರಾಣಿಕಪ್ರಣಯ ಕಥಾವಳಿ | ೧=೫೦ |
| ಶ್ರೀ ಸಿದ್ಧಾರೂಢರ ಚರಿತ್ರೆ | ೩=೭೫ |
| ಹರಿಕಥಾಮೃತ ಸಾರ | ೧=೫೦ |

**CITY BOOK STALL, HUBLI 20.**